# ಸಮರ್ಪಣ

೫



೧೯೫೪

ಶ್ರೀ ಅರವಿಂದ ಮತ್ತು ಶ್ರೀ ಮಾತಾ ಮಂಡಲ, ಹುಬ್ಬಳ್ಳಿ

# ಸಮರ್ಪಣ



ಶ್ರೀ ಅರವಿಂದ ಸಾಹಿತ್ಯದರ್ಪಣ (೧)

ಶ್ರೀ ಅರವಿಂದ ಮತ್ತು ಶ್ರೀ ಮಾತಾ ಮಂಡಲ, ಹುಬ್ಬಳ್ಳಿ

ಫೆಬ್ರುವರಿ ೨೧, ೧೯೫೫

# ನಿವೇದನೆ



೧೫ ನೆಯ ಆಗಸ್ಟ ೧೯೫೪ ಕ್ಕೆ ಪ್ರಕಟವಾಗಬೇಕಿದ್ದ 'ಸಮರ್ಪಣ'ದ ೫ನೆಯ ಸಂಪುಟವು ೨೧ ನೆಯ ಫೆಬ್ರುವರಿ ೧೯೫೫ ಕ್ಕೆ ಗ್ರಂಥದ ಆಕಾರದಲ್ಲಿ ಪ್ರಕಟವಾಗುತ್ತಿದೆ. ಇದು **'ಶ್ರೀ ಅರವಿಂದ ಸಾಹಿತ್ಯದರ್ಪಣ'** ವೆಂಬ ಹೆಸರನ್ನಾಂತ 'ಸಮರ್ಪಣ'ದ ಶ್ರೀ ಅರವಿಂದ ವಿಶೇಷಾಂಕದ ೧ನೆಯ ಭಾಗವು. ಗ್ರಂಥದ ಯೋಜನೆ ಸುನಿಶ್ಚಿತವಾಗಿದ್ದು ಒಂದಕ್ಕಿಂತ ಹೆಚ್ಚು ಭಾಗಗಳಲ್ಲಿ ಅದು ಪ್ರಕಟವಾಗಲಿದೆ. 'ಶ್ರೀ ಅರವಿಂದ ಸಾಹಿತ್ಯದರ್ಪಣ'ವೆಂಬ ಈ ಗ್ರಂಥದಲ್ಲಿಯ ಲೇಖಗಳೆಲ್ಲ ಶ್ರೀ ಅರವಿಂದರವೇ ಆಗಿದ್ದು ಅವರ ಮೂಲಸಾಹಿತ್ಯದ ವ್ಯಾಪ್ತಿಯ ಯಥಾರ್ಥ ಪರಿಚಯವು ಈ ಗ್ರಂಥದ ಉದ್ದೇಶವಾಗಿದೆ.

ಈ ಗ್ರಂಥದಲ್ಲಿ ಪ್ರಾಸ್ತಾವಿಕ, ಪರಂಪರೆ, ಮಧ್ಯಂತರ, ಪಾರಮಾರ್ಥಿಕ ಸಂಸ್ಕೃತಿಯ ವ್ಯಾಪ್ತಿ, ವಿಶಾಲ ಜಗತ್ತು, ವಾಙ್ಮಯ ಎಂಬುದಾಗಿ ಬೇರೆ ಬೇರೆ ವಿಭಾಗಗಳಿವೆ. ಪ್ರಾಸ್ತಾವಿಕ ವಿಭಾಗದ ೩ ಲೇಖನಗಳೂ ಪರಂಪರಾ ವಿಭಾಗದ ೩ ಲೇಖನಗಳೂ ಇದೀಗ ಪ್ರಕಟವಾಗಿದ್ದು ಉಳಿದ ಸುಮಾರು ೨೪ ಲೇಖನಗಳು ಇನ್ನು ಮುಂದೆ ಯಥಾನುಕೂಲವಾಗಿ ಬೇಗ ಬೇಗನೆ ಅಚ್ಚಾಗುವವು.

**ಶ್ರೀ ಅರವಿಂದ ಮತ್ತು ಶ್ರೀ ಮಾತಾ ಮಂಡಲ, ಹುಬ್ಬಳ್ಳಿ.**

# ಪ ರಿ ವಿ ಡಿ

# ನಮ್ಮ ಧ್ಯೇಯ

**ಶ್ರೀ ಅರವಿಂದರು**

## ಮಾನವಕುಲದ ಅವಿರತ ಪ್ರಗತಿ

ಮಾನವಕುಲದ ಎಡೆಬಿಡದ ಮುನ್ನಡೆಯಲ್ಲಿ ನಮಗೆ ವಿಶ್ವಾಸವಿದೆ. ಮುನ್ನಡೆ ಎಂದರೆ ಜೀವನದಲ್ಲಿ ಚಿತ್ತ*ದ ವಿಕಾಸ ಎಂದು ನಮ್ಮ ಭಾವನೆ. ಕೆಲವೊಮ್ಮೆ ಚಿತ್ತವು ಸ್ಪಷ್ಟವಾಗಿ ಹೊರಗೆ ಕಾಣಿಸಿಕೊಳ್ಳುತ್ತದೆ. ಮತ್ತೊಮ್ಮೆ ಒಳಗೆ ಮುಳುಗಿ ಕೊಂಡು ಬಾಹ್ಯವಾದ ಚಲನ ಶಕ್ತಿಗಳ ಮತ್ತು ಹಿತಾರ್ಥಗಳ ಹಿಂಬದಿಯಲ್ಲಿದ್ದು ಅವುಗಳನ್ನು ಪ್ರಚೋದಗೊಳಿಸುತ್ತದೆ. ಹೀಗೆ ಚಿತ್ತ ಒಳಗೆ ಮುಳುಗಿಕೊಂಡಾಗ ತೋರಿಕೆಗೆ ಮಾನವ ಪ್ರಗತಿ ಕುಂಠಿತವಾದದ್ದಾಗಿ ಅಥವಾ ಮಂದಗತಿಯುಳ್ಳದ್ದಾಗಿ ಭಾಸವಾಗುತ್ತದೆ. ಇದು ಮಾನವಲೋಕದ ನಟ್ಟಿರುಳು ಅಥವಾ ನಸುಬೆಳಕು. ಈ ಕಾಲದಲ್ಲಿ ಗುಪ್ತ ಚಿತ್ತವು ತನ್ನ ಸಂಕಲ್ಪಗಳನ್ನು ಆರ್ಥಿಕ, ರಾಜಕೀಯ, ವೈಯಕ್ತಿಕ ಹಿತಾರ್ಥಗಳ ಒತ್ತಡದ ಮೂಲಕ, ಇವಕ್ಕಿಂತಲೂ ಆಳವಾದ ಹಿತಾರ್ಥಗಳನ್ನು ಗಮನಕ್ಕೆ ತಂದುಕೊಳ್ಳದ ರೀತಿಯಲ್ಲಿ, ಕ್ರಿಯಾರೂಪಕ್ಕೆ ತರುತ್ತದೆ. ಚಿತ್ತವು ಹೊರಗಡೆ ಕಾಣಿಸಿಕೊಂಡಾಗ, ಇದು ಮಾನವಲೋಕದ ದೀಪೋತ್ಸವ – ಅದರ ವಿಕಾಸ – ಅದರ ಅರುಣೋದಯ ಮತ್ತು ಅದರ ವೈಭವದ ವಸಂತ. ಚಿತ್ತದ ರೂಪ ಶಕ್ತಿಗಳು ಎಷ್ಟೆಷ್ಟು ಹೊರಗಡೆಗೆ ಹೊರ ಹೊಮ್ಮುವವೋ ಅಷ್ಟಷ್ಟು ಮಟ್ಟಿಗೆ ಈ ದೇವನಿಮಿಷಗಳಲ್ಲಿ ಮಾನವನ ಪ್ರಗತಿಯು ಮುಂದೆ ಮುಂದೆ ಸಾಗುತ್ತದೆ.

'ವ್ಯಾವಹಾರಿಕ ನಿಪುಣ'ನೆಂದುಕೊಳ್ಳುವವನು ಈ ಚಿತ್ತವೆಂಬುದನ್ನು ಕುಸುಮ ಸದೃಶವಾದುದೆಂದೂ ಜೀವನದ ಥಳುಕಿನ ಆಭರಣದಂತೆ ಬರಿಯ ಭೂಷಣ ವೆಂದೂ ರಾಜಕೀಯ, ಆರ್ಥಿಕ ಮತ್ತು ವೈಯಕ್ತಿಕ ಹಿತಾರ್ಥಗಳೇ ಮಾನವ ವ್ಯಾಪಾರಗಳ ನಿಜವಾದ ಪ್ರಚೋದಕ ಶಕ್ತಿಗಳೆಂದೂ ಭ್ರಮಿಸುತ್ತಾನೆ. ಇದ-ಕ್ಕಿಂತಲೂ ಹೆಚ್ಚಾದ ತಪ್ಪು ತಿಳಿವಳಿಕೆ ಬೇರೊಂದಿಲ್ಲ. ಈ ಪ್ರಪಂಚವು ಚೇತನಾ-ತ್ಮಕವಾದದ್ದು, ಕ್ರಿಯಾತ್ಮಕವಾದದ್ದು ಮತ್ತು ಪರಿಣಾಮಾತ್ಮಕವಾದ ಸಮಷ್ಟಿ ಎಂಬುದು ನಿಜ; ಆದರೆ ಪ್ರಾಣಶಕ್ತಿ ಮತ್ತು ಭೌತ ಶಕ್ತಿಗಳ ಮೂಲಕವಾಗಿಯೇ ತನ್ನ ನಿರೀಕ್ಷೆಗಳನ್ನು ಈಡೇರಿಸಿಕೊಳ್ಳುವ ಬಾಳು ಮಂದವಾಗುವುದು, ತಾಮಸ-ಯುತವಾಗುವುದು ಮತ್ತು ಪ್ರಮಾದಮಯವಾಗುವುದು. ಇದು ಮಾನವನನ್ನು

* ಚಿತ್ತ=Thought

ಕೇವಲ ಸಸ್ಯವರ್ಗಕ್ಕೆ ಮತ್ತು ಪಶುವರ್ಗಕ್ಕೆ ನೂಕುವ ಪ್ರಯತ್ನ. ಭೂಲೋಕವು ಜಡದ್ರವ್ಯದ ಮತ್ತು ಚೇತನ ವಸ್ತುಗಳ ವಾಸಸ್ಥಾನ ಹೌದು. ಆದರೆ ಮಾನವನು ಸಸ್ಯವೂ ಅಲ್ಲ ಪಶುವೂ ಅಲ್ಲ; ಅವನು ಚಿನ್ಮಯಸ್ವರೂಪನಾದ ಚೇತನ. ತನಗೆ ಒದಗಿರುವ ಪಾಶವೀ ಆಕೃತಿಯನ್ನು ಪರಾರ್ಥ ಸಾಧನೆಗಾಗಿ, ದೈವೀ ಸಂಪತ್ತಿನ ಪ್ರಕಟನೆಗಾಗಿ, ಉಪಯೋಗಿಸಲೆಂದೇ ಅವನಿಗೆ ಕೊಟ್ಟಿರುವದು.

## ಚಿತ್ತ - ವಿಕಾಸ

ತನ್ನಲ್ಲಿ ಅಂತರ್ಹಿತವಾದ ಚಿತ್ತ ವಿಕಾಸಕ್ಕಾಗಿ, ತಾನರಿಯದೆಯೇ ಇದ್ದರೂ, ಪ್ರಯತ್ನ ಪಡುವುದು ಮನುಷ್ಯನಿಗೆ ಸ್ವಭಾವಸಿದ್ಧವಾದದ್ದು. ಇದನ್ನು ಒಪ್ಪಿ-ಕೊಳ್ಳದ ಅಥವಾ ತಿರಸ್ಕಾರ ಮಾಡುವ 'ವ್ಯಾವಹಾರಿಕ ನಿಪುಣ'ನೂ ಸಹ ತನಗೇ ತಿಳಿಯದೆ ಅಧ್ಯಾತ್ಮದ ಸೇವೆಯನ್ನು ಮಾಡುತ್ತಿರುತ್ತಾನೆ. ಹದಗೆಟ್ಟ ಯುರೋಪ್ ಖಂಡವನ್ನು ರೂಪಿಸಿ ರೂಢಿಸಲು ಖಡ್ಗವನ್ನು ಒರೆಯಿಂದ ಎಳೆದ ಛಾರ್ಲಮೇನ್ (Charlemagne) ಯುರೋಪಿನ ಫ್ಯೂಡಲ್ ಸಮಾಜ ವ್ಯವಸ್ಥೆಗೂ ಕ್ಯಾಥೋಲಿಕ್ ಧರ್ಮದ ಪ್ರಚಾರಕ್ಕೂ ದಾರಿ ಮಾಡಿಕೊಟ್ಟನು. ಇದರ ಪ್ರಭಾವ ಮಾನವ ಇತಿ-ಹಾಸದ ಕತ್ತಲು ಕಾಲದಲ್ಲಿಯೂ ಮಾನವನ ಬೌದ್ಧಿಕ ಮತ್ತು ಆಧ್ಯಾತ್ಮಿಕ ಏಳಿಗೆಗೆ ಅವಕಾಶ ಮಾಡಿಕೊಟ್ಟಿತು. ಆದರೆ ಚಿತ್ತ ಹೊರಹೊಮ್ಮಿ ಜೀವನವನ್ನು ಪ್ರಚೋ-ದಿಸಗೊಳಿಸಿದಾಗಲೇ ಮಾನವನು ಮಾನವತ್ವದ ಪರಿಪುಷ್ಟಿಯನ್ನು ಪಡೆಯುತ್ತಾನೆ. ಪ್ರಗತಿಪಥದಲ್ಲಿ ಮುನ್ನುಗ್ಗುತ್ತಾನೆ, ತನ್ನ ಜೀವನದ ಗುರಿಯನ್ನು ಮುಟ್ಟುವ ಸಲು ವಾಗಿ ನಿಸರ್ಗದ ಶಕ್ತಿಗಳನ್ನು ವಶಪಡಿಸಿಕೊಳ್ಳುತ್ತಾನೆ, ಅಥವಾ ಈ ಶಕ್ತಿಗಳ ಹಿಂದೆ ವ್ಯಾಪಿಸಿರುವ ಪ್ರಭುತತ್ತ್ವದೊಡನೆ ಮನಃಪೂರ್ವಕವಾಗಿ ಜಾಗ್ರತಾತ್ಮನಾಗಿ ಸಹಕರಿಸುತ್ತಾನೆ.

## ಏಷ್ಯ ಯುರೋಪ್ ಖಂಡಗಳಲ್ಲಿ ಕೇಂದ್ರೀಕೃತವಾದ ಚಲನೆ

ಮಾನವ ಕುಲದ ಮುನ್ನಡೆ ಸಂತತವಾಗಿ ಚಕ್ರಗತಿಯುಳ್ಳದ್ದು. ಇದರ ಛಂದೋಗತಿಯಲ್ಲಿ ಗುರು—ಲಘುಗಳು, ಪ್ರಕಾಶ—ತಿಮಿರಗಳು, ಹಗಲು-ಇರುಳುಗಳು, ಮುನ್ನಡೆ- ಹಿನ್ನಡೆಗಳು ಪ್ರಗತಿಚಕ್ರ ಮುಂದೆ ಉರುಳಲು ಸಹಾಯಕವಾಗಿವೆ. ಈ ಉತ್ಸರ್ಪಿಣಿ ಅವಸರ್ಪಿಣಿ ಕಾಲಗಳು ಭೂಲೋಕದ ಎಲ್ಲ ಕಡೆಗಳಲ್ಲೂ ಒಂದೇ ಕಾಲ ದಲ್ಲಿ ಒದಗುವದಿಲ್ಲ. ಐತಿಹಾಸಿಕ ಯುಗದಲ್ಲಿ ಈಗಿನ ಸಂಸ್ಕೃತಿಚಕ್ರದ ಪರಿವರ್ತನೆ ಯಲ್ಲಿ, ಏಷ್ಯ-ಯುರೋಪ್ ಖಂಡಗಳಲ್ಲಿ ಈ ಉತ್ಸರ್ಪಿಣಿ-ಅವಸರ್ಪಿಣಿಗಳು ಕೇಂದ್ರೀ ಕೃತವಾಗಿವೆ. ಏಷ್ಯದ ಮೇಲೆ ಬೆಳಕು ಚೆಲ್ಲಿದಾಗ ಯುರೋಪಿನ ಮೇಲೆ ನೆರಳು ಮುಚ್ಚಿತು. ಏಷ್ಯ ಸುಪ್ತವಾದಾಗ ಯುರೋಪ್ ಜಾಗ್ರತವಾಗಿದೆ; ಅಲ್ಲಿ ಬುದ್ಧಿ ವಿಕಾಸದ ಜೀವನೋತ್ಸಾಹದ ಕಾವು ಕಾಣಿಸಿಕೊಂಡಿದೆ.

## ಏಷ್ಯದ ಅಧ್ಯಾತ್ಮ ಶಕ್ತಿಯ ಹೊನಲು

ಆದರೆ ಒಂದು ಮೂಲಭೂತವಾದ ವ್ಯತ್ಯಾಸ ಮಾತ್ರ ಇಲ್ಲಿ ಕಂಡುಬರುತ್ತದೆ. ಅದೇನೆಂದರೆ ಏಷ್ಯಾ ಖಂಡವು ಮುಖ್ಯವಾಗಿ ಮಾನವನ ಅಧ್ಯಾತ್ಮ ಜೀವನದ ಪ್ರಯೋಗ ಶಾಲೆಯಾಗಿದೆ. ಯುರೋಪು ಮನುಷ್ಯನ ಬೌದ್ಧಿಕ ಮತ್ತು ವ್ಯಾವಹಾರಿಕ ನೈಪುಣ್ಯದ ಕರ್ಮಾಗಾರವಾಗಿದೆ. ಚಕ್ರನೇಮಿಕ್ರಮದಲ್ಲಿ ಉಚ್ಚಗತಿಗೆ ಬಂದ ಏಷ್ಯಾಖಂಡವು ಅಧ್ಯಾತ್ಮದ ಉಗ್ರಾಣವಾಗಿ ಪರಿಣಮಿಸಿತು. ಒಮ್ಮೊಮ್ಮೆ ಪ್ರವೃತ್ತಿ ಪರವಾಗಿಯೂ ಒಮ್ಮೊಮ್ಮೆ ನಿವೃತ್ತಿಪರವಾಗಿಯೂ ಏಷ್ಯದ ಮನಸ್ಸು ಒಲಿದಿದೆ. ಮೂರು ನಾಲ್ಕು ಸಲ ಅಧ್ಯಾತ್ಮ ಶಕ್ತಿಯ ಹೊನಲು ಏಷ್ಯದಿಂದ ಯುರೋಪಿನ ಕಡೆಗೆ ಹರಿಯಿತು. ಆದರೆ ಪ್ರತಿ ಸಾರಿಯೂ ಯುರೋಪು ಇದನ್ನು ತಿರಸ್ಕಾರಭಾವದಿಂದ ಕಡೆಗಂಡಿದೆ. ವಿಧಿಯಿಲ್ಲದಿದ್ದಾಗ ಈ ಹೊಸ ಶಕ್ತಿಯನ್ನು ಬೌದ್ಧಿಕ ಮತ್ತು ಭೌತಿಕ ಪ್ರಗತಿಗೆ ಮಾತ್ರ ಉಪಯೋಗಿಸಿಕೊಂಡಿದೆ. ಈ ವಿಷಯದಲ್ಲಿ ಪ್ರಥಮ ಪ್ರಯತ್ನವೆಂದರೆ ಈಜಿಪ್ಟ, ಕಾಲ್ಡಿಯಾ, ಭಾರತ ಇವುಗಳ ವಿವೇಕವನ್ನು ಪೈಥೆಗೊರಾಸ್, ಪ್ಲೇಟೊ ಮತ್ತು ನಿಯೋಪ್ಲೇಟೋನಿಸ್ಟರು ತಮ್ಮ ತತ್ತ್ವಜ್ಞಾನದ ಮೂಲಕ ಭಟ್ಟಿ ಇಳಿಸಿಕೊಂಡದ್ದು. ಇದರ ಫಲಿತಾಂಶವೇ ಗ್ರೀಕರ ಮತ್ತು ರೋಮನ್ನರ ಉಜ್ವಲ ಬೌದ್ಧಿಕ ಸಂಸ್ಕೃತಿ. ಇದು ಎರಡನೆಯ ಪ್ರಯತ್ನಕ್ಕೆ ದಾರಿಮಾಡಿಕೊಟ್ಟಿತು. ಅದೆಂದರೆ ಸೆಮಿಟಿಕ್ ಸ್ವಭಾವದೊಳಗಿಂದ ಸೋಸುತ್ತ ರೂಪಗೊಂಡ ಬೌದ್ಧ ವೈಷ್ಣವ ಮತ ಪ್ರಚೋದಿತವಾದ ಕ್ರೈಸ್ತಧರ್ಮ. ಕ್ರೈಸ್ತಧರ್ಮವು ಯುರೋಪಿನ ಮನಸ್ಸನ್ನು ಸೆರೆಹಿಡಿದು ಅಧ್ಯಾತ್ಮದ ಮತ್ತು ವೈರಾಗ್ಯದ ಕಡೆಗೆ ಸಂಪೂರ್ಣವಾಗಿ ಒಲಿಸಿಕೊಳ್ಳುವದರಲ್ಲಿತ್ತು. ಅಷ್ಟರೊಳಗೆ ಯುರೋಪಿನ ಕ್ರೈಸ್ತಮತಾಚಾರ್ಯರಿಂದಲೇ ವಿದ್ರೂಪಗೊಂಡ ಕ್ರೈಸ್ತವೇದಾಂತದ ಪ್ರಭಾವದಿಂದಾಗಿ ಇದು ತಪ್ಪಿ ಅಸಂಸ್ಕೃತ ಜರ್ಮನ್ ಸಂಸ್ಕೃತಿಗೆ ಕ್ರೈಸ್ತಧರ್ಮವು ತುತ್ತಾಯಿತು. ಕ್ರೈಸ್ತ ಮನೋಭಾವವೂ ಜರ್ಮನ್ ಮನೋಭಾವವೂ ಪರಸ್ಪರ ವಿರುದ್ಧವಾದವುಗಳು.

ಮೂರನೆಯ ಪ್ರಯತ್ನವೆಂದರೆ ಸ್ಪೇನಿನ ಮೇಲೆ ಮತ್ತು ಮೆಡಿಟರೇನಿಯನ್ ಕರಾವಳಿಯ ಮೇಲೆ ಇಸ್ಲಾಂ ಸಂಸ್ಕೃತಿಯ ದಾಳಿ. ಇದರಲ್ಲಿ ಒಂದು ವಿಲಕ್ಷಣವಾದ ವಿಷಯವೇನೆಂದರೆ ಏಷ್ಯದ ಒಂದು ಸಂಸ್ಕೃತಿ ಯುರೋಪಿನಲ್ಲಿ ತನ್ನ ವ್ಯಾಪ್ತಿಯನ್ನು ಕಲ್ಪನಾ ಪ್ರಸಾರದ ಶಾಂತಿಯುತ ರೀತಿಯಲ್ಲಿ ಸಿದ್ಧಿಸಿಕೊಳ್ಳುವ ಬದಲು ಯುರೋಪಿಗೆ ವೈಶಿಷ್ಟ್ಯವಾದ ಭೌತಿಕ ಮತ್ತು ರಾಜಕೀಯ ಆಕ್ರಮಣದ ಪದ್ಧತಿಯಿಂದ ಸಿದ್ಧಿಸಿಕೊಂಡದ್ದು. ಈ ಮಿಲನದ ಫಲಿತಾಂಶವೇನೆಂದರೆ ಮಧ್ಯಕಾಲದ ಯುರೋಪಿನ ರಾಜಕೀಯ ಮತ್ತು ಧಾರ್ಮಿಕ ಜಾಗ್ರತಿ ಮತ್ತು ಅರ್ವಾಚೀನ ಆಲೋಚನೆ-ವಿಜ್ಞಾನಗಳ ಅಸ್ಪಷ್ಟ ಉಪಕ್ರಮ.

ನಾಲ್ಕನೆಯ ಮತ್ತು ಕೊನೆಯ ಪ್ರಯತ್ನ. ಇದು ಇನ್ನೂ ಆರಂಭದೆಶೆಯಲ್ಲಿದೆ.

ಗಲಭೆ ಗಲಾಟೆಗಳಿಲ್ಲದೆ ಭಾರತದ ವೈಶಿಷ್ಟ್ಯವಾದ ಧ್ಯಾನ ಚಿಂತನೆಗಳು ಯುರೋಪನ್ನು ಜರ್ಮನರ ಅಧ್ಯಾತ್ಮ ಶಾಸ್ತ್ರದ ಮೂಲಕ ಪ್ರವೇಶ ಮಾಡಿದ ನಂತರ ತನ್ನ ಸೂಕ್ಷ್ಮಪ್ರಭಾವದ ಪರಿಣಾಮವಾಗಿ ಕೆಲ್ಟಿಕ್, ಸ್ಕೆಂಡಿನೇವಿಯನ್ ಮತ್ತು ಸ್ಲೆವೋನಿಕ್ ಧ್ಯೇಯವಾದ, ಅನುಭಾವವಾದ ಮತಧರ್ಮ ತತ್ತ್ವಗಳ ಮೂಲಕವಾಗಿ ಮತ್ತು ಇನ್ನಿಷ್ಟು ವ್ಯಕ್ತವಾಗಿ ಯುರೋಪ್-ಅಮೇರಿಕೆಗಳಲ್ಲಿ ಬೌದ್ಧಮತ, ಥಿಯಾಸಫಿ, ವೇದಾಂತಮತ, ಬಾಹಾಯ್‌ಮತ, ಮತ್ತಿತರ ಪ್ರಾಚ್ಯ ಪ್ರಭಾವಜನ್ಯವಾದ ಆಲೋಚನಾ ತರಂಗಗಳಲ್ಲಿ ಕಾಣಿಸಿಕೊಂಡಿತು.

## ಏಷ್ಯದ ಮೇಲೆ ಯುರೋಪಿನ ಪ್ರತಿಕ್ರಿಯೆ

ಇನ್ನೊಂದು ಕಡೆ ಏಷ್ಯದ ಮೇಲೆ ಯುರೋಪು ಮಾಡಿದ ಎರಡು ಪ್ರತಿಕ್ರಿಯೆಗಳಿವೆ. ಮೊದಲನೆಯದು ಪಶ್ಚಿಮ ಏಷ್ಯದ ಮೇಲೆ ಅಲೆಕ್ಸೇಂಡರನ ದಂಡಯಾತ್ರೆಯಿಂದ ಆದ ಪರಿಣಾಮ. ಇದರಿಂದ ಭಾರತದಲ್ಲಿ ಕೆರಳಿದ ಪ್ರತಿಕ್ರಿಯೆಯ ಫಲವಾಗಿ ಪ್ರಾಚ್ಯ ಸಂಸ್ಕೃತಿಯು ಇಸ್ಲಾಂ ಸಂಸ್ಕೃತಿಯ ಮೂಲಕ ಮಧ್ಯಕಾಲದ ಯುರೋಪನ್ನು ಪ್ರವೇಶಿಸಿತು. ಎರಡನೆಯದು, ಪ್ರಕೃತ ಕಾಲದ ಯುರೋಪಿನ ವಾಣಿಜ್ಯ, ರಾಜಕೀಯ, ವೈಜ್ಞಾನಿಕ ಧ್ಯೇಯಗಳು ಪ್ರಾಚ್ಯಖಂಡದ ನೈತಿಕ, ಕಲಾತ್ಮಕ ಮತ್ತು ಆಧ್ಯಾತ್ಮಿಕ ತತ್ತ್ವಗಳ ಮೇಲೆ ಮಾಡಿದ ಆಕ್ರಮಣ.

## ಏಷ್ಯ ಯುರೋಪಗಳ ಪರಸ್ಪರ ಪ್ರಭಾವ

ಈ ಪರಸ್ಪರ ವ್ಯಾಪಕತೆಯ ವೈಲಕ್ಷಣ್ಯಗಳು ಯಾವುವೆಂದರೆ: ಒಂದು, ಇವೆರಡರ ಪರಸ್ಪರ ದಾಳಿ ಒಂದೇ ಕಾಲದಲ್ಲಿ ಆದದ್ದು, ಮತ್ತು ಎರಡನೆಯದು, ತಮ್ಮ ಪ್ರತಿಕಕ್ಷಿಯನ್ನು ಅದರ ವೈಪರೀತ್ಯ ರೂಪದಲ್ಲಿ ಸಂಧಿಸಿದುದು. ಬೌದ್ಧಿಕ ಮತ್ತು ಭೌತಿಕ ಪ್ರವೃತ್ತಿಪ್ರಧಾನವಾದ ಯುರೋಪು ಏಷ್ಯದ ಮತ್ತು ಪ್ರಪಂಚದ ಆಧ್ಯಾತ್ಮಿಕ ಹೃದಯವಾದ ಭಾರತವನ್ನು ಆಧ್ಯಾತ್ಮಿಕ ಪ್ರಯೋಗವೊಂದರ ಅವಸಾನ ಕಾಲದಲ್ಲಿ ಸಂಧಿಸಿತು. ಲೌಕಿಕ ಮತ್ತು ಬೌದ್ಧಿಕ ಪ್ರಗತಿಯ ಕಡೆಗೆ ಸಂಪೂರ್ಣವಾಗಿ ವಿಮುಖವಾದ ಆಧ್ಯಾತ್ಮಿಕ ಚಿತ್ತವೃತ್ತಿ ಭಾರತದ್ದಾಗಿದ್ದಿತು. ಪ್ರಾಚ್ಯ ಧ್ಯಾನಚಿಂತನೆಗಳು ಯುರೋಪನ್ನು ಪ್ರವೇಶಿಸಿದಾಗ ಯುರೋಪು ಮತಧರ್ಮವನ್ನು ಬುದ್ಧಿಭ್ರಮಣೆಯೆಂದೂ, ತತ್ತ್ವಜ್ಞಾನವನ್ನು ನಿಷ್ಫಲ ವಾದಜಾಲವೆಂದೂ ಭಾವಿಸಲು ಮೊದಲುಮಾಡಿತು. ಇವುಗಳಿಂದ ವಿಮುಖವಾದ ಯುರೋಪು ಮಾನವನ ಬುದ್ಧಿಶಕ್ತಿಯ ಬೆಳವಣಿಗೆಗೆ ಹೆಚ್ಚು ಹೆಚ್ಚಾಗಿ ಗಮನಕೊಟ್ಟು ಇಂದ್ರಿಯಗೋಚರವಾದ ನಿಸರ್ಗದ ನಿಯಮಗಳ ಅಧ್ಯಯನದಿಂದ ಮಾನವನ ಶಾರೀರಿಕ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಪಾಯದ ಮೇಲೆ ಉತ್ಕೃಷ್ಟ ನಾಗರಿಕತೆಯನ್ನು ಕಟ್ಟುವ ಪ್ರಯತ್ನದಲ್ಲಿ ತೊಡಗಿದ್ದಿತು.

ಈ ಬೃಹದ್‌ಪ್ರಯತ್ನ ಈಗ ಮುಗಿದಿದೆ. ದಿವಾಳಿಯಾಗಿದ್ದರೂ ದಿವಾಳಿತನವನ್ನು ಇದು ಮರೆಮಾಜದೆ ಸಾರಿ ಹೇಳಿಲ್ಲ. ಇದರ ಜನ್ಮ ರಾಕ್ಷಸನ ಜನ್ಮದಂತೆ ಘೋರ ಮತ್ತು ಅನೈಸರ್ಗಿಕ; ಹಾಗೆಯೇ ಇದರ ಮರಣವೂ ಘೋರ ಮತ್ತು ಅನೈಸರ್ಗಿಕ. ಇನ್ನೊಂದು ಕಡೆ, ಅಧ್ಯಾತ್ಮದ ಅತಿರೇಕದಿಂದ ಭಾರತದ ಪ್ರಯತ್ನವೂ ನಿಷ್ಫಲವಾಗಿ ದಿವಾಳಿ ತೆಗೆದದ್ದು. ಇದರಿಂದ ಹಲಕೆಲವು ವ್ಯಕ್ತಿಗಳು ಉನ್ನತ ಮಟ್ಟಕ್ಕೆ ಏರಿದರು. ಆದರೆ ಜನಾರ್ದನನನ್ನು ಅರಸುವ ಪ್ರಯತ್ನದಲ್ಲಿ ಜನತೆಯನ್ನು ತಿರಸ್ಕಾರಮಾಡಿ ಜನಾಂಗವು ಅಧೋಗತಿಗೆ ಇಳಿಯಿತು. ಯುರೋಪಿನ ಮತ್ತು ಭಾರತದ ಪ್ರಯತ್ನಗಳು ಸ್ತುತ್ಯವಾದವು. ಭಾರತೀಯ ಕೇವಲ ಅಧ್ಯಾತ್ಮನಿಷ್ಠೆ ಮತ್ತು ಯುರೋಪಿನ ಬುದ್ಧಿಪ್ರಾಧಾನ್ಯದ ಪ್ರಾಮಾಣಿಕತೆ ಮತ್ತು ಸತ್ಯಶೋಧನದ ತವಕ ಇವೆರಡೂ ನಾವು ಮೆಚ್ಚತಕ್ಕವೇ. ಇವೆರಡರಿಂದಲೂ ಆಶ್ಚರ್ಯಕಾರಕವಾದ ಕೆಲಸಗಳು ನಡೆದಿವೆ. ಆದರೆ ಪ್ರಕೃತಿ-ಪುರುಷ ತತ್ತ್ವಗಳು ಏಕಪ್ರಕಾರವಾದ ಅಧ್ಯಾತ್ಮದ ಉಜ್ವಲತೆಯನ್ನೂ ಬುದ್ಧಿಯ ವ್ಯವಸಾಯವೈಭವವನ್ನೂ ಮೀರಿದ ಶಕ್ತಿಗಳು.

ಮಾನವಕುಲದ ಮುಕ್ತಿ ಪಾರಮಾರ್ಥಿಕ ಮತ್ತು ವ್ಯಾವಹಾರಿಕ ತತ್ತ್ವಗಳ ಹೆಚ್ಚು ವಿವೇಕಯುಕ್ತವಾದ ನೈಸರ್ಗಿಕವಾದ ಸಮನ್ವಯದಲ್ಲಿಯೆ ಇದೆ. ಇದು ವ್ಯಷ್ಟಿಯಲ್ಲಿಯೂ ಸಮಷ್ಟಿಯಲ್ಲಿಯೂ ವ್ಯಕ್ತವಾಗಬೇಕಾಗಿದೆ. ಮಾನವ ಜೀವನದ ಆಧ್ಯಾತ್ಮಿಕ ಪುರುಷಾರ್ಥವನ್ನು ಒಪ್ಪಿಕೊಂಡರೇನೇ ಯುರೋಪಿಗೆ ಕಲ್ಯಾಣಕರ; ಇಲ್ಲದಿದ್ದರೆ, ವಿವೇಕಶೂನ್ಯವಾದ ಪಾಂಡಿತ್ಯವುಳ್ಳ ಮತ್ತು ಅಧ್ಯಾತ್ಮದ ಸ್ಪರ್ಶವೇ ಇಲ್ಲದ ಸಮಾಜರಚನೆ ಆದೀತು. ಇವುಗಳ ಭಾರದಿಂದ ಪಾಶ್ಚಾತ್ಯಸಂಸ್ಕೃತಿ ಕುಸಿದು ಬೀಳುತ್ತಿದೆ. ಅಧ್ಯಾತ್ಮವನ್ನು ಅನ್ನಮಯ ಮತ್ತು ಮನೋಮಯ ಕೋಶಗಳ ಮೂಲಕವೆ ವ್ಯಕ್ತಗೊಳಿಸಬಲ್ಲೆವೆನ್ನುವ ತತ್ತ್ವವನ್ನು ಒಪ್ಪಿಕೊಂಡರೇನೇ ಅದು ಏಷ್ಯಕ್ಕೆ ಕಲ್ಯಾಣಕರ; ಇಲ್ಲದಿದ್ದರೆ, ಏಷ್ಯವು ಮಾನಸಿಕ ಮತ್ತು ದೈಹಿಕ ದೌರ್ಬಲ್ಯಕ್ಕೆ ಒಳಗಾಗಿ ಜೀವನದ ಜವಾಬ್ದಾರಿಗಳನ್ನು ಹೊರಲಾರದೆ ವಿಷಾದ-ನಿರಾಶೆಗಳ ಮಡುವಿನಲ್ಲಿ ಸಿಲುಕಿ ನುಚ್ಚುನೂರಾದೀತು. ಈಗ ಬೇಕಾದುದು ಯುರೋಪು ತನ್ನ ವೈಶಿಷ್ಟ್ಯವನ್ನು ಬಿಟ್ಟು ಏಷ್ಯದ ನಾಮರೂಪಗಳನ್ನು ಧರಿಸುವದಲ್ಲ, ಹಾಗೆಯೇ ಏಷ್ಯವೂ ತನ್ನ ಸ್ವರೂಪವನ್ನು ಮರೆಮಾಜಿಕೊಂಡು ಯುರೋಪಿನ ನಾಮರೂಪಗಳನ್ನು ಧರಿಸುವದಲ್ಲ. ಈಗ ಬೇಕಾದುದು ಈ ಎರಡು ಸಂಸ್ಕೃತಿಗಳ ಪರಸ್ಪರ ವಿನಿಮಯ, ಸಾಯುಜ್ಯ ಮತ್ತು ಸಾಮರಸ್ಯ.

ಈ ಎರಡು ದೊಡ್ಡ ಮಾನವೀ ಪ್ರಯತ್ನಗಳ ಪ್ರವಾಹಗಳನ್ನು ಒಂದುಗೂಡಿಸ ಬಲ್ಲ ಪರ್ವಕಾಲ ಚರಿತ್ರೆಯಲ್ಲಿ ಒದಗಿರುವದು ಮಾನವಕುಲದ ಭವಿಷ್ಯಕ್ಕೆ ಶುಭ ಸೂಚನೆ. ಈ ಸಮನ್ವಯವು ಸುಲಭಸಾಧ್ಯವಲ್ಲ; ಇದರಲ್ಲಿ ಆತಂಕಗಳೂ ಇವೆ. ಇಂದಿಗಿಂತಲೂ ಹೆಚ್ಚು ಪರಿಷ್ಕೃತವೂ ನೂತನವೂ ಆದ ಮಾನವಜೀವನವು ನಮ

ಆಕಾಂಕ್ಷೆಯು ಗುರಿ. ಈ ಗುರಿಯು ಮಹತ್ತರವಾದ ಜ್ಞಾನವನ್ನೂ ನಮ್ಮ ಸ್ವಭಾವ ದಲ್ಲಿ ಹುದುಗಿರುವ ಹೊಸ ಶಕ್ತಿಗಳ ಪ್ರಾದುರ್ಭಾವವನ್ನೂ ವ್ಯಕ್ತಿ-ಸಮಾಜ-ಮಾನವ ಕುಲಗಳು ಅವಲಂಬಿಸಬೇಕಾದ ಸಮ್ಯಗ್‌ಜ್ಞಾನ-ಸಮ್ಯಗ್‌ದರ್ಶನಗಳನ್ನೂ ಆಧರಿಸಿದೆ. ಇಂದಿನ ವೈಜ್ಞಾನಿಕ ಪ್ರಗತಿಯ ಮೂಲಕ ಮಾನವ ವರ್ಗವೆಲ್ಲವೂ ಒಂದೆಡೆಗೆ ಬರತೊಡಗಿದೆ. ಇದರಿಂದ ಒಳಿತೇ ಆಗಲಿ ಕೆಡಕೇ ಆಗಲಿ ಮಾನವ ವರ್ಗದ ಬಾಹ್ಯ ಭವಿಷ್ಯವನ್ನಂತೂ ಒಟ್ಟಾಗಿಯೇ ಸಾಧಿಸಬೇಕಾದ ಪ್ರಸಂಗವು ಬಂದೊದಗಿದೆ. ಪ್ರಪಂಚದ ಯಾವ ಭಾಗವೂ ಪ್ರತ್ಯೇಕವಾಗಿ ಸಿಡಿದು ನಿಂತು ಸ್ವತಂತ್ರವಾಗಿದ್ದು ಕೊಂಡು ಇತರ ಭಾಗಗಳ ಹಂಗೇ ಬೇಡವೆಂದು ಬಯಸಿ ತನ್ನ ಪ್ರಗತಿಯನ್ನು ಸಿದ್ಧಿಸಿಕೊಳ್ಳುವದು ಇನ್ನು ಮುಂದೆ ಅಸಾಧ್ಯ. ಆದರೆ ವಿಜ್ಞಾನ ಮತ್ತು ಆಧ್ಯಾತ್ಮ ಇವುಗಳ ಸಮರಸ ಸಮನ್ವಯದಿಂದ ಮಾನವ ವರ್ಗದ ಅಂತರ್ಗೂಢವಾದ ಐಕ್ಯ-ವನ್ನು ಸ್ಥಾಪಿಸಬಹುದಾದ ಸಂಭವವಿದೆ.

ಯುರೋಪಿನ ಜಾಗ್ರತಿ ಸಾಧ್ಯವಾದದ್ದು ಬಾಹ್ಯ ಜಗತ್ತಿನ ಆಗುಹೋಗು ಗಳ ಸತ್ಯಧರ್ಮಗಳನ್ನು ಕಂಡುಹಿಡಿಯಬೇಕೆಂಬ ಛಲದಿಂದ. ಮಾನವನು ತನ್ನ ಧ್ಯೇಯಗಳಿಂದಲೂ, ಸಂಘಸಂಸ್ಥೆಗಳ ಮೂಲಕವೂ ತನ್ನಲ್ಲಿ ಅಡಗಿರುವ ಶಕ್ತಿ ಸಾಮರ್ಥ್ಯಗಳನ್ನು ವಿಕಾಸಗೊಳಿಸಿಕೊಳ್ಳುವದು ಈ ಛಲದ ಮುಖ್ಯ ಧ್ಯೇಯ ವಾಯಿತು. ಈ ದಾರಿಯಲ್ಲಿ ನಡೆದರೆ ಮಾನವಪ್ರಗತಿ ಖಂಡಿತವಾಗಿಯೂ ಸಿದ್ಧಿಸ ಬಲ್ಲುದೆಂಬ ನಂಬಿಕೆ ರೂಢವಾಯಿತು.

ಈ ಅಭಿಪ್ರಾಯ ನ್ಯಾಯ್ಯವಾದದ್ದೇ; ಮತ್ತು ಇದನ್ನು ನಾವು ಸಂಪೂರ್ಣ ವಾಗಿ ಒಪ್ಪಿಕೊಳ್ಳುತ್ತೇವೆ. ಆದರೆ ಇದರ ಪ್ರಯೋಗದಲ್ಲಿ ಪ್ರಮಾದವಿದೆ. ನಾವು ಕಂಡುಹಿಡಿಯಲು ಬಯಸುವ ಋತ ಮತ್ತು ಸತ್ಯ ( Law and Truth ) ಭೌತ ಪ್ರಪಂಚದ್ದಲ್ಲ— ಇದು ಮಾನಸಿಕ ಮತ್ತು ದೈಹಿಕ ಪ್ರಪಂಚದ್ದೂ ಅಲ್ಲ. ಈ ಭೌತ ಪ್ರಪಂಚವು ಎಷ್ಟೇ ಆವಶ್ಯಕವಿದ್ದರೂ, ಈ ಮಾನಸಿಕ ಮತ್ತು ದೈಹಿಕ ಪ್ರಪಂಚ ಗಳು ಎಷ್ಟೇ ಅನಿವಾರ್ಯವಾಗಿದ್ದರೂ ಆ ಋತ-ಸತ್ಯಗಳು ಅಧ್ಯಾತ್ಮದ ಆಧಾರದ ಮೇಲೆ ಊರಿರುವವು. ಎಲ್ಲವೂ ಅಧ್ಯಾತ್ಮದ ಮೇಲೆಯೇ ಪ್ರತಿಷ್ಠಿತವಾಗಿದೆ. ವಸ್ತುಗಳಲ್ಲಿಯ ಅಧ್ಯಾತ್ಮದ ಚೈತನ್ಯವೇ ಅವುಗಳ ಎಲ್ಲ ರೂಪ-ರೂಪಾಂತರಗಳಲ್ಲಿ ವಿಕಸನಗೊಳ್ಳುತ್ತದೆ.

## ಪಡುವಣಕ್ಕೆ ಮೂಡಲಿನ ಸಂದೇಶ

ಪಡುವಣಕ್ಕೆ ಮೂಡಲಿನ ಸಂದೇಶವೇನೆಂದರೆ, “ ಮಾನವನಿಗೆ ತನ್ನನ್ನು ಅರಿತುಕೊಂಡಾಗಲೆ ಮುಕ್ತಿ ” ಮತ್ತು “ ಇಡೀ ಜಗತ್ತನ್ನು ಗೆದ್ದು ತನ್ನ ಆತ್ಮವನ್ನು ಕಳೆದುಕೊಂಡರೆ ಮಾನವನಿಗೆ ಏನು ಲಾಭ ಬಂದಂತಾಯಿತು ? ” ಈ ಸಂದೇಶವನ್ನು ಪಡುವಣವು ಕೇಳಿದೆ; ಮತ್ತು ಆ ಋತವನ್ನೂ ಸತ್ಯವನ್ನೂ ಅದು ಅರಸುತ್ತಿದೆ.

ಹಾಗು ಇಂದ್ರಿಯಗೋಚರವಾದ ತತ್ತ್ವವನ್ನು ಮೀರಿರುವ ಅತೀಂದ್ರಿಯ ತತ್ತ್ವದ ಸಾಕ್ಷ್ಯವನ್ನು ಪಡುವಣವು ಹುಡುಕುತ್ತಿದೆ. ಆದರೆ ತನ್ನ ಯಾಂತ್ರಿಕ ಪ್ರಗತಿ-ಯಿಂದಲೂ ವಿಪರೀತ ಬುದ್ಧಿಯಿಂದಲೂ ಮನಸ್ಸಿನ ಮೇಲೆ ಮಂಜು ಕವಿದಂತಾಗಿ ಕ್ಷುದ್ರವಾದ ಮಾನಸಿಕ ಸಿದ್ಧಿಗಳ ಕಡೆಗೆ ಮನಸ್ಸನ್ನು ಕೊಡುವ ಅಪಾಯವೂ ಇದೆ; ಆಧ್ಯಾತ್ಮವಿದ್ಯೆ ಭೂತವಿದ್ಯೆ ( Psychism ) ಯಲ್ಲಿ ವಿರೂಪಗೊಳ್ಳುತ್ತಿದೆ. ಯಾಂತ್ರಿಕ ಪ್ರತಿಭೆಯ ಆಗರಗಳೇ ಆದ ಇಂಗ್ಲಂಡ-ಅಮೇರಿಕೆಗಳಲ್ಲಿ ಈ ಅಪಾಯವನ್ನು ನಾವು ನೋಡುತ್ತಲಿದ್ದೇವೆ. ಅಥವಾ ವಿಮರ್ಶೆ ತತ್ತ್ವಜ್ಞಾನಗಳಲ್ಲಿ ವಿಶೇಷಜ್ಞತೆಯನ್ನು ಪಡೆದ ಜರ್ಮನಿಯಲ್ಲಿ ವಿಪರ್ಯಸ್ತ ಬುದ್ಧಿಯಮೂಲಕ ಮಿಥ್ಯಾಜ್ಞಾನದ ಅನೇಕ ಆಧ್ಯಾತ್ಮಿಕ ತತ್ತ್ವಗಳು ಹುಟ್ಟಿಕೊಂಡದ್ದು ಕಂಡುಬರುತ್ತಿದೆ.

ಏಷ್ಯದ ಬೆಳಗಿಗೆ ಕಾರಣ ಬ್ರಹ್ಮವೊಂದೇ ಸತ್ಯವೆಂಬ ದೃಢವ್ಯವಸಾಯ. ಈ ಕಲ್ಪನೆಯಲ್ಲಿ ಮಾನವನ ಮನೋಮಯ ಕೋಶವು ಆಧ್ಯಾತ್ಮ ಸತ್ಯದ ವಿಕಾಸಕ್ಕೆ ಒದಗಿ ಬರುವ ಉಪಕರಣ ಮಾತ್ರ. ಇದರ ಕಟ್ಟಳೆ-ನಿಯಮಗಳನ್ನು ತಿಳಿದುಕೊಂಡು ಈ ಅಂತಿಮ ಧ್ಯೇಯದ ಸಾಧನೆಗಾಗಿ ಅವನ್ನು ಅನ್ವಯಿಸಿಕೊಳ್ಳಬೇಕು. ಮನು-ಷ್ಯನ ಬಹಿರಂಗ ಜೀವನ ಮತ್ತು ಸಮಾಜದ ಸಂಘಸಂಸ್ಥೆಗಳು ಈ ಮಹಾಯಜ್ಞದ ಯಾಗಶಾಲೆ.

ಈ ಅಭಿಪ್ರಾಯವು ನ್ಯಾಯ್ಯವಾದುದೇ; ಮತ್ತು ಇದನ್ನು ನಾವು ಸಂಪೂರ್ಣ ವಾಗಿ ಒಪ್ಪಿಕೊಳ್ಳುತ್ತೇವೆ. ಆದರೆ ಇದನ್ನು ಪ್ರಯೋಗದಲ್ಲಿ ತರುವಾಗ, ವಿಶೇಷವಾಗಿ ಭಾರತದಲ್ಲಿ ಪ್ರಮಾದ ನಡೆದು ಹೋಯಿತು. ಆತ್ಮಶಕ್ತಿಗೂ ಅದರ ಉಪ-ಕರಣಗಳಿಗೂ ಮಧ್ಯೇ ವಿಚ್ಛೇದವುಂಟಾಯಿತು. ನಿಜವಾಗಿ ನೋಡಿದರೆ ಬಹಿರಂಗ ಜೀವನವು ಅಂತರಂಗ ಜೀವನದ ಹೊರಮೈ. ಆಧ್ಯಾತ್ಮದ ವಿಕಾಸ ಈ ಬಾಹ್ಯ ಉಪಕರಣಗಳಿಂದಲೇ ಸಾಧ್ಯ. ಪ್ರಾಚ್ಯದ ಪ್ರಾಚೀನ ಋಷಿಗಳು ಈ ಜ್ಞಾನವನ್ನು ಪಡೆದಿದ್ದು ಅದನ್ನು ಅನುಷ್ಠಾನಕ್ಕೆ ತಂದುಕೊಂಡಿದ್ದರು. ಆದರೆ ಆ ಜ್ಞಾನ ಇಂದಿನ ವಿಜ್ಞಾನದಿಂದ ಮಸುಕಾಗಿದೆ. ಇದಲ್ಲದೆ ಆ ಋಷಿಗಳ ಸಂತತಿಯವರು ಈಗ ಅದರ ಅಭ್ಯಾಸವನ್ನು ಮರೆತಿದ್ದಾರೆ.

## ಪಡುವಣವು ಮೂಡಲಿಗೆ ಇತ್ತ ಸಂದೇಶ

ಪಡುವಣವು ಮೂಡಲಿಗೆ ಇತ್ತ ಸಂದೇಶವಾದರೂ ನಿಜವಾದ ಸಂದೇಶವಾಗಿದೆ. ‘ ಮಾನವನಲ್ಲಿಯೂ ದೇವಾಂಶವಿದೆ. ಮಾನವನು ಮಾನವತ್ವದ ವಿಕಾಸದಿಂದಲೇ ದೇವತ್ವದ ಬಳಿಸಾರುತ್ತಾನೆ. ಜೀವವೇ ಶಿವ. ಜೀವದ ವಿಕಾಸವೇ ಬ್ರಹ್ಮವಿಕಾಸ ಮತ್ತು ಜೀವನದ ನಿರಾಕರಣೆಯೆಂದರೆ ಶಿವನ ನಿರಾಕರಣೆ. ಜೀವನ ಕುಂಠಿತವಾದರೆ ನಮ್ಮಲ್ಲಿರುವ ದೇವತ್ವವೂ ಕುಂಠಿತವಾಗುವದು. ’ ಇದು ಪಡುವಣದಿಂದ ಮೂಡ ಣಕ್ಕೆ ಹಿಂತಿರುಗಿ ಬಂದ ತಾರಕ ಸತ್ಯ. ಮೂಡಣವು ತನ್ನಲ್ಲಿಯೇ ಅಡಗಿಸಿಕೊಂಡಿದ್ದ

ಪರಾತ್ಪರ ಸತ್ಯವಿದು. ಇದು ಪುರಾತನ ಜ್ಞಾನ. ಮೂಡಣವು ಈ ಸಂದೇಶಕ್ಕೆ ಎಚ್ಚರಗೊಳ್ಳುತ್ತಿದೆ. ಆದರೆ ಇದರಲ್ಲಿ ಒಂದು ಅಪಾಯವಿದೆ. ಅದೆಂದರೆ ಏಷ್ಯವು ಈ ಸಂದೇಶವನ್ನು ಯುರೋಪ್ ಸಂಸ್ಕೃತಿಯ ರೂಪದಲ್ಲಿಯೇ ಸ್ವೀಕಾರ ಮಾಡುವ ಸಂಭವವಿದೆ. ತಾತ್ಕಾಲಿಕವಾಗಿ ಏಷ್ಯವು ಸ್ವಸ್ವರೂಪವನ್ನು ಮರೆತು ಪಾಶ್ಚಾತ್ಯರ ಅನುಕರಣ ಮಾಡುವದಾಗಲಿ ತನ್ನದೇ ಆದ ಉತ್ಕೃಷ್ಟ ತತ್ತ್ವಗಳ ಅಪಭ್ರಂಶ ರೂಪಗಳನ್ನು ತನ್ನ ಸಂಸ್ಕೃತಿಯಲ್ಲಿ ಬೆರಕೆಮಾಡಿಕೊಳ್ಳುವದಾಗಲಿ ಅಪಾಯವೇ ಸರಿ.

ಇಂದಿನ ಚಿಂತನೆಯ ಸಮಸ್ಯೆಯೇನೆಂದರೆ ಸರಿಯಾದ ತತ್ತ್ವಹಿತ ಪುರುಷಾರ್ಥಗಳನ್ನು ಕಂಡುಕೊಳ್ಳುವದು ; ಪುರಾತನವಾದ ಮತ್ತು ಸನಾತನವಾದ ಆಧ್ಯಾತ್ಮಿಕ ಸತ್ಯ ; ಆತ್ಮಜ್ಞಾನ ; ಮಾನವನ ಮಾನಸಿಕ ಮತ್ತು ಶಾರೀರಿಕ ಜೀವನವನ್ನು ದಿವ್ಯಗೊಳಿಸುವ ಸತ್ಯ ; ಗಾಢವಾದ ಮತ್ತು ಸತ್ತ್ವಯುತವಾದ ಯೌಗಿಕ ಮಾರ್ಗದಿಂದ ಸಿದ್ಧಗೊಳಿಸಿಕೊಂಡ ಆತ್ಮಸಂಯಮ ಆತ್ಮ ವಿಕಾಸಗಳು. ಇವುಗಳಿಂದ ಮಾನವನ ಮನೋಮಯ ಮತ್ತು ವಿಜ್ಞಾನಮಯ ಜೀವನವನ್ನು ಪರಿಪುಷ್ಟವಾದ ರೀತಿಯಲ್ಲಿ ವಿಕಸನಗೊಳಿಸುವದು ; ಮಾನವನ ಬಹಿರಂಗ ಜೀವನಕ್ಕೆ ಹೊಂದಿಕೊಂಡ ಸಮಾಜ ಸಂಸ್ಥೆಗಳನ್ನೂ ಮತ್ತಿತರ ಸಾಧನ ಸಂಪತ್ತಿಯನ್ನೂ ಆತ್ಮವಿಕಾಸಕ್ಕಾಗಿ ಅಧ್ಯಾತ್ಮ-ವಿಕಾಸಕ್ಕಾಗಿ ಅಣಿಗೊಳಿಸಿ ವ್ಯಕ್ತಿಯ ಮುಕ್ತಿ ಮತ್ತು ಸಮಾಜದ ಐಕ್ಯತೆಗಳತ್ತ ಕರೆದೊಯ್ಯುವದು ಇದರ ಧ್ಯೇಯ.

ಇದು ನಮ್ಮ ಧ್ಯೇಯ. ಇದನ್ನೇ ನಾವು ಹುಡುಕುತ್ತಿರುವುದು. ಪ್ರಪಂಚದಲ್ಲಿ ಇದೇ ಧಾಟಿಯಲ್ಲಿ ಮುಂದುವರಿಯುತ್ತಿರುವ ಅನೇಕ ಚಳುವಳಿಗಳಿವೆ. ಆದರೂ ಆಲೋಚನೆಗೆ ಅವಕಾಶವಿದೆ. ಸಮಾಧಾನಕರವಾದ ರೀತಿಯಲ್ಲಿ ಸಮಸ್ಯೆಯನ್ನು ಸಮಗ್ರವಾಗಿ ಬಗೆಹರಿಸುವ ಅವಶ್ಯಕತೆಯಿದೆ. ಸತ್ಯವನ್ನು ಹುಡುಕುವ ಭರದಲ್ಲಿ ಯಾವೊಂದು ಮತಪಂಥಕ್ಕೂ ಕಟ್ಟು ಬೀಳದಂತೆ ಸ್ವತಂತ್ರ ಸತ್ಯಾನ್ವೇಷಣೆಗೆ ಅವಕಾಶವಿದೆ.

## ಸ್ವತಂತ್ರ ಸತ್ಯಾನ್ವೇಷಣೆ

ಈ ಸತ್ಯಾನ್ವೇಷಣದ ಉದ್ಯಮವು ತತ್ತ್ವಚಿಂತನೆಗೂ ಧರ್ಮಪಂಥಕ್ಕೂ ನಿಕಟವಾಗಿ ಸಂಬಂಧಿಸಿದ್ದು. ಯಮ-ನಿಯಮಾದಿ ಮಾರ್ಗಗಳನ್ನು ತೋರಿಸಿಕೊಡುವ ಯೋಗ ಶಾಸ್ತ್ರಕ್ಕೆ ಸಂಬಂಧಪಟ್ಟದ್ದು. ಮಾನವನ ಸಾಮಾಜಿಕ ಮತ್ತು ಸಮಷ್ಟಿನಿಷ್ಠ ಜೀವನದ ಸಮಸ್ಯೆಯನ್ನು ಬಗೆಹರಿಸಲು ಈ ಭಾವನೆಗಳನ್ನು ಪ್ರಯೋಗಿಸುವುದು.

ಅಧ್ಯಾತ್ಮಾನುಭವದ ಮೇಲೆ ಊರಿದ ತತ್ತ್ವಚಿಂತನೆ ಮತ್ತು ಮತಧರ್ಮ ಇವುಗಳನ್ನು ಪರ್ಯಾಲೋಚನೆಯಿಂದ ಬೇರ್ಪಡಿಸಲಾಗದು. ತೋರಿಕೆಯ ಲೋಕ-ಘಟನೆಗಳ ಹಿಂದೆ ಆವಿಷ್ಟವಾದ ಯಥಾರ್ಥ ಸತ್ಯದ ಅರಿವು ಈ ಪರ್ಯಾಲೋಚನೆಯ

ಗುರಿ. ಮಾನವನು ಆಲೋಚನೆಮಾಡುತ್ತಾನೆ, ಬಾಹ್ಯಪದಾರ್ಥಗಳ ಹಿಂದಿರುವ ತತ್ತ್ವವನ್ನರಿಯಲು ಪ್ರಯತ್ನಿಸುತ್ತಾನೆ, ತನ್ನ ಜಾಗ್ರತ ಮನಸ್ಸಿನಲ್ಲಿ ಇವುಗಳ ನಿಯಮನಿಷ್ಠೆಗಳನ್ನು ನೆಲೆಗೊಳಿಸುತ್ತಾನೆ. ತತ್ತ್ವಶಾಸ್ತ್ರವು ವಿಶ್ವದ ಯಥಾರ್ಥ ಜ್ಞಾನವನ್ನು ಪಡೆಯುವ ಬೌದ್ಧಿಕ ವ್ಯಾಪಾರ. ಮತಧರ್ಮವು ಈ ಸತ್ಯವನ್ನು ಮಾನವನ ಆತ್ಮದಲ್ಲಿ ಅನುಷ್ಠಾನಪೂರ್ವಕವಾಗಿ ಎಚ್ಚರಗೊಳಿಸುವ ಪ್ರಯತ್ನ. ಇವೆರಡೂ ಪರಸ್ಪರ ಅವಶ್ಯಕವೇ. ತತ್ತ್ವಚಿಂತನೆಯ ಹಿನ್ನೆಲೆಯಿಲ್ಲದ ಮತಧರ್ಮ ಅಂಧಶ್ರದ್ಧೆಯಾಗಿ, ಮೂಢ ನಂಬಿಕೆಯಾಗಿ ಪರಿಣಮಿಸುತ್ತದೆ. ಮತಧರ್ಮದಲ್ಲಿ ಜೀವಂತವಾಗಿ ವ್ಯಕ್ತವಾಗದ ತತ್ತ್ವಜಿಜ್ಞಾಸೆ ಶುಷ್ಕವಾಗಿ ಪರಿಣಮಿಸುತ್ತದೆ. ಇವೆರಡರ ಬೆಲೆಯೂ ಅವು ಜೀವನದಲ್ಲಿ ಹಾಸುಹೊಕ್ಕಾದಾಗಲೆ ನಮಗೆ ಲಭಿಸುತ್ತದೆ.

## ಹಾಗಾದರೆ ನಮ್ಮ ಧ್ಯೇಯವೇನಿರಬೇಕು ?

ಮತ್ತೆ ನಮ್ಮ ಧ್ಯೇಯ ಏನಾಗಿರಬೇಕು ? ಅಂತರಂಗಪೂರ್ವಕವಾಗಿ ಗಳಿಸಿದ ಮಾನವವರ್ಗದ ಐಕ್ಯತೆ. ಈ ಐಕ್ಯತೆ ಬಾಹ್ಯವಾದ ಸ್ವಪ್ರಯೋಜನಗಳಿಂದ ರೂಪಿಸಿಕೊಂಡದ್ದಾಗಿರಬಾರದು. ಬರೀ ಪಶುಸ್ವಭಾವ, ಆರ್ಥಿಕ ಪ್ರಯೋಜನ, ಬೌದ್ಧಿಕ ಉನ್ನತಿ, ಕಲೋಪಾಸನೆ ಇವುಗಳನ್ನು ಮೀರಿದ ಆಧ್ಯಾತ್ಮಿಕ ತೇಜಸ್ಸನ್ನು ಬೆಳಗಿಸಿಕೊಳ್ಳುವ ಮಾನವನ ಉತ್ಕರ್ಷ ; ಅಧ್ಯಾತ್ಮದ ಅಂತಶ್ಶಕ್ತಿಯನ್ನು ದೈಹಿಕ ಮತ್ತು ಮಾನಸಿಕ ರೂಪಗಳಲ್ಲಿ ಎರಕ ಹುಯ್ಯುವುದು ನಮ್ಮ ಗುರಿ. ಮಾನವನು ತನ್ನ ಮಾನುಷ ಸ್ಥಿತಿಯಿಂದ ಅತಿಮಾನುಷ ಸ್ಥಿತಿಗೆ ವೃದ್ಧಿಹೊಂದುವುದು ನಮ್ಮ ಗುರಿ. ಇದು ಸಿದ್ಧವಾದರೆ ಪಶುಸ್ಥಿತಿಗೂ ಮಾನುಷಸ್ಥಿತಿಗೂ ಇರುವಷ್ಟು ಅಂತರವು ಮಾನುಷಸ್ಥಿತಿಗೂ ಅತಿಮಾನುಷಸ್ಥಿತಿಗೂ ಇರುವುದರಲ್ಲಿ ಸಂದೇಹವಿಲ್ಲ. ಈ ಮೂರು ಅವಸ್ಥೆ ( ಪಶು ಅವಸ್ಥೆ, ಮಾನುಷಾವಸ್ಥೆ, ಅತಿಮಾನುಷಾವಸ್ಥೆ ) ಒಂದೇ ಆಧ್ಯಾತ್ಮಿಕ ನಿಚ್ಚಣಿಕೆಯ ಅವಸ್ಥಾತ್ರಯ. ಏಕೆಂದರೆ ಮಾನವನ ಐಕ್ಯ-ದಿವ್ಯೋತ್ಕರ್ಷಗಳು ಆಧ್ಯಾತ್ಮದಲ್ಲಿ ಆತನ ಜೀವನವು ಪ್ರತಿಷ್ಠಿತವಾದಾಗಲೇ ಒದಗಬಲ್ಲವು.

**ಅನುವಾದಕ : ಎಂ. ಯಾಮುನಾಚಾರ್ಯ, ಮೈಸೂರು.**

# 'ಆರ್ಯ' ಎಂಬ ಹೆಸರಿನ ರಹಸ್ಯವೇನು ?

### ಶ್ರೀ ಅರವಿಂದರು

ಈ ಪ್ರಶ್ನೆಯನ್ನು ಅನೇಕ ದೃಷ್ಟಿಗಳಿಂದ ಕೇಳಲಾಗುತ್ತದೆ. ಎಷ್ಟೋ ಜನ ಐರೋಪ್ಯರಿಗೆ ನಮ್ಮ ಹೊರಹೊದಿಕೆಯ ಮೇಲೆ ಕಾಣಿಸುವ ಹೆಸರು ಅವರವರ ಮನೋವೃತ್ತಿಯ ಮೇರೆಗೆ ಆಕರ್ಷಕ ಅಥವಾ ಅನಾಕರ್ಷಕ ಶಬ್ದವಾಗಿ ತೋರುವ ಸಂಭವವಿದೆ. ಭಾರತೀಯರಿಗೆ ಈ ಶಬ್ದವೇನೊ ಗೊತ್ತಿದೆ; ಆದರೆ ಅವರ ಪೂರ್ವಜರಿಗೆ ಈ ಶಬ್ದವು ಎಷ್ಟು ಅರ್ಥಪೂರ್ಣವಾಗಿತ್ತೊ ಅಷ್ಟು ಅದು ಈಗ ಇಲ್ಲ. ಪಾಶ್ಚಿಮಾತ್ಯ ಭಾಷಾಶಾಸ್ತ್ರವು ಇದಕ್ಕೆ ಒಂದು ಕುಲದ ಸ್ವರೂಪವನ್ನು ಕೊಟ್ಟದೆ ಯಲ್ಲದೆ ಬೇರೆ ಬೇರೆ ಊಹಾಪೋಹಗಳ ಮೂಲಕ ಬೇರೆ ಬೇರೆ ಮಹತ್ವವನ್ನು ಆ ಅಜ್ಞಾತ ಕುಲಕ್ಕೆ ತಂದುಕೊಟ್ಟಿದೆ. ಈಗ ಭಾಷಾಶಾಸ್ತ್ರಜ್ಞರಲ್ಲಿ ಕೆಲವರು ಈ ಶಬ್ದವು ಮೂಲ ಪ್ರಯೋಗದಲ್ಲಿ ಕುಲಭೇದವನ್ನು ತೋರಿಸದೆ ಸಂಸ್ಕೃತಿಭೇದವನ್ನು ವ್ಯಕ್ತಪಡಿಸುತ್ತಿದ್ದಿತೆಂದು ಅಭಿಪ್ರಾಯಪಡುತ್ತಿರುವರು. ಯಾಕಂದರೆ ಅಂತರ್ ಬಾಹ್ಯ ಆಚಾರವೈಶಿಷ್ಟ್ಯದ, ಆಕಾಂಕ್ಷೆಯ, ಧ್ಯೇಯವಾದಿತ್ವದ ಆತ್ಮಸಂಸ್ಕೃತಿಯ ಒಂದು ವಿಧವನ್ನು ಅಂಗೀಕರಿಸಿದವರೇ ಆರ್ಯರೆಂದು ವೇದದಲ್ಲಿ ಕಂಡುಬರುತ್ತದೆ. ದೈವ ಸ್ವರೂಪವನ್ನು ಹೊಂದುವ ಹೋರಾಟದಲ್ಲಿ ಮರ್ತ್ಯನಿಗೆ ನೆರವಾದ ಅತೀಂದ್ರಿಯ ಶಕ್ತಿಗಳೇ ಆರ್ಯ ದೈವತಗಳಾಗಿದ್ದವು. ಪುರಾತನ ಮಾನವಕುಲದ ಅತ್ಯುಚ್ಚ ಆಕಾಂಕ್ಷೆಗಳು, ಅದರ ಅತ್ಯುಚ್ಚ ಆದರ್ಶವಾದಿ ವಿಚಾರ ಇವುಗಳೆಲ್ಲ ಈ ಏಕಮೇವಾ-ದ್ವಿತೀಯವಾದ ಶಬ್ದದಲ್ಲಿ ಸಾರಭೂತವಾಗಿ ಸೇರಿವೆ.

ಮುಂದೆ '**ಆರ್ಯ**' ಶಬ್ದವು ಒಂದು ಸಾಮಾಜಿಕ, ನೈತಿಕ ಆದರ್ಶದ ಮತ್ತು ಸುಸಂಸ್ಕೃತ ಜೀವನದ ಸಂಕೇತವಾಗಿ ಪರಿಣಮಿಸಿತು. ವಿನಯ, ವಿವೇಕ, ಉದಾತ್ತತೆ, ಸರಳತನ, ಧೈರ್ಯ, ಅಕುಟಿಲತೆ, ಪಾವಿತ್ರ್ಯ, ದಯಾಲುತ್ವ, ದುರ್ಬಲರ ರಕ್ಷಣೆ, ಔದಾರ್ಯ, ಸಾಮಾಜಿಕ ಧರ್ಮಪಾಲನೆ, ಜ್ಞಾನಾತುರತೆ, ಜ್ಞಾನಿಗಳ ಬಗೆಗೆ ಗೌರ ವಾದರ ಇವೇ ಮೊದಲಾದ ಸದ್ಗುಣಗಳ ನೆಲೆವೀಡೆಂದು '**ಆರ್ಯ**' ಶಬ್ದವನ್ನು ಭಾವಿ ಸಲಾಯ್ತು. ಬ್ರಾಹ್ಮಣ-ಕ್ಷತ್ರಿಯರ ಸಂಯುಕ್ತ ಆದರ್ಶವೇ ಅದಾಗಿದ್ದಿತು. ಈ ಆದರ್ಶದಿಂದ ದೂರವಾದುದನ್ನೆಲ್ಲ ಅಂದರೆ ಅನುದಾರತೆ, ಕ್ಷುದ್ರತೆ, ಒರಟುತನ, ಸುಳ್ಳು, ಕಪಟ, ಮೋಸ, ಕ್ರೌರ್ಯ ಮುಂತಾದವುಗಳಿದ್ದುದನ್ನೆಲ್ಲ ಅನಾರ್ಯವೆಂದು ತಿಳಿಯಲಾಯ್ತು. ಮಾನವ ಭಾಷಿತದಲ್ಲಿ ಹೆಚ್ಚು ಉದಾತ್ತವಾದ ಇತಿಹಾಸವುಳ್ಳ ಇನ್ನೊಂದು ಶಬ್ದವಿಲ್ಲ.

ತುಲನಾತ್ಮಕ ಭಾಷಾಶಾಸ್ತ್ರದ ಆರಂಭಕಾಲದಲ್ಲಿ ಜನರ ಇತಿಹಾಸಪೂರ್ವ ಕಾಲದ ಇತಿಹಾಸಕ್ಕಾಗಿ ಶಬ್ದೇತಿಹಾಸದಲ್ಲಿ ಪಂಡಿತರು ಮುಳುಗಿ ಆಧಾರಗಳನ್ನು ಅರಸುತ್ತಿದ್ದಾಗ **'ಆರ್ಯ'** ಶಬ್ದದ ವ್ಯುತ್ಪತ್ತಿಯು **'ಅರ್'** ಎಂದರೆ "ಕೃಷಿಮಾಡು" "ನೇಗಿಲಹೊಡೆ" ಎಂಬ ಅರ್ಥವುಳ್ಳ ಧಾತುವಿನಿಂದ ಆಯ್ತೆಂದು ಭಾವಿಸಲ್ಪಟ್ಟಿತು. ವೇದಕಾಲದ ಆರ್ಯರು ವಾಯುವ್ಯದಲ್ಲಿದ್ದ ಸ್ವಬಂಧುಗಳಾದ ಕುರುಬರಿಂದಲೂ ಬೇಡರಿಂದಲೂ ಭಿನ್ನರಾದ ಮೂಲಕ ಹಾಗೆ ಕರೆಯಲ್ಪಟ್ಟರೆಂದು ಊಹಿಸಲಾಯ್ತು. ಈ ಚಮತ್ಕಾರವಾದ ಊಹೆಗೆ ಯಾವ ಆಧಾರವೂ ಇಲ್ಲ. ಆದರೆ ಬೇರೊಂದು ಬಗೆಯಲ್ಲಿ ಇದನ್ನು ನಾವು ಅಂಗೀಕರಿಸಬಹುದು. ಪರಮಾತ್ಮನಿತ್ತ ದೇಹಾತ್ಮಗಳೆಂಬ ಬಹಿರಂತಃಕ್ಷೇತ್ರಗಳನ್ನು ಯಾರು ಬಂಜರು-ನೆಲವನ್ನಾಗಗೊಡದೆ ಅವುಗಳಿಂದ ಪೂರ್ಣ ಫಲವನ್ನು ಪಡೆಯಲು ಪ್ರಯತ್ನಿಸುವರೋ ಅವರು ಆರ್ಯರೆಂದೆನ್ನಬಹುದು.

'ಆರ್ಯ' ಕೇವಲ ಕುಲಗೋತ್ರ ಸಂಕೇತವಾಗಿದೆಯೆಂದು ತಿಳಿದ ಪಕ್ಷದಲ್ಲಿ 'ಅರ್' ಎಂದರೆ "ಹೋರಾಡು" "ಯುದ್ಧಮಾಡು" ಎಂಬ ಧಾತುವಿನಿಂದ ಅದು ಉತ್ಪನ್ನವಾಯ್ತೆಂದು ಭಾವಿಸಬಹುದು. ಇದಕ್ಕೆ ಆಧಾರವಾಗಿ ಗ್ರೀಕರ ಯುದ್ಧ ದೇವತೆಯಾದ 'ಏರಿಸ್ (*areios*)' ಶಬ್ದವನ್ನು ಉದಾಹರಿಸಬಹುದು. ಹಾಗೆಯೆ ಲ್ಯಾಟಿನ ಭಾಷೆಯಲ್ಲಿಯ 'ವರ್ಟಸ್ (*virtus*)' ಎಂಬ ಶಬ್ದಕ್ಕೆ ಮೊದಲು ದೇಹಶಕ್ತಿ, ಧೈರ್ಯಗಳೆಂಬ ಅರ್ಥವಿದ್ದವು; ಆದರೆ ಮುಂದೆ ನೈತಿಕಬಲ ಮತ್ತು ಉದಾತ್ತತೆಯೆಂಬ ಅರ್ಥವೂ ಉಂಟಾಯ್ತೆಂಬದನ್ನು ದೃಷ್ಟಾಂತಿಸಬಹುದು. ಶಬ್ದದ ಈ ಅರ್ಥವನ್ನೂ ನಾವು ಒಪ್ಪಬಹುದು. "ಪರಾವಿದ್ಯೆಯನ್ನು ಪಡೆಯಲು ನಾವು ಹೆಣಗುತ್ತೇವೆ. ಆದುದರಿಂದ ಜನರು ನಮ್ಮನ್ನು ಯೋಧ್ಧರೆಂದು ಸಂಬೋಧಿಸುವರು." ಯಾಕಂದರೆ ಶ್ರೇಷ್ಠ, ಉದಾತ್ತತಮ ಹಾಗು ದೈವೀಕಾಂತಿಯುಳ್ಳ ವಸ್ತುವನ್ನರಿತು ಆರಿಸಿಕೊಳ್ಳುವದೇ ಬುದ್ಧಿವಂತಿಕೆಯ ಪ್ರತೀಕ. ನಿಜವಾಗಿ ಸರ್ವ ವಸ್ತುಗಳ ಜ್ಞಾನ, ಹಾಗು ಅವುಗಳ ವಿಷಯದಲ್ಲಿ ಆದರ-ಔದಾರ್ಯ ಎಂಬುದೇ ಅದರ ಅರ್ಥ. ಅಷ್ಟೇಕೆ ? ಅತ್ಯಂತ ಕುರೂಪಿ, ಕ್ಷುದ್ರ ವಸ್ತುಗಳಲ್ಲಿಯೂ ವಾಸಿಸುವ ಪರಮಾತ್ಮನಿಗಾಗಿ ಅವುಗಳನ್ನು ಕೂಡ ಪ್ರೀತ್ಯಾದರಗಳಿಂದ ಕಾಣುವದೆಂಬುದೂ ಅದರ ಮರ್ಮ. ಆದರೆ, ವಿಹಿತ ಧರ್ಮಾನುಷ್ಠಾನ, ಮತ್ತು ಪರಮಾತ್ಮನಿಂದ ನಮ್ಮನ್ನು ದೂರಗೊಳಿಸುವ ವಿಷಯುಗಳನ್ನು ಬಿಟ್ಟು ಆತನ ಅಭಿವ್ಯಕ್ತಿಗೆ ಸಹಾಯಕವಾದ ವಸ್ತುಗಳು ಇವುಗಳಲ್ಲಿ ಆಸಕ್ತಿಯನ್ನು ವಹಿಸುವದು ಒಂದು ಬಗೆಯ ಹೋರಾಟವೇ ಸರಿ. ಈ ಹೋರಾಟವಿಲ್ಲದೆ ಯೋಗ್ಯಾಯೋಗ್ಯಗಳ ವಿವೇಕಯುಕ್ತ ಆಯ್ಕೆ ಸುಲಭವಾಗಿ ಆಗಲಾರದು; ಒಂದುವೇಳೆ ಆದರೂ ಅದು ಸುಲಭವಾಗಿ ಅನುಷ್ಠಾನಕ್ಕೆ ಬರಲಾರದು.

ಈ ಆಯ್ಕೆಯನ್ನು ಯಾವನು ಮಾಡುವನೊ,–ಯಾವುದಕ್ಕೂ ಅಂಜದೆ, ಗತಿಯು ನಿದಾನವಾಯ್ತೆಂದಾಗಲಿ ಪರಾಜಿತನಾದೆನೆಂದಾಗಲಿ ಕಾರ್ಯದಿಂದ ವಿಮುಖ

ನಾಗದೆ, ತನ್ನ ಬುದ್ಧಿಗೆ ಅತೀವ ಅಪಾರವೆಂದು ಯಾವ ಅಪಾರತೆಯಿಂದಲೂ ಹಿಂಜರಿಯದೆ, ತನ್ನ ಆತ್ಮಶಕ್ತಿಗೆ ಅತೀವ ಉನ್ನತವಾಗಿ ಇರುವದೆಂದು ಯಾವ ಔನ್ನತ್ಯವನ್ನೂ ತೊರೆಯದೆ, ತನ್ನ ಶಕ್ತಿಸಾಹಸಗಳಿಗೆ ಅತೀತವಾದ ಘನತೆಯೆಂದು ಯಾವ ಘನತೆಯನ್ನೂ ಕಡೆಗಾಣಿಸದೆ ಯಾವನು ಈ 'ದೇವ-ಗಿರಿ'ಯನ್ನು ಹಂತಹಂತವಾಗಿ ಏರಲು ಉದ್ಯುಕ್ತನಾಗುವನೊ ಅವನೇ 'ಆರ್ಯ'ನು. ಅವನೇ ದೈವೀ ಯೋದ್ಧನು, ಜೇತೃವು, ಧೀರೋದಾತ್ತನು, ಉತ್ತಮನು. ಗ್ರೀಕಭಾಷೆಯಲ್ಲಿ ಉಕ್ತನಾದ 'ಅರಿಸ್ಟಾಸ್' ( aristos )ನೂ ಅವನೇ, ಗೀತೆಯಲ್ಲಿ ಉಕ್ತನಾದ 'ಶ್ರೇಷ್ಠ (ಞಇ)' ನೂ ಅವನೇ.

ಅತ್ಯಂತ ಮೌಲಿಕವಾದ ಅರ್ಥದಲ್ಲಿ 'ಆರ್ಯ' ಎಂದರೆ ಒಂದು ಪ್ರಯತ್ನ; ಹೋರಾಟ ಮತ್ತು ಗೆಲವು. ತನ್ನ ಅಂತರ್ಬಾಹ್ಯವಾದುದನ್ನೆಲ್ಲ ಅಂದರೆ ಮಾನವ ಪ್ರಗತಿಗೆ ವಿರೋಧಿಯಾದುದನ್ನೆಲ್ಲ ಜಯಿಸುವವನೇ ಆರ್ಯ. ಆತ್ಮವಿಜಯವೇ ಆತನ ಸ್ವಭಾವದ ಪ್ರಥಮಸೂತ್ರ. ಅವನು ಪಾರ್ಥಿವ ಸ್ಥೂಲಾಂಶಗಳನ್ನು ಗೆಲ್ಲುವನಲ್ಲದೆ ಪಾಮರರಂತೆ ಅವುಗಳ ತಾಮಸಿಕ ನಿರ್ಬಂಧಗಳಿಗೆ ಒಳಗಾಗುವದಿಲ್ಲ. ಜೀವಿತದ ಬಹುಮುಖ ಉತ್ಸಾಹಗಳನ್ನು ಗೆದ್ದು ಅವುಗಳ ಕ್ಷುತ್ಪಿಪಾಸೆಗಳಿಂದ ಅಭಿಭೂತನಾಗದೆ ರಾಜಸಿಕ ವಿಕಾರಗಳಿಂದ ಅಲಿಪ್ತನಾಗಿರುವನು. ಮನಸ್ಸನ್ನೂ ಅದರ ಚೇಷ್ಟೆಗಳನ್ನೂ ಆತನು ಸೋಲಿಸಿಬಿಡುವನು. ಅಜ್ಞಾನ, ಪೂರ್ವಗ್ರಹ, ಸಾಂಪ್ರದಾಯಿಕ ವಿಚಾರಗಳೆಂಬ ಚಿಪ್ಪಿನಲ್ಲಿ ಅವಿತುಕೊಳ್ಳುವ ಇಚ್ಛೆ ಅವನಿಗಿರುವದಿಲ್ಲ. ತನ್ನ ಮನಃಸಂಕಲ್ಪವು ಗಟ್ಟಿಯಾದಂತೆ ಬುದ್ಧಿವೈಶಾಲ್ಯವನ್ನು ಆತನು ಪಡೆದು ಸಾರಾಸಾರ ವಿವೇಕಿಯಾಗಿರುವನು. ಯಾಕಂದರೆ ಪ್ರತಿಯೊಂದರಲ್ಲಿಯೂ ಆತನು ಸತ್ಯವನ್ನು, ಧರ್ಮವನ್ನು, ಔನ್ನತ್ಯವನ್ನು ಹಾಗು ಸ್ವಾತಂತ್ರ್ಯವನ್ನು ಹುಡುಕುವನು.

ಆತನ ಆತ್ಮವಿಜಯದ ಗುರಿಯು ಆತ್ಮಪೂರ್ಣತೆಯಾಗಿರುತ್ತದೆ. ಆದುದರಿಂದ ಜಯಿಸಿದುದನ್ನು ಆತನು ನಾಶಪಡಿಸುವದಿಲ್ಲ; ಆದರೆ ಅದನ್ನು ಉದಾತ್ತೀಕರಿಸಿ ಸಫಲೀಕರಿಸುವನು. ದೇಹ, ಪ್ರಾಣ, ಮನಸ್ಸು ಇವುಗಳನ್ನು ಪಡೆದುದರ ಉದ್ದೇಶವು ಆತನಿಗೆ ಚೆನ್ನಾಗಿ ಗೊತ್ತಿರುತ್ತದೆ. ಅವುಗಳನ್ನು ದಾಟಿ ಉನ್ನತ ಸ್ಥಾನಕ್ಕೆ ಹೋಗುವದೇ ಅವುಗಳ ಉದ್ದೇಶವೆಂಬುದನ್ನು ಅವನು ಬಲ್ಲನು. ಅಂತೆಯೇ ಅವುಗಳ ಬಂಧನಗಳನ್ನು ಹರಿದೊಗೆದು, ಅವುಗಳ ಆಮಿಷಗಳನ್ನು ತಿರಸ್ಕರಿಸಿ, ಅವುಗಳ ತೃಪ್ತಿಯನ್ನು ನಿರಾಕರಿಸಿ ಮುಂದುವರಿಯಬೇಕೆಂದು ಆತನು ಹಾತೊರೆಯುವನು. ಆದರೆ ಆ ಪರಾತ್ಪರನು ಜಗತ್ತಿನ ವಿವಿಧ ವಸ್ತುಗಳಲ್ಲಿ ಆವಿರ್ಭೂತನಾಗಿ ದೈವೀ ಸಂಕಲ್ಪ, ಪ್ರಜ್ಞೆ, ಭಕ್ತಿ, ಆನಂದ ಮೊದಲಾದ ರೂಪಗಳಲ್ಲಿ ಕಾಣಿಸಿಕೊಳ್ಳುವನಲ್ಲದೆ ಆ ಪರಾತ್ಪರ ತತ್ತ್ವವನ್ನು ಸ್ವೀಕರಿಸುವ ಯೋಗ್ಯತೆಯುಳ್ಳವರ ಮೇಲೆ ತನ್ನ ಕೃಪಾದೃಷ್ಟಿಯನ್ನು ಬೀರುವನೆಂಬುದನ್ನು ಆತನು ಅರಿತಿರುವನು. ಅಲ್ಲದೆ ಅದರ ಅನ್ವೇಷಕನಾಗಿ

ಭೃತ್ಯನಾಗಿ ಭಕ್ತನಾಗಿ ಜೀವಿಸುವನು. ಆ ಅವಸ್ಥೆಯನ್ನು ಮುಟ್ಟಿದ ಬಳಿಕ ಅವನು ಭಕ್ತಿ, ಆನಂದ, ಜ್ಞಾನ ಮತ್ತು ಕರ್ಮಗಳ ಮುಖಾಂತರ ಅದನ್ನೆಲ್ಲ ಮಾನವ ಕುಲಕ್ಕೆ ಧಾರೆಯೆರೆಯುವನು. ಯಾಕಂದರೆ ಆರ್ಯನೆಂದರೆ ಯಾವಾಗಲೂ ಕರ್ಮ-ರತನು ಮತ್ತು ವೀರನು. ಪರಾತ್ಪರನನ್ನು ಅರಸುವಲ್ಲಾಗಲಿ ಸೇವಿಸುವಲ್ಲಾಗಲಿ ಆತನು ಮಾನಸಿಕ ಹಾಗು ದೈಹಿಕ ಪರಿಶ್ರಮದ ಪರಾಕಾಷ್ಠೆಯನ್ನು ಮಾಡುವನು. ಯಾವ ಅಡೆತಡೆಗಳನ್ನೂ ಲೆಕ್ಕಿಸುವದಿಲ್ಲ. ಆ ಆತ್ಮಸಾಮ್ರಾಜ್ಯವು ತನ್ನಲ್ಲಿಯೂ ಜಗತ್ತಿನಲ್ಲಿಯೂ ನೆಲೆಗೊಳ್ಳಲು ಹೋರಾಡುವನು.

ಪರಿಪೂರ್ಣ **ಆರ್ಯನೇ** ಅರ್ಹಂತನು. ಈ ವಿಶ್ವವನ್ನು ಅತಿಕ್ರಮಿಸಿದ ಅತೀಂದ್ರಿಯವಾದ ಚಿಚ್ಛಕ್ತಿಯೊಂದಿದೆ. ಈ ಜಗತ್ತುಗಳೆಲ್ಲ ಅದರ ವಿಷ್ಕಂಭಕಗಳೇ ಸರಿ. ಚಿಚ್ಛಕ್ತಿಯು ಜಗತ್ತಿನ ಆಚೆಗಿದ್ದರೂ ವಿಶ್ವವೇ ಅದಾಗಿದೆ; ವಿಶ್ವದಲ್ಲಿರುವ-ದೆಲ್ಲವೂ ಅದಾಗಿದೆ. ಇದರಲ್ಲಿಯೆ ಆತನು ತನ್ನ ಪರಿಮಿತವಾದ ಅಹಂತತ್ತ್ವವನ್ನು ವಿಶಾಲಗೊಳಿಸುವನು. ಅರ್ಥಾತ್ ಎಲ್ಲ ಜೀವಿಗಳ ಹಾಗು ನಿರ್ಜೀವ ವಸ್ತುಗಳ ಕೂಡ ಪ್ರೇಮ, ಸಂತೋಷ, ಉತ್ಸಾಹ, ಏಕತಾಭಾವ ಇವುಗಳ ಮೂಲಕ ಸಮರಸ ನಾಗುವನು. ಏಕಕಾಲಕ್ಕೆ ಅತೀತವೂ ವಿಶ್ವವ್ಯಾಪಿಯೂ ಆದ ಚಿಚ್ಛಕ್ತಿಯದಾಗಿ-ದ್ದರೂ ಕಾರ್ಯಕ್ಕೋಸುಗ, ಜ್ಞಾನಾರ್ಥವಾಗಿ, ಸೃಷ್ಟಿಕರ್ತನ ಲೀಲೆಗಾಗಿ ಅದು ವ್ಯಕ್ತಿತ್ವದ ಪರಿಮಿತಿಯನ್ನೂ ಒಪ್ಪಿಕೊಳ್ಳುತ್ತದೆ. ಯಾಕಂದರೆ ಕೊನೆಯಲ್ಲಿ ದೈವೀಕಾರ್ಯದ ಮತ್ತು ದೈವೀಲೀಲೆಯ ಸ್ವತಂತ್ರ ಕೇಂದ್ರದಲ್ಲಿ ರೂಪಾಂತರ ಹೊಂದಲೆಂದೇ ಅಹಂತತ್ತ್ವವು ಇರುವದು. ಆ ಚಿಚ್ಛಕ್ತಿಯನ್ನಾದರೂ ಅಳವಡಿಸಿ ಕೊಳ್ಳಲು ಅವನಿಗೆ ತಕ್ಕಷ್ಟು ಪ್ರೇಮ, ಸಂತೋಷ, ಜ್ಞಾನಗಳು ಇರುವವು; ಆ ಪರಿವರ್ತನೆಯನ್ನು ಸಾಧಿಸಲು ಅವನು ತಕ್ಕಷ್ಟು ಸಮರ್ಥ. ಅತೀತವಾದ ಬಳಿಕ ಅಹಂತತ್ತ್ವವನ್ನು ಆಲಿಂಗಿಸುವದು ಅಂತಿಮ ಹಾಗು ದೈವೀ ತ್ಯಾಗವೇ ಸರಿ. ಅಸ್ತಿತ್ವದ ಪ್ರಸ್ಫುಟವಾದ ಮೂರು ಅವಸ್ಥೆಗಳಲ್ಲಿ ಏಕಸಮಯಾವಚ್ಛೇದವಾಗಿ ಜೀವಿಸಬಲ್ಲವನೇ ಪರಿಪೂರ್ಣ ಅರ್ಹಂತನು. ಅವನು ಸಾಮಾನ್ಯ ಮಟ್ಟದಲ್ಲಿದ್ದು ವನ್ನು ಉನ್ನತ ಮಟ್ಟಕ್ಕೆ ಏರಿಸಬಲ್ಲನು, ಉನ್ನತ ಮಟ್ಟದಲ್ಲಿರುವ ತತ್ತ್ವವನ್ನು ಸಾಮಾನ್ಯ ಮಟ್ಟದಲ್ಲಿಯೂ ನೆಲೆಗೊಳಿಸಬಲ್ಲನು. ಈ ಮೂಲಕ, ಅರ್ಹಂತನಾದ ಆರ್ಯನು ತ್ರಿರೂಪನಾಗಿರುವ ಹಾಗು ತ್ರಿತ್ವದಲ್ಲಿಯೂ ಏಕನಾಗಿರುವ ಬ್ರಹ್ಮ ನೊಡನೆ ತನ್ನ ಜೀವದ ಸರ್ವ ಭಾಗಗಳಲ್ಲಿಯೂ ಒಂದಾಗಿ ಜಗತ್ತಿನ ಸಾಂಕೇತಿಕ ಪರಿಭಾಷೆಯಲ್ಲಿ ತನ್ನ ಅನುಭವವನ್ನು ಸಂಪೂರ್ಣವಾಗಿ ವ್ಯಕ್ತಮಾಡಬಲ್ಲನು.

ಅನುವಾದಕ: **ವೆಂ. ಭೀ. ನಾಯಕ, ಹುಬ್ಬಳ್ಳಿ.**

# ಮಾತೆ

## ಶ್ರೀ ಅರವಿಂದರು

### ೧

ನಮ್ಮ ಗುರುತರ ಕಷ್ಟಕರ ಗುರಿಯು ಎರಡೇ ಎರಡು ಶಕ್ತಿಗಳ ಸಂಯೋಗ ದಿಂದ ಮಾತ್ರ ಸಿದ್ಧಿಸಲು ಸಾಧ್ಯ; ಒಂದು, ಕೆಳಗಿನಿಂದ ದೃಢವಾದ ಅಭಂಗವಾದ ಅಭೀಪ್ಸೆಯ ಕರೆ, ಇನ್ನೊಂದು, ಮೇಲಿನಿಂದ ಅದಕ್ಕೆ ಮಾರ್ನುಡಿಗೊಡುವ ಪರಮಾನುಗ್ರಹ.

ಆದರೆ ಭಗವದನುಗ್ರಹವು ಕೇವಲ ಜ್ಞಾನ–ಸತ್ಯಗಳ ಕಟ್ಟಳೆಗಳಿಗೆ ಅನು ಸರಿಸಿಯೇ ಕೆಲಸ ಮಾಡಬಲ್ಲದು. ಅದೆಂದೂ ಅಸತ್ಯ ಅಜ್ಞಾನಗಳ ಕಟ್ಟಳೆಗಳಿಗೆ ಒಳಪಟ್ಟು ಕೆಲಸ ಮಾಡಲಾರದು. ಏಕೆಂದರೆ, ಒಂದು ವೇಳೆ ಭಗವದನುಗ್ರಹವು ಮಿಥ್ಯೆಯ ಬೇಡಿಕೆಗಳನ್ನು ಮನ್ನಿಸಿಬಿಟ್ಟರೆ ಅದು ತನ್ನ ವ್ಯರ್ಥತೆಗೆ ತಾನೇ ಕಾರಣವಾದಂತಾಗುವುದು.

ಕೇವಲ ಜ್ಞಾನ-ಸತ್ಯಗಳ ಸ್ಥಿತಿಯಲ್ಲಿಯೇ ಶ್ರೇಷ್ಠತಮ ಶಕ್ತಿಯು ಕೆಳಗಿಳಿದು ಬರುವುದು. ಹಾಗೂ ಅತಿಮಾನಸದ ಪರಮ ಶಕ್ತಿಯೇ ಮೇಲಿನಿಂದ ಕೆಳಗಿಳಿಯು-ತ್ತಲೂ, ಮತ್ತೆ ಅದೇ ಶಕ್ತಿ ಕೆಳಗಿನಿಂದ ಪ್ರಕಟಗೊಳ್ಳುತ್ತಲೂ, ಪಾರ್ಥಿವ ಪ್ರಕೃತಿಯ ಮೇಲೆ ತನ್ನ ಅಪ್ರತಿಹತವಾದ ಕರ್ತೃತ್ವವನ್ನು ಪ್ರಸ್ಥಾಪಿಸಬಲ್ಲದು. ಅದರ ಸಮಸ್ತ ಸಂಕಷ್ಟಗಳನ್ನೂ ನಿರ್ಮೂಲನಗೊಳಿಸಬಲ್ಲದು..... ಅಖಂಡ ನಿಷ್ಠಾಪೂರ್ಣ ಸಮರ್ಪಣೆ ಬೇಕು. ಅನನ್ಯಗತಿಕವಾಗಿ ಆತ್ಮವು ಭಗವಚ್ಛಕ್ತಿಯತ್ತ ಬಾಯ್ದೆರೆದು ಕೊಂಡಿರಬೇಕು. ಕೆಳಗಿಳಿದು ಬರುತ್ತಿರುವ ಸತ್ಯವನ್ನು ಹೆಜ್ಜೆಹೆಜ್ಜೆಗೂ ಸರ್ವತೋಪರಿ ಯಾಗಿ ಅಂಗೀಕರಿಸಿಕೊಳ್ಳಬೇಕು. ಅಲ್ಲದೆ ಈ ಪಾರ್ಥಿವ ಪ್ರಕೃತಿಯ ಮೇಲೆ ಇನ್ನೂ ಮನೋಮಯ, ಪ್ರಾಣಮಯ, ಅನ್ನಮಯ ಶಕ್ತಿಗಳ ಮತ್ತು ಮಾಯೆ ಆಭಾಸಗಳ ಆಧಿಪತ್ಯವೇ ನಡೆದಿದ್ದು ಇವುಗಳ ಮಿಥ್ಯತೆಯನ್ನು ಹೆಜ್ಜೆಹೆಜ್ಜೆಗೂ ಸರ್ವತೋಪರಿ-ಯಾಗಿ ನಿರಾಕರಿಸಬೇಕು.

ಸಮರ್ಪಣವು ಸಮಗ್ರವಾಗಿರಬೇಕಲ್ಲದೆ ಅದು ಜೀವಿಯ ಅಂಗ ಪ್ರತ್ಯಂಗ-ಗಳನ್ನೂ ಆವರಿಸಬೇಕು. ಕೇವಲ ಹೃತ್ಪುರುಷನು ಮನ್ನಿಸಿ ಮಾರ್ಗೊಟ್ಟರಾಗದು, ಮೇಲ್ಮಟ್ಟದ ಮನಸ್ಸು ಸಮ್ಮತಿಸಿದರೆ ಸಾಲದು, ಅಥವಾ ಅಂತಃಪ್ರಾಣವು ಸಹ ಈ ಸಮರ್ಪಣಕ್ಕೆ ಬಾಗಿ ಅನ್ನಮಯ ಅಂತಶ್ಚೇತನೆಗೆ ಕೂಡ ಇದರ ಪ್ರಭಾವದ ಅನುಭವವಾದರೂ ಸಾಕಾಗದು. ಆಧಾರದ ಯಾವ ಭಾಗದಲ್ಲಿಯೂ, ಅಂದರೆ ತೀರ

ಹೊರ ಹೊರ ಪದರಿನಲ್ಲಿ ಸಹ ಎಲ್ಲಿಯೂ, ಯಾವುದೂ ಈ ಸಮರ್ಪಣೆಯಿಂದ ಹುದುಗಿಕೊಂಡಿರಕೂಡದು. ಯಾವುದೂ ಸಂಶಯಗಳ ಭ್ರಮೆಗಳ ವಂಚನೆಗಳ ಮರೆಗೆ ಅಡಗಿರಕೂಡದು, ಯಾವುದೂ ಇದನ್ನು ಪ್ರತಿಭಟಿಸಕೂಡದು ನಿರಾಕರಿಸ ಕೂಡದು.

ಆಧಾರದ ಅಂಶವಿಶೇಷವೊಂದು ಶರಣಾಗತವಾಗಿ ಇನ್ನೊಂದು ಅಂಶವು ಬಿಗಿದು ಕೊಂಡು ಬದಿಗೆ ಸರಿದುಬಿಟ್ಟರೆ, ಅದು ತನ್ನ ಹಾದಿಯನ್ನೇ ಹಿಡಿದು ತನ್ನ ವ್ಯವಸ್ಥಾ ವಿಧಾನವನ್ನೇ ಅನುಸರಿಸಲು ಹಟತೊಟ್ಟರೆ, ಆಗ, ಈ ಬಗೆ ಸಾಗಿದಷ್ಟಷ್ಟು ಸಲವೂ ಸ್ವತಃ ನೀನೇ ಭಗವದನುಗ್ರಹವನ್ನು ನಿನ್ನಿಂದ ದೂರ ದೂರಕ್ಕೆ ದಬ್ಬುತ್ತಿರುವೆ.

ನಿನ್ನ ಭಕ್ತಿಯು, ನಿನ್ನ ಆತ್ಮಸಮರ್ಪಣದ ಹೊದಿಕೆಯಲ್ಲಿ ಒಂದು ವೇಳೆ ನಿನ್ನ ಕಾಮನೆಗಳನ್ನೂ ಸ್ವಾರ್ಥಪರತೆಯನ್ನೂ ರಾಜಸಿಕ ವೃತ್ತಿಗಳನ್ನೂ ಹುದುಗಿರಿಸಿ ನಿಜ ವಾದ ಅಭೀಪ್ಸೆಯ ಬದಲು ಇವಕ್ಕೆಲ್ಲ ಇಂಬುಗೊಟ್ಟು, ಅಥವಾ ಇವುಗಳನ್ನು ಈ ಅಭೀಪ್ಸೆಯ ಜೊತೆಗೆ ಬೆರೆಯಿಸಿ ಹಾಗೂ ದಿವ್ಯಶಕ್ತಿಯ ಮೇಲೆ ಇವುಗಳನ್ನು ಆರೋ ಪಿಸಿ, ಆಮೇಲೆ ನಿನ್ನ ಪರಿವರ್ತನಕ್ಕಾಗಿ ಭಗವದನುಗ್ರಹವನ್ನು ನೀನು ಆವಾಹಿಸ ಬಯಸಿದರೆ ಅದು ನಿರರ್ಥಕವೇ ಸರಿ.

ಒಂದೆಡೆ ಅಥವಾ ಒಂದು ಅಂಶದಲ್ಲಿ ನೀನು ನಿನ್ನನ್ನು ಸತ್ಯದತ್ತ ತೆರೆದಿಟ್ಟು ಇನ್ನೊಂದೆಡೆಗೆ ಶತ್ರುಶಕ್ತಿಗಳ ಸಲುವಾಗಿ ಯಾವಾಗಲೂ ಬಾಗಿಲು ತೆರೆದಿಟ್ಟರೆ ಆಗ ಭಗವತ್ಪ್ರಸಾದವು ನಿನ್ನ ಹತ್ತರ ನೆಲೆಯೂರಿ ನಿಲ್ಲುವುದೆಂದು ನಿರೀಕ್ಷಿಸುವುದು ವ್ಯರ್ಥ. ಜಾಗ್ರತ ಪರಮೇಶ್ವರನ ಪ್ರತಿಷ್ಠಾಪನೆಯನ್ನೇ ಮಾಡಬೇಕೆಂದಿದ್ದರೆ ನೀನು ಗುಡಿ- ಯನ್ನು ನಿರ್ಮಲವಾಗಿ ಇಡಬೇಕಾಗುವದು.

ಮಹಾಶಕ್ತಿಯು ಕೆಳಗಿಳಿದ ಬಂದಾಗಲೆಲ್ಲ ಮತ್ತು ಅದು ಸತ್ಯವನ್ನು ತಂದಾಗಲೆಲ್ಲ, ನೀನು ವಿಮುಖನಾಗಿದ್ದು ಹೊರತಳ್ಳಲಾದ ಮಿಥ್ಯೆಯನ್ನು ಮತ್ತೆ ಕರೆತಂದೆಯಾದರೆ, ಭಗವತ್ಪ್ರಸಾದವೇ ಹುಸಿಯೆಂದು ದೂಷಿಸಕೂಡದು. ದೋಷವು ನಿನ್ನ ಸುಳ್ಳು ಸಂಕಲ್ಪದ್ದು, ನಿನ್ನ ಹರಕು ಮುರಕು ಆತ್ಮಸಮರ್ಪಣದ್ದು.

ನೀನೇನೋ ಸತ್ಯವನ್ನು ಆಹ್ವಾನಿಸಬಹುದು. ಆದರೆ ನಿನ್ನೊಳಗೆ ಯಾವುದೇ ಒಂದು ಅಂಶವು ಅಸತ್ಯವನ್ನೂ ಅಜ್ಞಾನವನ್ನೂ ಅದಿವ್ಯವಾದುದನ್ನೂ ಅಂಗೀಕರಿಸಿದರೆ, ಅಥವಾ ಅವುಗಳನ್ನು ತೊರೆಯಲು ಹಿಂದೆಗೆದರೆ, ಆಗ ಶತ್ರುವಿನ ಆಕ್ರಮಣಕ್ಕೆ ನೀನು ಸದಾಮುಕ್ತದ್ವಾರಮಾಡಿಕೊಟ್ಟಂತಾಗುವದಲ್ಲದೆ ಭಗವದನುಗ್ರಹವೂ ಮೆಲ್ಲಗೆ ನಿನ್ನಿಂದ ಮೈದೆಗೆದು ಬಿಡುವುದು. ಆದ್ದರಿಂದ, ಮೊದಲು ಹುಡುಕಿ ತೆಗೆ ನಿನ್ನಲ್ಲಿ ಯಾವುದು ಮಿಥ್ಯೆ ಅಥವಾ ತಮೋಗ್ರಸ್ತ ಎಂಬುದನ್ನು, ಮತ್ತು ಎಡೆಬಿಡದೆ ಯಾವಾ ಗಲೂ ಅವನ್ನು ಹೊರದೂಡುತ್ತಿರು. ಅಂದರೆ ಮಾತ್ರ ನಿನ್ನ ಪರಿವರ್ತನಕ್ಕಾಗಿ ಭಗ- ವಚ್ಛಕ್ತಿಯನ್ನು ಆಹ್ವಾನಿಸಲು ನಿನಗೆ ಅಧಿಕಾರವುಂಟಾಗುತ್ತದೆ.

ಪರಮೇಶ್ವರನಿಗೆ ಮೀಸಲಾದ ಮಂದಿರದಲ್ಲಿ ಸತ್ಯವೂ ಮಿಥ್ಯೆಯೂ, ತೇಜಸ್ಸೂ

ತಮಸ್ಸೂ, ಸ್ವಾರ್ಪಣವೂ ಸ್ವಾರ್ಥಪರತೆಯೂ ಕೂಡಿ ಒಂದೇ ಕಡೆಗೆ ಬೀಡಾರ ಬಿಡಬಹುದೆಂದು ಸಹಸಾ ತಿಳಿಯಬೇಡ. ಸರ್ವಾಂಗೀಣ ಪರಿವರ್ತನವೇ ಆಗಲುಬೇಕು; ಎಂದೇ ಆತಂಕವಾಗಿ ನಿಲ್ಲುವುದೆಲ್ಲದರ ನಿರಾಕರಣವೂ ಸರ್ವಾಂಗೀಣವೇ ಆಗಿರಬೇಕಾಗುತ್ತದೆ.

ಪರಮೇಶ್ವರ-ನಿಯೋಜಿತವಾದ ನಿಯಮುಗಳನ್ನು ನೀನು ಪಾಲಿಸದಿದ್ದರೂ ಬೇಕಾದಾಗ ಬೇಡಿದ್ದನ್ನು ನಿನಗೆ ಆ ಈಶ್ವರ ಶಕ್ತಿಯು ಒದಗಿಸುವುದೆಂದೂ ಅಥವಾ ಒದಗಿಸಿಯೇ ತೀರತಕ್ಕದ್ದೆಂದೂ ತಿಳಿದಿದ್ದರೆ ಅದು ತೀರ ತಪ್ಪು. ಇಂತಹ ಭ್ರಾಮಕ ಗ್ರಹಿಕೆಯನ್ನು ಬಿಟ್ಟುಬಿಡು. ನಿನ್ನ ಸಮರ್ಪಣವು ನೈಜವಾಗಲಿ, ಸಂಪೂರ್ಣವಾಗಲಿ; ಅಂದರೆ ಆಗ ನಿನಗೋಸ್ಕರ ಉಳಿದೆಲ್ಲವನ್ನೂ ಮಾಡಿಕೊಡಲಾಗುವದು.

ಸಮರ್ಪಣವನ್ನು ಸಹ ಈಶ್ವರಶಕ್ತಿಯೇ ನಿನಗಾಗಿ ಕೈಗೂಡಿಸಿ ಕೊಡುವುದೆಂಬ ಭ್ರಾಮಕ ಮತ್ತು ಆಲಸ ಆಶೆಯನ್ನು ಬಿಟ್ಟುಕೊಡು. ಪರಾಶಕ್ತಿಗೆ ನೀನು ನಿನ್ನನ್ನು ಅರ್ಪಿಸಿಕೊಳ್ಳಬೇಕೆಂದೇನೋ ಈಶ್ವರೇಚ್ಛೆ. ಆದರೆ ಈ ಬಗ್ಗೆ ಬಲವಂತವಿಲ್ಲ. ಅಭಂಗುರವಾದ ಪರಿವರ್ತನವು ಘಟಿಸುವ ವರೆಗೆ, ನೀನು ಬೇಕಾದರೆ ಪರಮೇಶ್ವರನನ್ನು ಮನ್ನಿಸದೆ ಹಿನ್ನೂಕಿಬಿಡಲು, ನಿನ್ನ ಆತ್ಮಸಮರ್ಪಣವನ್ನು ಸಹ ತಿರುಗಿ ತೆಗೆದುಕೊಳ್ಳಲು ಪ್ರತಿಕ್ಷಣವೂ ನೀನು ಸ್ವತಂತ್ರನಿರುವಿ. ಅರ್ಥಾತ್ ಇದೆಲ್ಲದರ ಆಧ್ಯಾತ್ಮಿಕ ಫಲಭೋಗಕ್ಕೆ ನೀನು ಸಿದ್ಧನಿದ್ದರೆ ಮಾತ್ರ. ನಿನ್ನ ಸಮರ್ಪಣವು ಸ್ವಯಂ-ಪ್ರೇರಿತವೂ ಪ್ರಾಂಜಲವೂ ಆಗಿರಲಿಕ್ಕೆಬೇಕು. ಅದು ಜೀವಂತ ಆಧಾರದ ಸಮ-ರ್ಪಣವಾಗಿರಬೇಕಲ್ಲದೆ ಜಡಪುತ್ಥಳಿಯ ಅಥವಾ ಒಂದು ಅಸಹಾಯ ಯಂತ್ರದ ಸಮರ್ಪಣವಲ್ಲ.

ತಾಮಸಿಕ ನಿಷ್ಕ್ರಿಯತೆಗೇ ದಿಟವಾದ ಸಮರ್ಪಣವೆಂದು ಸದಾ ಭ್ರಮಿಸುತ್ತಿ-ರುವದುಂಟು. ಆದರೆ ಸತ್ಯಯುಕ್ತವಾದ ಮತ್ತು ಶಕ್ತಿಯುಕ್ತವಾದ ಅಂಥದಾವುದೂ ತಾಮಸಿಕ ನಿಷ್ಕ್ರಿಯತೆಯಿಂದ ಉದ್ಭವಿಸಲಾರದು. ಭೌತಿಕ ಪ್ರಕೃತಿಯ ತಾಮಸಿಕ ನಿಷ್ಕ್ರಿಯತೆಯೇ ಆ ಪ್ರಕೃತಿಯನ್ನು ಎಲ್ಲ ಬಗೆಯ ಅಸ್ಪಷ್ಟ ಅಥವಾ ಅದಿವ್ಯ ಪ್ರಭಾವಕ್ಕೆ ಈಡುಮಾಡುತ್ತದೆ. ದಿವ್ಯಶಕ್ತಿಯ ಕಾರ್ಯ ಸೌಲಭ್ಯಕ್ಕಾಗಿ ಆನಂದಯುತ, ಬಲಯುತ, ಸಹಕಾರಯುತ ಶರಣಾಗತಿ ಬೇಕು. ಜ್ಞಾನದೀಪ್ತನಾದ ಸತ್ಯಾನ್ವೇಷಕ ಶಿಷ್ಯನ ವಿಧೇಯತೆ ಬೇಕು. ಮಬ್ಬನ್ನೂ ಹುಸಿಯನ್ನೂ ಎದುರಿಸಿ ಚದುರಿಸುವ ಅಂತರ್-ಲೋಕದ ವೀರಯೋದ್ಧನ ಆಜ್ಞಾಧಾರಕತೆ ಬೇಕು. ಏಕನಿಷ್ಠ ಭಗವತ್ಕಿಂಕರನ ಅನುಸರಣಶೀಲತೆ ಬೇಕು.

ಇದೇ ಸರಿಯಾದ ನಿಲುಮೆಯು. ಈ ನಿಲುಮೆಯನ್ನು ಹೊಂದಿ ಇದನ್ನು ಕಾಯ್ದುಕೊಳ್ಳಬಲ್ಲವರ ಶ್ರದ್ಧೆಯು ಮಾತ್ರ, ವಿಫಲತೆ-ವಿಪತ್ತುಗಳ ಮಧ್ಯದಲ್ಲಿದ್ದಾಗ ಸಹ ಅಲುಗದೆ ಇರಬಲ್ಲದು. ಹಾಗೂ ಅವರೇ ಕೊನೆಗೆ ಸತ್ತ್ವಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಆ ಚರಮವಿಜಯುವನ್ನೂ ಆ ಪರಮಪರಿವರ್ತನವನ್ನೂ ಹೊಂದುವರು.

೨

ಎಲ್ಲ ವಿಶ್ವವ್ಯಾಪಾರಗಳ ಹಿಂದೆ ತನ್ನ ಶಕ್ತಿಯ ಮುಖಾಂತರ ಪರಮೇಶ್ವರನೇ ಇದ್ದುಕೊಂಡಿದ್ದಾನೆ. ಆದರೆ ಆತನು ತನ್ನ ಯೋಗಮಾಯೆಯಿಂದ ಆವೃತನು. ಅಪರಾಪ್ರಕೃತಿಯಿಂದ ಕೂಡಿದ ಜೀವಾತ್ಮನ ಅಹಂಕಾರ ಮೂಲಕವಾಗಿ ಅವನು ಕೆಲಸ ಸಾಗಿಸುತ್ತಾನೆ.

ಇದೇ ವಿಧವಾಗಿ ಯೋಗದಲ್ಲಿಯೂ ಪರಮೇಶ್ವರನೇ ಸಾಧಕ, ಪರಮೇಶ್ವರನೇ ಸಾಧನೆ. ಆತನ ಶಕ್ತಿಯೇ ತನ್ನ ಜ್ಯೋತಿ, ಸಾಮರ್ಥ್ಯ, ಜ್ಞಾನ, ಚೈತನ್ಯ, ಆನಂದಾದಿಗಳ ಸಹಾಯದಿಂದ, ಆಧಾರದ ಮೇಲೆ, ತನ್ನ ಕಾರ್ಯ ಸಾಗಿಸುತ್ತ ನಡೆದಿದ್ದಾಳೆ. ಮತ್ತು ಆಧಾರವು ಸೆರೆಗೊಡ್ಡಿದಾಗ ಆಕೆಯೇ ಈ ಎಲ್ಲ ದಿವ್ಯ ಐಶ್ವರ್ಯಗಳನ್ನು ಆಧಾರದಲ್ಲಿ ತುಂಬುತ್ತ ಈ ಮೂಲಕ ಸಾಧನವನ್ನು ಸಿದ್ಧಿಗೆ ತರುತ್ತಾಳೆ. ಆದರೆ ಸಾಧಕನ ನಿಮ್ನ ಸ್ವಭಾವವೇ ಕರ್ಮಪ್ರವೃತ್ತವಾಗಿರುವ ತನಕ ಸಾಧಕನ ವೈಯಕ್ತಿಕ ಪ್ರಯತ್ನದ ಅವಶ್ಯಕತೆ ಉಂಟೇ ಉಂಟು.

ಈ ವೈಯಕ್ತಿಕ ಪ್ರಯತ್ನವು ಮೂರು ಬಗೆಯ ಸಾಧನವನ್ನು ಒಳಗೊಂಡಿದೆ. ಅವೆಂದರೆ ಅಭೀಪ್ಸೆ, ತ್ಯಾಗ, ಸಮರ್ಪಣ,—

**ಅಭೀಪ್ಸೆ :** ಅಭೀಪ್ಸೆಯು ಜಾಗ್ರತ ಸ್ವರೂಪದ್ದೂ ಅವಿರತವಾದದ್ದೂ ಅವಿಚ್ಛಿನ್ನವಾದದ್ದೂ ಇರಬೇಕು ; ಅಂದರೆ ಮನಸ್ಸಿನ ಏಕಾಗ್ರ ಇಚ್ಛೆಯೂ, ಹೃದಯದ ಅನ್ವೇಷಣವೂ ಪ್ರಾಣದ ಸಮ್ಮತಿಯೂ, ದೇಹ ಭಾನವನ್ನೂ ಸ್ವಭಾವವನ್ನೂ ಉನ್ಮುಕ್ತವಾಗಿರಿಸಿ ಬೇಕುಬೇಕಾದಂತೆ ಅವನ್ನೆಲ್ಲ ತಿದ್ದಬಲ್ಲ ಮನೋ ನಿರ್ಧಾರವೂ ಬೇಕು.

**ತ್ಯಾಗ:** ಅಪರಾ ಪ್ರಕೃತಿಯ ಎಲ್ಲ ವೃತ್ತಿಗಳ ತ್ಯಾಗ ; ಅಂದರೆ ಮನದ ಗ್ರಹಿಕೆಗಳ, ಅಭಿಪ್ರಾಯಗಳ, ಅಪೇಕ್ಷೆಗಳ, ರೂಢಿಗಳ ಮತ್ತು ಪರಿಕಲ್ಪನೆಗಳ ಪರಿವರ್ಜನವು ಅಗತ್ಯ. ಹೀಗಿದ್ದ ಅಕ್ಷುಬ್ಧ ಮನದಲ್ಲಿಯೇ ನೈಜ ಜ್ಞಾನಲಾಭಕ್ಕೆ ಮುಕ್ತಾವಕಾಶವು ದೊರಕುವದು. ಪ್ರಾಣಮಯ ಪ್ರಕೃತಿಯ ವಾಸನೆಗಳು, ಬೇಡಿಕೆಗಳು, ಪಿಪಾಸೆಗಳು, ಸಂವೇದನಗಳು, ಉದ್ವೇಗಗಳು, ಸ್ವಾರ್ಥಪರತೆ, ಅಹಂಭಾವ, ಔದ್ಧತ್ಯ, ಕಾಮ, ಲೋಭ, ಮತ್ಸರ, ಅಸೂಯೆ, ಸತ್ಯದ್ವೇಷ ಇವುಗಳನ್ನು ತಳ್ಳಿ ಹಾಕಬೇಕು. ಹೀಗೆ ಅಚಲವಾದ, ಉದಾರವಾದ, ಸಬಲವಾದ, ನಿವೇದಿತವಾದ ಪ್ರಾಣಪುರುಷನಲ್ಲಿ ಮೇಲಿನಿಂದ ನಿಜವಾದ ಶಕ್ತಿ ಮತ್ತು ಆನಂದವರ್ಷಣವಾಗಬಲ್ಲದು. ಜಡ ಶರೀರ ಪ್ರಕೃತಿಯ ಗುಣ ಧರ್ಮಗಳಾದ ವಿಮೂಢತೆ, ಸಂಶಯ, ಅವಿಶ್ವಾಸ, ಅಜ್ಞಾನ, ದುರಾಗ್ರಹ, ಕ್ಷುಲ್ಲಕತನ, ಆಲಸ್ಯ, ಪರಿವರ್ತನಪರಾಙ್ಮುಖತೆ, ತಮೋಭಾವ ಇವುಗಳನ್ನು ದೂರ ದಬ್ಬಿ, ದಿವ್ಯವಾಗುತ್ತ ಸಾಗಿದ ದೇಹದಲ್ಲಿ ತೇಜಸ್ಸಿನ, ಆನಂದದ, ನಿಜವಾದ ಸ್ಥೈರ್ಯವು ನೆಲೆಗೊಳ್ಳುವಂತಾಗಬೇಕು.

**ಸಮರ್ಪಣ :** ಪರಮೇಶ್ವರನ ಬಳಿಗೂ, ಪರಾಶಕ್ತಿಯ ಬಳಿಗೂ ಸ್ವಸಮರ್ಪಣ. ನೀನು ಏನಿರುವಿಯೋ ನಿನ್ನ ಬಳಿ ಏನೆಲ್ಲ ಇರುವದೋ, ಅದೆಲ್ಲವೂ ನಿನ್ನ ಚೈತನ್ಯದ ಪ್ರತಿಸ್ತರವೂ, ಪ್ರತಿವೃತ್ತಿಯೂ, ಸಮರ್ಪಿತವಾಗ ಬೇಕು.

* * *

ಸಮರ್ಪಣವೂ ಆತ್ಮನಿವೇದನವೂ ಹೆಚ್ಚುತ್ತ ಹೋದ ಹೋದ ಹಾಗೆ ಸಾಧಕ ನಿಗೆ ಅನುಭವವಾಗುತ್ತ ಹೋಗುತ್ತದೆ—ಪರಾಶಕ್ತಿಯೇ ತನ್ನಲ್ಲಿ ಸಾಧನ ಸಾಗಿಸಿ-ದ್ದಾಳೆಂಬ ಸಂಗತಿ, ತನ್ನಲ್ಲಿ ಅಧಿಕಾಧಿಕವಾಗಿ ಆಕೆ ವ್ಯಾಪಿಸಿಕೊಳ್ಳುತ್ತಿದ್ದಾಳೆಂಬ ಸಂಗತಿ, ದಿವ್ಯ ಪರಾಪ್ರಕೃತಿಯ ಸ್ವಾತಂತ್ರ್ಯಪರಿಪೂರ್ಣತೆಗಳನ್ನು ತನ್ನಲ್ಲಿ ಪ್ರಸ್ಥಾಪಿ ಸುತ್ತ ಸಾಗಿದ್ದಾಳೆಂಬ ಸಂಗತಿ. ಸಾಧಕನ ಸ್ವಪ್ರಯತ್ನದ ಬದಲು ಈ ಬಗೆಯ ಪ್ರಜ್ಞಾಪೂರ್ಣ ಪರಿಕ್ರಮವೇ ಹೆಚ್ಚು ಹೆಚ್ಚಾಗಿ ಸಾಗಿದಂತೆಲ್ಲ ಅವನ ಪ್ರಗತಿಯೂ ಹೆಚ್ಚು ಹೆಚ್ಚು ದ್ರುತವಾಗುತ್ತ ಖಚಿತವಾಗುತ್ತ ಸಾಗುವುದು. ಆದರೆ ಸಮರ್ಪಣವೂ ನಿವೇದನವೂ ಆಮೂಲಾಗ್ರವಾಗಿ ನಿರ್ದೋಷವೂ ಪರಿಪೂರ್ಣವೂ ಆಗುವತನಕ ಸಾಧಕನು ತನ್ನ ವ್ಯಕ್ತಿಗತ ಪ್ರಯತ್ನವನ್ನು ಸರ್ವಥಾ ಬಿಡತಕ್ಕದ್ದಲ್ಲ.

ನೆನಪಿರಲಿ, ತಾಮಸಿಕ ಸಮರ್ಪಣವು ಅಂದರೆ ಸಮರ್ಪಣದ ಕಟ್ಟುನಿಟ್ಟುಗಳನ್ನು ಪಾಲಿಸಲೊಪ್ಪದ ಎಲ್ಲವನ್ನೂ ಭಗವಂತನೇ ಜರುಗಿಸಿಕೊಡಲೆಂದು ಆತನನ್ನು ಆಹ್ವಾನಿಸುವ ಹಾಗೂ ತನ್ನ ಸಾಧನದ ಸಂಕಷ್ಟ ಸಂಗ್ರಾಮಗಳನ್ನು ಹೀಗೆ ತಪ್ಪಿಸಿಕೊಳ್ಳಲು ಹವಣಿಸುವ ಸಮರ್ಪಣವು ಶುದ್ಧ ಆತ್ಮವಂಚನೆ. ಇದರಿಂದ ಮುಕ್ತಿ, ಸಿದ್ಧಿ ಲಭಿಸವು.

೩

ಜೀವನದ ಪಥದಲ್ಲಿ ಎಲ್ಲ ಬಗೆಯ ಭಯ, ಸಂಕಟ, ದುರ್ಘಟನೆಗಳನ್ನು ಎದುರಿಸಲು ಯುದ್ಧ ಸಜ್ಜಿತನಾಗಿ ನೀನು ಹೆಜ್ಜೆ ಹಾಕಬೇಕೆಂದಿದ್ದರೆ, ಕೇವಲ ಎರಡು ಸಂಗತಿಗಳ ಆವಶ್ಯಕತೆಯುಂಟು. ಇವೆರಡೂ ಸದಾ ಏಕತ್ರವಾಗಿರುವವು. ಒಂದು ಪರಾಮಾತೆಯ ಕರುಣೆ, ಇನ್ನೊಂದು ಶ್ರದ್ಧೆ-ನಿಷ್ಠೆ-ಸಮರ್ಪಣಗಳಿಂದ ಹುರಿಗೊಂಡ ನಿನ್ನ ಅಂತಃಕರಣ. ನಿನ್ನ ಶ್ರದ್ಧೆಯು ಶುದ್ಧವೂ ಅಕಪಟವೂ ನಿರ್ದೋಷವೂ ಆಗಿರಲಿ. ಮನಸ್ಸು ಮತ್ತು ಪ್ರಾಣಗಳಲ್ಲಿ ಉಂಟಾದ ಅಹಂಭಾವಯುಕ್ತ ಶ್ರದ್ಧೆಯು ಅಂದರೆ ಮಹತ್ವಾಕಾಂಕ್ಷೆ, ದಂಭ, ದುರಭಿಮಾನ, ಮನದ ಔದ್ಧತ್ಯ, ಪ್ರಾಣದ ಸ್ವೈರವೃತ್ತಿ, ವ್ಯಕ್ತಿಗತ ಲಾಲಸೆ, ನಿಮ್ನ ಪ್ರಕೃತಿಯ ತುಚ್ಛವಾದ ತೃಪ್ತಿಗಳ ಕಾಮನೆ ಇವೇ ಮೊದಲಾದವುಗಳಿಂದ ಕಲುಷಿತವಾದ ಶ್ರದ್ಧೆಯು ಹೀನ ಶ್ರದ್ಧೆ.

ಈ ಬಗೆಯು ಶ್ರದ್ಧೆಯೆಂದರೆ ಧೂಮಧೂಸರ ಜ್ವಾಲೆ ಇದ್ದ ಹಾಗೆ. ಇದು ಸ್ವರ್ಗಾಭಿಮುಖವಾಗಿ ಉಜ್ವಲವಾಗಿ ಉರಿಯಲಾರದು. ಭಗವತ್ ಕಾರ್ಯಕ್ಕಾಗಿಯೂ, ಭಗವತ್ ಪ್ರಕಟನೆಯಲ್ಲಿಯೂ ಸಹಕರಿಸಲೆಂದೇ ನಿನಗೆ ನಿನ್ನ ಜೀವನವನ್ನು ಕೊಡಲಾಗಿದೆಯೆಂದು ಭಾವಿಸು. ಇನ್ನಾವ ಆಕಾಂಕ್ಷೆಯನ್ನೂ ಇಟ್ಟುಕೊಳ್ಳದೆ, ಭಗವತ್ ಚೇತನಾಯುಕ್ತವಾದ ಪಾವಿತ್ರ್ಯ, ಸಾಮರ್ಥ್ಯ, ಜ್ಯೋತಿ, ವೈಶಾಲ್ಯ, ಪ್ರಶಾಂತಿ, ಆನಂದ ಇವುಗಳ ಆಕಾಂಕ್ಷೆ ಮಾತ್ರ ಇರಲಿ. ಹಾಗೂ ನಿನ್ನ ಮನಸ್ಸು-ಪ್ರಾಣ-ದೇಹಗಳನ್ನು ಪರಿವರ್ತಿಸಿ ಪರಿಪಕ್ವಗೊಳಿಸಲು ಈ ಭಗವತ್-ಚೇತನವು ಸತತವೂ ಉದ್ಯುಕ್ತವಾಗಿರಲಿ. ಇನ್ನೇನನ್ನೂ ಬಯಸದೆ ದಿವ್ಯವಾದ, ಆಧ್ಯಾತ್ಮಿಕವಾದ, ಅತಿಮಾನಸ ಸತ್ಯವನ್ನೇ ಕೋರು. ಈ ಪೃಥ್ವೀತಲದಲ್ಲಿಯೂ, ನಿನ್ನಲ್ಲಿಯೂ, ಆಹ್ವಾನಿತರಾಗಿ ಪರಿಗ್ರಹಿಸಲ್ಪಟ್ಟ ಅಧಿಕಾರಸಂಪನ್ನರಲ್ಲಿಯೂ ಅನುಗ್ರಹಪಾತ್ರರಲ್ಲಿಯೂ ಈ ಅತಿಮಾನಸ ಸತ್ಯದ ಸಿದ್ಧಿಯನ್ನು ಕೋರು ; ಮತ್ತೆ ಈ ಬಗೆಯ ಸತ್ಯಸೃಷ್ಟಿಗೋಸ್ಕರ ಅಗತ್ಯವಾಗಿದ್ದ ಸಮಸ್ತ ಪ್ರತಿಕೂಲ ಶಕ್ತಿಗಳ ಪರಾಜಯಕ್ಕೆ ಬೇಕಾಗಿದ್ದ ಅವಸ್ಥೆ-ವ್ಯವಸ್ಥೆಗಳನ್ನು ಕೋರು.

ನಿನ್ನ ನಿಷ್ಠೆಯೂ, ಸಮರ್ಪಣವೂ ಅಕೃತ್ರಿಮವಾಗಿರಲಿ, ಸಂಪೂರ್ಣವಾಗಿರಲಿ. ನಿನ್ನನ್ನು ನೀನು ಕೊಟ್ಟುಕೊಳ್ಳಬೇಕಾದಾಗ ಯಾವ ಕಟ್ಟು ಕಾಂಕ್ಷೆಗಳಿಲ್ಲದೆ, ಹಿಡಿತ ಬಿಗಿತಗಳನ್ನು ಇಟ್ಟುಕೊಳ್ಳದೆ ನಿಃಶೇಷವಾಗಿ ಕೊಟ್ಟುಕೊಂಡು ಬಿಡು ; ಅಂದರೆ ನಿನ್ನಲ್ಲಿ ಇದ್ದುದೆಲ್ಲವೂ ಆದ್ಯ-ಪರಾಮಾತೆಯ ಸೊತ್ತಾಗಿ ಬಿಡಬೇಕು. ನಿನ್ನ ಅಹಂಭಾವಕ್ಕೆ ಏನೂ ಎಳ್ಳಷ್ಟೂ ಉಳಿಯಬಾರದು. ಇನ್ನಾವ ವಿಪಕ್ಷ ಶಕ್ತಿಗಳಿಗೂ, ಏನನ್ನೂ ಇಡಕೂಡದು, ಕೊಡಕೂಡದು.

ನಿನ್ನ ಶ್ರದ್ಧೆಯು, ನಿನ್ನ ನಿಷ್ಠೆಯು, ನಿನ್ನ ಸಮರ್ಪಣೆಯು ಪರಿಪೂರ್ಣತೆ ಹೊಂದಿದಷ್ಟಷ್ಟು ಆದ್ಯ ಮಾತೆಯ ಅನುಗ್ರಹವೂ ರಕ್ಷಣೆಯೂ ನಿನ್ನನ್ನು ಭದ್ರವಾಗಿ ಸುತ್ತುವರಿದಿರುವುದು. ಆದ್ಯ ಮಾತೆಯ ಅನುಗ್ರಹ ಅಭಯಗಳು ನಿನ್ನ ಜೊತೆಗಿದ್ದು ಬಿಟ್ಟರೆ, ನಿನ್ನನ್ನು ತಡವಬಲ್ಲ ತ್ರಾಣ ಅದಾವುದಕ್ಕೆ ? ಅಥವಾ ನೀನು ಹೆದರಬೇಕಾದ್ದು ಇನ್ನಾರಿಗೆ ? ಭಗವತ್ ಪ್ರಸಾದದ ಅಲ್ಪಾಂಶವು ಸಹ ನಿನ್ನನ್ನು ಸಮಸ್ತ ಸಂಕಷ್ಟ, ಬಾಧೆ, ವಿಪತ್ತುಗಳಿಂದ ಪಾರುಮಾಡುವುದು. ಎಂದ ಮೇಲೆ ಆಕೆಯ ಸಂಪೂರ್ಣ ಸಾನ್ನಿಧ್ಯವೇ, ಸುತ್ತುವರಿದು ಬಿಟ್ಟದ್ದರಂತೂ ಕೇಳುವುದೇನು ? ನೀನಾಗ ನಿರಾಪದನಾಗಿ ನಿನ್ನ ಮಾರ್ಗಕ್ರಮಣ ಮಾಡಬಲ್ಲೆ. ಏಕೆಂದರೆ ಆ ಮಾರ್ಗ ಆಕೆಯದೇ. ಈ ಲೋಕದ ಅಥವಾ ಅದೃಶ್ಯ ಲೋಕಗಳ ಉಪಟಳವನ್ನು, ವೈರವಿರೋಧವನ್ನು, ಅದೆಷ್ಟೇ ಪ್ರಬಲವಿದ್ದರೂ, ಅದನ್ನು ಉಪೇಕ್ಷಿಸಿ ನೀನು ಸುರಕ್ಷಿತನಾಗಿ ಸಾಗಬಲ್ಲೆ. ಈ ಕೃಪಾಸ್ಪರ್ಶವು ಸಂಕಟವನ್ನು ಸುಯೋಗವಾಗಿ, ವಿಫಲತೆಯನ್ನು ಸಫಲತೆಯಾಗಿ, ದೌರ್ಬಲ್ಯವನ್ನು ಅಮೋಘ ಸಾಮರ್ಥ್ಯವಾಗಿ ಪಲ್ಲಟಿಸಬಲ್ಲದು. ಪರಾ ಮಾತೆಯ ಅನುಗ್ರಹವೆಂದರೆ ಪರಮೇಶ್ವರನ ಅನುಮತಿಯೇ ಆಗಿದೆ. ಆದ್ದರಿಂದ ಇಂದಾಗಲಿ

ನಾಳೆಯೇ ಆಗಲಿ, ಭಗವತ್ ಪ್ರಸಾದದ ಫಲವು, ಖಚಿತ; ಅದು ಪೂರ್ವನಿರ್ದಿಷ್ಟ, ಅನಿವಾರ್ಯ, ಅದಮ್ಯ.



ಧನವು ವಿಶ್ವಚಾಲಕ ಶಕ್ತಿಯ ಒಂದು ಪ್ರತ್ಯಕ್ಷ ಸಂಕೇತ. ಈ ಶಕ್ತಿಯು ಭೂಲೋಕದಲ್ಲಿ ವ್ಯಕ್ತವಾಗಿ ಅದರ ಕಾರ್ಯ ಜರಗುವುದು–ಅನ್ನಮಯ ಪ್ರಾಣಮಯ ಕ್ಷೇತ್ರಗಳಲ್ಲಿ. ಬಾಹ್ಯಜೀವನದ ಪರಿಪೂರ್ಣತೆಗೆ ಧನಬಲವು ಅಪರಿಹಾರ್ಯವಾಗಿದೆ. ಇದರ ಉತ್ಪತ್ತಿ ಮತ್ತು ಯಥಾರ್ಥ ಪ್ರಯೋಜನ ಇವುಗಳ ದೃಷ್ಟಿಯಿಂದ ಈ ಶಕ್ತಿಯು ಈಶ್ವರನದೇ. ಆದರೆ ಈಶ್ವರನ ಇನ್ನುಳಿದ ಶಕ್ತಿಗಳಂತೆ ಇದೂ ಇಲ್ಲಿ ಒಬ್ಬರಿಲ್ಲೊಬ್ಬರ ಕೈಗೆ ಸಿಲುಕಿಕೊಂಡಿದೆ. ಅಪರಾ ಪ್ರಕೃತಿಯ ಅಜ್ಞಾನವಶದಿಂದ ಅಹಂ-ಕಾರವು ಇದನ್ನು ತನ್ನ ತೋಷಕ್ಕಾಗಿ ಅಪಹರಿಸಲೂ ಬಹುದು. ಅಥವಾ ಆಸುರಿಕ ಪ್ರಭಾವಗಳು ಇದನ್ನು ಸ್ವಾಧೀನ ಪಡಿಸಿಕೊಂಡು ವಿಕೃತಗೊಳಿಸಿ ತಮ್ಮ ದುರುದ್ದೇಶಕ್ಕಾಗಿ ಅಪವ್ಯಯಿಸಲೂ ಬಹುದು. ಮಾನವ ಅಹಂಕಾರಕ್ಕೂ ಅಸುರನಿಗೂ ತೀಕ್ಷ್ಣ ಆಕರ್ಷಣಕಾರಕ ಮೂರು ಶಕ್ತಿಗಳಲ್ಲಿ ಧನವೂ ಒಂದು; ಇನ್ನೆರಡು ಅಧಿಕಾರ ಮತ್ತು ಕಾಮ. ಇವು ಮೂರು ಸಾಮಾನ್ಯವಾಗಿ ಅಯೋಗ್ಯರ ವಶವಾಗಿ ಅವರ ಅಪವ್ಯಯಕ್ಕೆ ಗುರಿಯಾಗುವುದೇ ಹೆಚ್ಚು. ಧನಾನ್ವೇಷಕರೂ ಧನಸಂಚಯರತರೂ ಧನದ ಒಡೆಯರಾಗಿರದೆ ಧನದ ಒಡೆತನಕ್ಕೆ ಒಳಪಟ್ಟಿರುವುದೇ ಬಹಳ. ಧನವು ದೀರ್ಘ ಕಾಲ ಅಸುರವಶವಾಗಿ ಅವನ ವಿಕೃತ ದುರ್ವಿನಿಯೋಗ ಮೂಲಕ ಇದಕ್ಕೊಂದು ಬಗೆಯ ದೂಷಿತ ದೃಢ ಮುದ್ರೆ ಬಿದ್ದಿದೆ. ಧನದ ಈ ವಿಕೃತ ಪ್ರಭಾವದಿಂದ ಪಾರಾಗುವವರು ತೀರ ವಿರಳ. ಈ ಕಾರಣಕ್ಕಾಗಿಯೇ ಎಲ್ಲ ಆಧ್ಯಾತ್ಮಪಥಗಳೂ ಸಂಪೂರ್ಣ ಆತ್ಮಸಂಯಮ, ಅನಾಸಕ್ತಿಗಳನ್ನೂ ಎಲ್ಲ ಬಗೆಯ ಧನಸಂಬಂಧೀಯ ಬಂಧನದಿಂದಲೂ ಎಲ್ಲ ಬಗೆಯ ವೈಯಕ್ತಿಕ ಅಹಂಕಾರಯುಕ್ತ ವಿತ್ತವಾಸನೆಯಿಂದಲೂ ಮುಕ್ತ-ರಾಗುವದನ್ನೂ ಮತ್ತೆ ಮತ್ತೆ ಬೋಧಿಸುತ್ತವೆ. ಕೆಲ ಸಾಧನಪಥಗಳಂತೂ ಧನವಿಭವ ಗಳನ್ನು ಬಹಿಷ್ಕರಿಸಿ ಬಾಳ ಬಡತನ ಬರಡುತನಗಳೇ ಆಧ್ಯಾತ್ಮಿಕ ಅವಸ್ಥೆಯೆಂದು ಸಾರುತ್ತವೆ. ಆದರೆ ಇದು ತಪ್ಪು. ಇದರಿಂದ ಧನಬಲವು ದಾನವ ಶಕ್ತಿಗಳ ಹಸ್ತಗತ ವಾಗುವುದು. ಧನಸ್ವಾಮಿಯಾದ ಈಶ್ವರನಿಗೋಸ್ಕರ ಧನವನ್ನು ಪುನಃ ಜಯಿಸಿ ಈಶ್ವರಾರ್ಪಣ ಬುದ್ಧಿಯಿಂದ ದಿವ್ಯ ಜೀವನಕ್ಕಾಗಿ ಅದನ್ನು ಬಳಸಬೇಕು. ಇದೇ ಸಾಧಕನಿಗೆ ಅತಿಮಾನಸಪಥವಾಗಿದೆ.

ಧನ ಶಕ್ತಿ ಮತ್ತು ಅದು ತರುವ ಉಪಾಯ ಉಪಕರಣಗಳಿಂದ ವಿರಾಗಿಯಂತೆ ಮೈಮುದುಡಿ ಮೊಗದಿರುಗಿಸಲೂ ಕೂಡದು, ಅವುಗಳಿಗಾಗಿ ರಾಜಸಿಕ ಆಸಕ್ತಿಯನ್ನು ಪೋಷಿಸಲೂ ಕೂಡದು, ಅಥವಾ ಭೋಗತುಷ್ಟಿಯ ತೊತ್ತಾಗಿ ಲೋಲುಪತೆಗೆ ತುತ್ತಾಗಲೂ ಕೂಡದು. ಧನವೆಂದರೆ ಮಾತೃಸೇವೆಗೆ ಮಾತ್ರ

ಬಳಸಲು ಮತ್ತೆ ಗೆದ್ದು ತರಬೇಕಾದ ಬಲವೆಂದೇ ಭಾವಿಸು.

ಸಮಸ್ತ ಧನಸಂಪತ್ತೂ ಭಗವಂತನದು. ಅದನ್ನಿಟ್ಟುಕೊಂಡವರು ಪಾರು ಪತ್ಯಗಾರರಲ್ಲದೆ ಅದರ ಒಡೆಯರಲ್ಲ. ಇಂದದು ಅವರ ಬಳಿಗಿದ್ದರೆ ನಾಳೆ ಇನ್ನಾರ ಬಳಿಗೊ ಇರಬಹುದು. ತಮ್ಮ ಹತ್ತರ ಇದ್ದಷ್ಟು ದಿನ ಆ ಧನದ ಪಾರುಪತ್ಯಗಾರಿಕೆ ಯನ್ನು ಯಾವ ಭಾವದಿಂದ, ಯಾವ ಬುದ್ಧಿಯಿಂದ, ಯಾವ ಉದ್ದೇಶಕ್ಕಾಗಿ, ಹೇಗೆ ಅವರು ನಿರ್ವಹಿಸುವರು ಎಂಬದರ ಮೇಲೆ ಎಲ್ಲ ಅವಲಂಬಿಸಿದೆ.

ನೀನು ಸ್ವಂತಕ್ಕಾಗಿ ಧನ ಬಳಸುವಾಗ ನಿನ್ನ ಬಳಿಗಿರುವ, ನಿನಗೆ ದೊರಕುವ, ನೀನು ತರುವ ಧನವೆಲ್ಲ ವಿಶ್ವಮಾತೆಯದೆಂದು ತಿಳಿ. ನೀನಾಗಿ ಬೇಕೆಂದು ಬೇಡದೆ ಆಕೆ ಕೊಟ್ಟದ್ದನ್ನೇ ಸ್ವೀಕರಿಸು. ಮತ್ತೆ ಕೊಟ್ಟ ಉದ್ದೇಶಕ್ಕಾಗಿಯೇ ಅದನ್ನು ಬಳಸು. ಸಂಪೂರ್ಣ ನಿಸ್ಪೃಹಿಯಾಗು, ಸರ್ವಥಾ ನ್ಯಾಯನಿಷ್ಠನಾಗು, ಚೊಕ್ಕ ಲೆಕ್ಕ ದವನಾಗು, ವಿವರದಕ್ಷನಾಗು, ಹೀಗೆ ನೀನು ಒಳ್ಳೆಯ ಪಾರುಪತ್ಯಗಾರನಾಗು. ನೀನು ವಿನಿಮಯಿಸುವ ಧನವೆಲ್ಲ ಆಕೆಯದೇ ಎಂದೂ, ನಿನ್ನದಲ್ಲವೆಂದೂ ಸದಾ ಮನದಲ್ಲಿ-ರಲಿ. ಇಷ್ಟೇ ಅಲ್ಲ, ಆಕೆಗೆಂದು ನೀನು ಸ್ವೀಕರಿಸುವದನ್ನೆಲ್ಲ ಶ್ರದ್ಧೆಯಿಂದ ಆಕೆಗೆ ನಿವೇದಿಸಿ ಬಿಡು. ನಿನ್ನ ಇಲ್ಲವೆ ಇನ್ನೊಬ್ಬರ ಪ್ರಯೋಜನಕ್ಕೆಂದು ಅದನ್ನೆಷ್ಟೂ ಬಳಸ ಬೇಡ.

ಐಶ್ವರ್ಯವಂತರೆಂದು ಯಾರಿಗೂ ತಲೆಬಾಗಬೇಡ. ಅವರ ಆಡಂಬರ, ಅಧಿ ಕಾರ, ದರ್ಪಗಳಿಗೆ ಮನಸೋಲಬೇಡ. ಮಾತೃಸೇವೆಗೆಂದು ನೀನು ಧನಯಾಚನೆ ಮಾಡಿದಾಗ, ಆಕೆಯೇ ತನ್ನ ಸ್ವಾಮಿತ್ವಕ್ಕೆ ಒಳಪಟ್ಟ ಸ್ವಂತ ಸೊತ್ತಿನ ಸ್ವಲ್ಪಾಂಶ ವನ್ನು ಮಾತ್ರ ನಿನ್ನ ಮುಖಾಂತರ ಕೇಳಿದ್ದಾಳೆಂದು ನಿನಗನಿಸಬೇಕು. ನೀನು ಬೇಡ ಹೋದ ವ್ಯಕ್ತಿಯ ಮನೋಗತದ ಮೇರೆಗೆ ಅವನ ಪರೀಕ್ಷೆಯಾಗುವುದು.

ಧನದೋಷದಿಂದ ವಿಮುಕ್ತನಾಗಿ, ಆದರೆ ಧನವೆನ್ನುತ್ತಲೇ ವೈರಾಗ್ಯದಿಂದ ನೀನು ಹಿಂದೆಗೆಯದಿದ್ದರೆ ಮಾತ್ರ ಭಗವತ್ ಸೇವೆಗೆ ಧನ ಜಯ ಸಂಪಾದಿಸುವ ಬಲಾಧಿಕ್ಯವು ನಿನ್ನಲ್ಲಿ ಉಂಟಾಗುತ್ತದೆ. ಧನದೋಷದಿಂದ ಬಿಡುಗಡೆಹೊಂದಿದ ಲಕ್ಷಣಗಳೆಂದರೆ ಮನಸ್ಸಿನ ಸಮತೆ, ವಾಸನಾರಾಹಿತ್ಯ ಹಾಗೂ ನಿನ್ನ ಬಳಿಗಿದ್ದುದ ನ್ನೆಲ್ಲ, ನೀನು ಪಡೆವುದನ್ನೆಲ್ಲ, ನಿನ್ನ ಸಮಸ್ತ ಉಪಾರ್ಜನಾಕ್ಷಮತೆಯನ್ನು ಸಹ ಆಕೆಯ ಕಾರ್ಯಕ್ಕಾಗಿ ಸಮರ್ಪಿಸಿ ಬಿಡುವುದು. ಧನದ ಬಗೆಗಾಗಲಿ ಧನದ ವಿನಿ ಯೋಗದ ಬಗೆಗಾಗಲಿ, ಯಾವದೇ ಬಗೆಯ ಮನದ ಹೊಯ್ದಾಟ, ಯಾವದೆ ಬಯಕೆ, ಯಾವದೇ ಬಗೆಯ ಗೊಣಗಾಟ ಇದ್ದುದಾದರೆ, ಇದು ಒಂದಿಲ್ಲೊಂದು ಬಗೆಯ ಕುಂದುಕೊರತೆಯ ಅಥವಾ ಬಂಧನದ ನಿಶ್ಚಿತ ನಿದರ್ಶನವೇ ಸರಿ.

ಈ ಬಗೆಯ ಆದರ್ಶಸಾಧಕನು ಬಡತನದಲ್ಲಿ ಇರಬೇಕಾಗಿ ಬಂದರೆ ಹಾಗೆ ಇರಬಲ್ಲನಿಷ್ಟೇ ಅಲ್ಲ, ಯಾವದೇ ಬಗೆಯ ಅಭಾವ ಭಾವವು ಅವನನ್ನು ಬಾಧಿಸದು, ಅಥವಾ ಅವನ ಅಂತರಂಗದ ದಿವ್ಯ ಚೈತನ್ಯದ ಲೀಲೆಗೆ ಅದಾವ ಆತಂಕವೂ

ಉಂಟಾಗದು. ಸಿರಿವಂತಿಕೆಯಲ್ಲಿರಬೇಕಾಗಿ ಬಂದರೂ ಅವನು ಹಾಗಿರಬಲ್ಲನು. ಸಹಸಾ, ಒಂದು ಕ್ಷಣ ಸಹ, ತಾನು ಬಳಸುವ ಸಂಪತ್ತು ವಿಲಾಸೋಪಕರಣಗಳಲ್ಲಿ ಆಶೆ-ಆಸಕ್ತಿಗಳನ್ನು ತಳೆಯನು, ಭೋಗಪರಾಯಣತೆಯ ದಾಸನಾಗಿ ಸಿರಿತರುವ ದುರಭ್ಯಾಸಗಳ ಬಲಿಗೆ ಬೀಳನು. ಭಗವದಿಚ್ಛೆ, ದಿವ್ಯಾನಂದ ಇವೇ ಅವನ ಸರ್ವಸ್ವ.

ಅತಿಮಾನಸ ಸೃಷ್ಟಿಯಲ್ಲಿ ಧನಬಲವನ್ನು ಭಾಗವತ ಶಕ್ತಿಗೆ ಪುನಃ ಪಡೆದು ಕೊಡಬೇಕಾಗಿದೆ. ಆ ಆದ್ಯ ಮಾತೆಯು ತನ್ನ ಸೃಷ್ಟಿ-ದೃಷ್ಟಿಯ ಪ್ರೇರಣೆಯಲ್ಲಿ ನಿರ್ದೇಶಿಸುವ ರೀತಿಯಲ್ಲಿಯೇ ಅದನ್ನು ಬಳಸಬೇಕಾಗಿದೆ. ಅಂದರೆ ಒಂದು ನವ್ಯೋ-ನವ ದಿವ್ಯಪ್ರಾಣದ, ದಿವ್ಯದೇಹದ ಜೀವನವಿಧಾನದ ಸಲುವಾಗಿಯೂ, ಇವುಗಳ ಸತ್ಯಸುಂದರ ಸುಸಮಂಜಸ ಸಂಘಟನೆ ಹಾಗೂ ವ್ಯವಸ್ಥಾಪನೆಯ ಸಲುವಾಗಿಯೂ ಈ ಧನದ ವಿನಿಯೋಗವಾಗಬೇಕಾಗಿದೆ. ಆದರೆ ಆ ಮುನ್ನ, ಆಕೆಗಾಗಿ ಧನವನ್ನು ಮತ್ತೆ ಗೆದ್ದು ತರುವುದು ಅತ್ಯವಶ್ಯ. ತಮ್ಮ ಸ್ವಭಾವದ ಈ ಅಂಶದಲ್ಲಿ ಸಬಲರೂ ಉದಾರರೂ ಅಹಂಕಾರನಿರ್ಮುಕ್ತರೂ ಆಗಿದ್ದು ಪ್ರತ್ಯಾಶೆ ತೋರದೆ, ತಮಗೆಂದು ತೆಗೆದಿಡದೆ ನಿಃಸಂಕೋಚವಾಗಿ ಆತ್ಮ ಸಮರ್ಪಣೆ ಮಾಡಿದವರಷ್ಟೇ ಈ ಸಂಪದ್ವಿಜಯ ದಲ್ಲಿ ಸರ್ವರಿಗಿಂತ ಅತಿಬಲರಾಗಬಲ್ಲರು. ಅವರೇ ಆ ಮಹಾಶಕ್ತಿಯ ಪರಿಶುದ್ಧ ಸಮರ್ಥ ವಾಹಕರಾಗಬಲ್ಲರು.

ಜ

ನೀನು ಭಗವತ್ ಕಾರ್ಯಗಳ ನಿಜವಾದ ಕರ್ತೃವಾಗಬಯಸಿದ್ದರೆ ನಿನ್ನ ಮೊಟ್ಟ ಮೊದಲ ಗುರಿಯಾಗಿರಲಿಕ್ಕೆಬೇಕು : ಸಕಲ ಕಾಮನೆಗಳಿಂದಲೂ ನಾನು ನಾನೆಂದು ಮೆರೆವ ಅಹಂಭಾವದಿಂದಲೂ ಸರ್ವಥಾ ವಿಮುಕ್ತನಾಗಿರುವುದು. ನಿನ್ನ ಸಮಗ್ರ ಜೀವಿತವನ್ನೇ ಪರಮೇಶ್ವರನಿಗಾಗಿ ಧಾರೆ ಎರೆಯಬೇಕು, ಬಲಿಗೊಡಬೇಕು. ನಿನ್ನ ಸಕಲ ಕರ್ಮದ ಏಕೈಕ ಉದ್ದೇಶವಾಗಿರತಕ್ಕದ್ದು : ಭಗವಚ್ಛಕ್ತಿಯನ್ನು ಸೇವಿಸುವುದು ಆಕೆಯಿಂದ ಬಂದುದನ್ನು ಅಂಗೀಕರಿಸುವುದು, ಆಕೆಯ ಕಾರ್ಯವನ್ನು ಸಾರ್ಥಕ ಗೊಳಿಸುವುದು, ಆಕೆಯ ಲೀಲೆಗಳಲ್ಲಿ ಆಕೆಯ ಪ್ರಕಟನೆಯ ಸಾಧನವಾಗಿರುವುದು, ನಿನ್ನ ಮತ್ತು ಆಕೆಯ ಇಚ್ಛೆಯಲ್ಲಿ ಭೇದವಿಲ್ಲವೆನ್ನುವ ಮಟ್ಟಿಗೆ, ನಿನ್ನಲ್ಲಿ ಆಕೆಯ ಪ್ರೇರಣೆಯಲ್ಲದೆ ಇನ್ನು ಬೇರೆ ಸಂಕಲ್ಪವೇ ಇಲ್ಲವೆನ್ನುವ ಮಟ್ಟಿಗೆ, ನಿನ್ನೊಳಗೆ ಹಾಗೂ ನಿನ್ನನ್ನು ಆಧರಿಸಿ, ಆಕೆಯ ಪ್ರಜ್ಞಾಪೂರ್ಣ ಕ್ರಿಯೆಯಲ್ಲದೆ ಇನ್ನು ಬೇರೆ ಕ್ರಿಯೆಯೇ ಇಲ್ಲವೆನ್ನುವ ಮಟ್ಟಿಗೆ, ನೀನು ಪರಾ ಪ್ರಜ್ಞೆಯಲ್ಲಿ ಬೆಳೆದು ನಿಲ್ಲಲಿಕ್ಕೆಬೇಕು.

ಈ ಬಗೆಯ ಪ್ರಪೂರ್ಣವೂ ಪ್ರಚಲಂತವೂ ಆದ ತಾದಾತ್ಮ್ಯಭಾವವು ಸಾಧಿಸುವ ತನಕ ನೀನೆಂದರೆ ಆಕೆಯ ಸೇವೆಗಾಗಿ ಮೈದಾಳಿದ, ಆಕೆಯ ಪ್ರೀತ್ಯರ್ಥವಾಗಿಯೆ ಎಲ್ಲವನ್ನು ಆಚರಿಸುವ ಜೀವ ಹಾಗು ದೇಹವೆಂದು ಭಾವಿಸು. ನೀನೆ ಕರ್ತಾರನೆಂಬ ಪೃಥಗ್ಭಾವವು ನಿನ್ನಲ್ಲಿ ಪ್ರಬಲಿಸಿದ್ದರೂ, ಆ ಕ್ರಿಯೆ ಮಾಡುವವನು ನೀನೆ ಎಂದು ನಿನಗನಿಸಿದರೂ ಆ ಕಾರ್ಯವೆಲ್ಲ ಆಕೆಗೋಸುಗವೇ ಜರುಗಿಸಲ್ಪಡತಕ್ಕದ್ದು. ಅಹಂ-

ಕಾರಕ್ಕೆ ಬೇಕೆನಿಸಿದ ಎಲ್ಲ ಬಗೆಯ ದುರಾಗ್ರಹ, ಎಲ್ಲ ಬಗೆಯ ಸ್ವಯಂಲಾಭ ಲಾಲಸೆ, ಸ್ವಾರ್ಥಲೋಲುಪ ಕಾಮನೆಯ ಎಲ್ಲ ಬಗೆಯ ಅರೆದಾಟ ಇವನ್ನೆಲ್ಲ ಸ್ವಭಾವದಿಂದ ತಳ್ಳಿಬಿಡಲಿಕ್ಕೆಬೇಕು. ಫಲಾಪೇಕ್ಷೆ ಇರಕೂಡದು. ಪುರಸ್ಕಾರದ ಬೆನ್ನುಹತ್ತಕೂಡದು. ನಿನ್ನ ಪಾಲಿನ ಏಕಮಾತ್ರ ಫಲವೆಂದರೆ ಪರಾಮಾತೆಯ ಪ್ರಸನ್ನತೆ, ಹಾಗು ಆಕೆಯ ಕಾರ್ಯಸಿದ್ಧಿ; ನಿನಗೆ ಸಲ್ಲತಕ್ಕ ಏಕಮಾತ್ರ ಪುರಸ್ಕಾರ ವೆಂದರೆ ಪರಾಪ್ರಜ್ಞೆಯಲ್ಲಿಯೂ, ಸ್ಥೈರ್ಯ ಸಾಮರ್ಥ್ಯ ಆನಂದಗಳಲ್ಲಿಯೂ ನಿನ್ನ ಅವಿಚ್ಛಿನ್ನ ಪ್ರಗತಿ. ಸೇವೆಯ ಆನಂದ, ಕರ್ಮನಿಮಿತ್ತದಿಂದ ನಡೆವ ಅಂತರ್ವಿಕಾಸದ ಆನಂದ ಇವೇ ನಿಸ್ಪೃಹಿಯಾದ ಕಾರ್ಯಕರ್ತನಿಗೆ ತಕ್ಕ ಪ್ರತಿಫಲವಾಗಿವೆ.

ಆದರೆ ನೀನು ಉಪಕರಣ ಮಾತ್ರನಲ್ಲದೆ ಕರ್ತಾರನಲ್ಲವೆಂದು ಹೆಚ್ಚು ಹೆಚ್ಚಾಗಿ ನಿನಗೆ ಅನಿಸತೊಡಗುವ ಸಮಯವೂ ಒಂದು ಬಂದೊದಗುವುದು. ಏಕೆಂದರೆ ಮೊದ ಮೊದಲಿಗೆ ನಿನ್ನ ಭಕ್ತಿಯ ಬಲದಿಂದ ಪರಾಮಾತೆಯ ಕೂಡ ನಿನ್ನ ಸಂಬಂಧವು ಅತ್ಯಂತ ನಿಬಿಡವಾಗಿ ಬಿಡುವುದು. ನಿನಗೆ ಬೇಕೆನಿಸಿದಾಗೆಲ್ಲ ನೀನು ಕೇವಲ ಏಕಾಗ್ರಚಿತ್ತನಾಗಿ ಎಲ್ಲವನ್ನೂ ಆಕೆಯ ಕೈಗೊಪ್ಪಿಸಿಬಿಟ್ಟರೆ ಸಾಕು ಒಡನೆಯೇ ಆಕೆಯ ಮಾರ್ಗದರ್ಶನವನ್ನು, ಆಕೆಯ ಪ್ರತ್ಯಕ್ಷ ಆದೇಶವನ್ನು ಅಥವಾ ಪ್ರೇರಣೆಯನ್ನು ಪಡೆಯುವಿ. ಅಲ್ಲದೆ, ಏನು ಮಾಡಬೇಕು, ಹೇಗೆ ಮಾಡಬೇಕು, ಮತ್ತು ಅದರ ಪರಿಣಾಮವೇನು ಇದೆಲ್ಲದರ ಸುಸ್ಪಷ್ಟ ಸಂಕೇತವೂ ಸಿಕ್ಕುವುದು. ಆ ಮೇಲೆ ನಿನ್ನ ಅನುಭವಕ್ಕೆ ಬರತೊಡಗುವುದು: ಪರಾಶಕ್ತಿಯು, ಕೇವಲ ಪ್ರೇರಣೆಯನ್ನಷ್ಟೇ ಕೊಡದೆ, ದಾರಿಯನ್ನಷ್ಟೆ ತೋರಿಸಿ ಬಿಡದೆ, ನಿನ್ನ ಕಾರ್ಯಗಳ ಪ್ರವರ್ತನೆಯನ್ನೂ ಆಕೆ ಮಾಡುತ್ತಾಳೆಂದು, ಆಕೆಯೇ ಅವುಗಳನ್ನು ಮಾಡಿ ಮುಗಿಸುತ್ತಾಳೆಂದು. ನಿನ್ನ ಗತಿ-ಚಲನವಲನಗಳೆಲ್ಲ ಆಕೆಯಿಂದಲೇ ಹುಟ್ಟಿಬರುತ್ತವೆ, ನಿನ್ನ ಸಕಲ ಶಕ್ತಿಗಳೂ ಆಕೆಯವೇ, ನಿನ್ನ ಮನಸ್ಸು-ಪ್ರಾಣ-ದೇಹಗಳು ಆಕೆಯ ಕ್ರಿಯೆಯ ಚೈತನ್ಯಮಯ ಆನಂದಮಯ ಯಂತ್ರಗಳು, ಆಕೆಯ ಲೀಲೆಯ ಉಪಕರಣಗಳು, ಈ ಜಡ ಜಗತ್ತಿನಲ್ಲಿ ಆಕೆಯ ಪ್ರಕಟನೆಯ ತಕ್ಕ ಪಾತ್ರಗಳವು. ಈ ಬಗೆಯ ಐಕ್ಯತೆ ಮತ್ತು ನಿರ್ಭರತೆಗಿಂತ ಸುಖತರ ಅವಸ್ಥೆಯು ಇನ್ನು ಬೇರೆ ಯಾವುದೂ ಇರಲಾರದು. ಏಕೆಂದರೆ ಈ ಮಟ್ಟಕ್ಕೆ ಮುಟ್ಟಿದ್ದಾದರೆ ಅಜ್ಞಾನದ ಸಂಘರ್ಷ ಸಂಕಷ್ಟ ಜಡಿತವಾದ ಜೀವನದ ಸೀಮಾ ರೇಖೆಯನ್ನು ದಾಟಿ, ಮರಳಿ ನಿನ್ನ ಆತ್ಮಸತ್ತೆಯ ಸತ್ಯದಲ್ಲಿಯೂ, ತದಂತರ್ಗತ ಗಭೀರ ಶಾಂತಿಯಲ್ಲಿಯೂ, ಪ್ರಗಾಢ ಆನಂದದಲ್ಲಿಯೂ ನೀನು ಪ್ರವೇಶ ಪಡೆಯುವೆ.

ಪರಾಮಾತೆಯು ನಿನ್ನೊಳಗೆ ಈ ಬಗೆಯ ಪರಿವರ್ತನವನ್ನು ಜರಗಿಸುತ್ತಿರು ವಾಗ ನಿನ್ನ ವಿಕೃತವಾದ ಸಕಲ ಅಹಂಕಾರ-ಕಲಂಕಗಳಿಂದ ನಿನ್ನನ್ನು ನೀನು ನಿರ್ಮುಕ್ತವಾಗಿರಿಸುವ ಸಂಗತಿಯು ಎಂದಿಗಿಂತ ಹೆಚ್ಚು ಅಗತ್ಯವಿದೆ. ಯಾವದೇ ಬಗೆಯ ಬಯಕೆ ಬೇಡಿಕೆಯಾಗಲಿ, ಹಟವಾಗಲಿ, ಗೊತ್ತಿಲ್ಲದೆ ನಿನ್ನಲ್ಲಿ ನುಸುಳಿ ನಿನ್ನ

ಆತ್ಮಾರ್ಪಣದ ಮತ್ತು ಆತ್ಮಾಹುತಿಯ ಪಾವಿತ್ರ್ಯವನ್ನು ಕಲುಷಿತಗೊಳಿಸದಿರಲಿ. ಕರ್ಮದ ಬಗ್ಗೆ ಅಥವಾ ಕರ್ಮಫಲದ ಬಗ್ಗೆ ಯಾವ ಬಗೆಯ ಆಸಕ್ತಿಯನ್ನೂ ತೊಡ-ಬೇಡ. ಯಾವಬಗೆಯ ಕಟ್ಟು ನಿಟ್ಟುಗಳನ್ನೂ ಹೇರಬೇಡ; ನಿನ್ನನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡಿರಬೇಕಾದ ಆ ಪರಾಶಕ್ತಿಯನ್ನೇ ನೀನು ನಿನ್ನ ಸ್ವಾಧೀನ ಪಡಿಸಿಕೊಳ್ಳಬೇಕೆಂಬ ಹವ್ಯಾಸ ಬೇಡ. ನೀನು ಆಕೆಯ ಉಪಕರಣವೆಂಬ ಹೆಮ್ಮೆಯೂ ಹೊಲ್ಲದು. ಯಾವದೇ ಬಗೆಯ ದಂಭ ಅಥವಾ ಔದ್ಧತ್ಯವೂ ಸಲ್ಲದು. ನಿನ್ನ ಮುಖಾಂತರವಾಗಿ ಕರ್ಮಪ್ರವೃತ್ತವಾಗಿರುವ ಆ ಶಕ್ತಿ ಸಮುದಾಯಗಳ ಮಹಿಮೆ ಯನ್ನು ಮನಸ್ಸು ಪ್ರಾಣ ದೇಹಗಳ, ಅಂಗಪ್ರತ್ಯಂಗಗಳ, ಯಾವ ಅಂಶವೂ ತನ್ನ ಸ್ವಂತದ ಪ್ರಯೋಜನಕ್ಕಾಗಿ ವಿಕೃತಗೊಳಿಸಿ ಬಳಸಕೂಡದು. ಅಥವಾ ತನ್ನ ವ್ಯಕ್ತಿ ಗತ ಪ್ರತ್ಯೇಕ ಸಂತುಷ್ಟಿಗಾಗಿ ಆ ಮಹಿಮೆಯನ್ನು ಹಸ್ತಗತ ಮಾಡಿಕೊಳ್ಳತಕ್ಕದ್ದಲ್ಲ. ನಿನ್ನ ಶ್ರದ್ಧೆ, ನಿನ್ನ ನಿಷ್ಠೆ, ನಿನ್ನ ಅಭೀಪ್ಸೆಯ ಪರಿಶುದ್ಧತೆ ಇವೆಲ್ಲ ಅನನ್ಯವಾಗಿರಲಿ; ಹಾಗೂ ನಿನ್ನ ಇರವಿನ ಸರ್ವಸ್ತರಗಳಲ್ಲಿಯೂ ಸರ್ವ ಕ್ಷೇತ್ರಗಳಲ್ಲಿಯೂ ವ್ಯಾಪಿಸಿರಲಿ. ಹೀಗಾದಾಗ ಎಲ್ಲ ಬಗೆಯ ವಿಕ್ಷೋಭಕಾರಕ, ವಿಕೃತಿಕಾರಕ ವೃತ್ತಿಪ್ರವೃತ್ತಿಗಳು ಕ್ರಮಶಃ ಒಂದೊಂದಾಗಿ ನಿನ್ನ ಸ್ವಭಾವದಿಂದ ಕಳಚಿಬಿಡುತ್ತವೆ.

ಈ ಸಿದ್ಧಿಯ ತುರೀಯ ಅವಸ್ಥೆಗೆ ತಲುಪಿದಾಗ, ಅಂದರೆ ನೀನು ಪರಾಮಾತೆಯ ಕೂಡ ಸಂಪೂರ್ಣ ಬೆರೆತು ಒಂದಾದಾಗ, ನೀನೆಂದರೆ ಭಿನ್ನನೆಂಬ, ಬೇರೊಂದು ಜೀವ ವೆಂಬ, ಆಕೆಯ ಯಂತ್ರವೆಂಬ, ಸೇವಕನೆಂಬ ಅಥವಾ ಆಕೆಯ ಕಾರ್ಯವಾಹಕನೆಂಬ ಭಾವವು ಸಹ ಅಳಿದು ಹೋಗುವುದು. ಆಗ ನಿನಗೆ ಖಚಿತ ಪ್ರತೀತಿಯುಂಟಾಗು ವುದು ನೀನು ಆಕೆಯ ಶಿಶುವೆಂದು, ಆಕೆಯ ಚೈತನ್ಯ ಮತ್ತು ಶಕ್ತಿಯ ಸನಾತನ ಅಂಶವೆಂದು. ನಿರಂತರವಾಗಿ ಆಕೆ ನಿನ್ನಲ್ಲಿಯೂ ನೀನು ಆಕೆಯಲ್ಲಿಯೂ ಇರತೊಡ ಗುವಿರಿ. ನಿನ್ನ ಸಕಲ ಯೋಚನೆ ಗೋಚರಣೆ ಆಚರಣೆಗಳು ನಿನ್ನ ಉಸಿರಾಟ ಮಿಸು ಕಾಟಗಳು ಸಹ ಆಕೆಯಿಂದಲೇ ಎಂದೂ ಮತ್ತು ಅವೆಲ್ಲ ಆಕೆಯವೇ ಎಂದೂ ನಿನಗೆ ಸಹಜವಾಗಿ, ಸ್ವಾಭಾವಿಕವಾಗಿ ಸ್ಥಿರ ಅನುಭವವುಂಟಾಗತೊಡಗುವುದು. ನಿನಗೆ ತಿಳಿಯುವುದು, ತೋರುವುದು, ಅನಿಸುವುದು-ಆಕೆಯೇ ಸ್ವತಃ ತನ್ನ ಅಂಶದಿಂದ ನಿನ್ನನ್ನು ಒಂದು ವ್ಯಕ್ತಿಯ ಮತ್ತು ಶಕ್ತಿಯ ರೂಪದಲ್ಲಿ ನಿರ್ಮಿಸಿರುವಳೆಂದು, ಲೀಲೆಗಾಗಿ ತನ್ನೊಳಗಿಂದಲೇ ನಿನ್ನನ್ನು ಹೊರಗೆ ಪ್ರಕಟಗೊಳಿಸಿರುವಳೆಂದು, ಇಷ್ಟ ಲ್ಲದೆ ನೀನು ಆಕೆಯಲ್ಲಿ ಸರ್ವದಾ ಸುರಕ್ಷಿತವಾಗಿರುವಿಯೆಂದು, ಆಕೆಯ ಸತ್ತೆಯ ಸತ್‌ಸ್ವರೂಪ ನೀನೆಂದು, ಆಕೆಯ ಚೈತನ್ಯದ ಚಿತ್ ಸ್ವರೂಪ ನೀನೆಂದು, ಆಕೆಯ ಶಕ್ತಿಯ ಶಕ್ತಿಸ್ವರೂಪ ನೀನೆಂದು, ಆಕೆಯ ಆನಂದದ ಆನಂದ ಸ್ವರೂಪ ನೀನೆಂದು. ಈ ಬಗೆಯ ಅವಸ್ಥೆಯು ಸರ್ವಾಂಗೀಣವಾಗಿ ಮೈಗೂಡಿದಾಗ ಹಾಗೂ ಅತಿಮಾನಸ ತೇಜೋರಾಜಿಯೇ ನಿನ್ನನ್ನು ಅಬಾಧಿತವಾಗಿ ಪರಿಚಾಲನೆಗೊಳಿಸಲು ಸಮರ್ಥವಾ ದಾಗ ನೀನು ಭಗವತ್ ಕಾರ್ಯದಲ್ಲಿ ಸಿದ್ಧಹಸ್ತನಾಗುವಿ. ಜ್ಞಾನ, ಸಂಕಲ್ಪ, ಕರ್ಮ

ಗಳು ಆಗ ಸುನಿಶ್ಚಿತವೂ ಸಹಜವೂ ದೇದೀಪ್ಯಮಾನವೂ ಸ್ವಯಂಸ್ಫೂರ್ತವೂ ದೋಷ ರಹಿತವೂ ಆಗುವವು. ಅವು ಪರಮೇಶ್ವರನಿಂದಲೇ ಹೊರಹೊಮ್ಮುವವು ಮತ್ತು ಅವೆಲ್ಲ ಚಿರಂತನನ ದಿವ್ಯ ಪರಿಚಾಲನೆಗಳಾಗುವವು.

೬

ಪರಾಮಾತೆಯ ನಾಲ್ಕು ಶಕ್ತಿಗಳು ಆಕೆಯ ನಾಲ್ಕು ಪ್ರಮುಖ ವ್ಯಕ್ತರೂಪ ಗಳಾಗಿವೆ. ಅವು ಆಕೆಯ ದಿವ್ಯತ್ವದ ಅಂಶಗಳು ಮತ್ತು ಮೂರ್ತಸ್ವರೂಪಗಳು. ಇವುಗಳ ಮುಖಾಂತರವಾಗಿಯೇ ಆಕೆ ತನ್ನ ಪ್ರಾಣಿ ಕೋಟಿಗಳನ್ನು ಪರಿಪಾಲಿಸು ತ್ತಾಳೆ. ಲೋಕಲೋಕಾಂತರಗಳಲ್ಲಿಯ ತನ್ನ ಸೃಷ್ಟಿಜಾಲಗಳನ್ನು ಕ್ರಮಗೊಳಿಸಿ ಸಾಮಂಜಸ್ಯವನ್ನು ಉಂಟುಮಾಡುತ್ತಾಳೆ; ಹಾಗೂ ತನ್ನ ಸಹಸ್ರಮುಖ ಶಕ್ತಿ ಗಳಿಗೆ ತಕ್ಕ ಕರ್ಮ ಪ್ರವರ್ತನೆಯನ್ನು ನಿರ್ದೇಶಿಸುತ್ತ ಇರುತ್ತಾಳೆ. ಜಗನ್ಮಾತೆ ಯಾದರೋ ಒಬ್ಬಳೇ. ಆದರೆ ಆಕೆ ನಮಗೆ ನಾನಾ ರೂಪಗಳಲ್ಲಿ ಗೋಚರಿಸು ತ್ತಾಳೆ. ಆಕೆಯ ಶಕ್ತಿಗಳೂ ವ್ಯಕ್ತರೂಪಗಳೂ ಅನೇಕ; ಆಕೆಯ ಅಂಶ ಸಂಭೂತರೂ ವಿಭೂತಿಗಳೂ ಅನೇಕ. ಇವರೆಲ್ಲರೂ ಬ್ರಹ್ಮಾಂಡದಲ್ಲಿ ಆಕೆಯ ಕಾರ್ಯದಲ್ಲಿಯೇ ನಿರತರು. ನಾವು ಆದಿ ಮಾತೆಯೆಂದು ಆರಾಧಿಸುವ ಆ ಏಕಮೇವ ಶಕ್ತಿಯು ವಿಶ್ವಂಭರವಾಗಿರುವ ಆ ದಿವ್ಯ ಚಿಚ್ಛಕ್ತಿಯೇ ಆಗಿದ್ದಾಳೆ. ಈ ಶಕ್ತಿಯು ಏಕಮೇವಳೇನೋ ನಿಜ; ಆದರೂ ಆಕೆ ಬಹುರೂಪಳು. ಆಕೆಯ ವ್ಯಾಪಾರ ಗಳನ್ನು ತಿಳಿಯುವುದು ಅತಿವೇಗವಾದ ಮನಕ್ಕೂ ಅತಿನಿರಂಕುಶವಾದ ಪರಮ ವ್ಯಾಪಕ ಬುದ್ಧಿಗೂ ಅಸಾಧ್ಯ. ಆದಿಮಾತೆಯು ಪರಮೇಶ್ವರನ ಚೈತನ್ಯ ಮತ್ತು ಶಕ್ತಿಯೇ ಆಗಿದ್ದು, ಆಕೆ ತಾನು ನಿರ್ಮಿಸಿದ ಸಮಸ್ತ ಸೃಷ್ಟಿಯಿಂದ ಅದೆಷ್ಟೋ ಮೇಲೆ ನಿಂತವಳಾಗಿದ್ದಾಳೆ. ಆದರೆ ನಾವು ಆಕೆಯ ಮೂರ್ತಸ್ವರೂಪಗಳ ಮುಖಾಂತರವಾಗಿ ಆಕೆಯ ಗತಿ-ರೀತಿಗಳನ್ನು ತುಸುತುಸು ಕಾಣಬಹುದಾಗಿದೆ, ಅನುಭವಿಸಬಹುದಾಗಿದೆ; ಮತ್ತು ಆಕೆಯು ಯಾವ ಯಾವ ದೇವತಾ ಮೂರ್ತಿ ಗಳ ರೂಪಗಳಲ್ಲಿ ತಾನು ಸೃಷ್ಟಿಸಿದ ಜೀವಕೋಟಿಗಳಿಗೆ ಸ್ಪಷ್ಟವಾಗಿ ಗೋಚರಿಸಲು ಸಮ್ಮತಿಸಿರುವಳೋ, ಆ ದೇವತಾ ಮೂರ್ತಿಗಳ ರೂಪಗಳೆಲ್ಲ ಹೆಚ್ಚು ಸುಲಭಗಮ್ಯ ವಾಗಿವೆ. ಏಕೆಂದರೆ ಅವುಗಳ ಗುಣಕರ್ಮಗಳು ಬಹಳಮಟ್ಟಿಗೆ ಸುನಿರ್ದಿಷ್ಟವೂ ಮರ್ಯಾದಿತವೂ ಆಗಿರುತ್ತವೆ.

ಆದಿಮಾತೆಯ ಅಸ್ತಿತ್ವವು ತ್ರಿವಿಧವಾಗಿದೆ. ನಮ್ಮನ್ನೂ ಈ ಬ್ರಹ್ಮಾಂಡವನ್ನೂ ಧಾರಣಮಾಡಿರುವ ಆ ಚಿಚ್ಛಕ್ತಿಯೊಡನೆ ನೀನು ಏಕೀಭಾವದ ಸಂಸ್ಪರ್ಶವನ್ನು ಹೊಂದತೊಡಗಿದಾಗ ಈ ತ್ರಿವಿಧ ಅಸ್ತಿತ್ವದ ಪ್ರತೀತಿಯು ನಿನಗೆ ಉಂಟಾಗುವುದು. ಮೊದಲನೆಯದಾಗಿ ಪರಾತ್ಪರಳಾದ ಆ ದಿವ್ಯಶಕ್ತಿಯು ವಿಶ್ವೋತ್ತೀರ್ಣಳಾಗಿದ್ದಾಳೆ. ಈ ರೂಪದಲ್ಲಿ ಆಕೆಯು ಸಕಲ ಲೋಕಗಳಾಚೆಗೆ ಮೇಲಿದ್ದುಕೊಂಡು ಅಲ್ಲಿಂದ, ಪರ-

ಮೇಶ್ವರನ ನಿತ್ಯ ಅವ್ಯಕ್ತ ರಹಸ್ಯದ ಜತೆಗೆ ಈ ಸೃಷ್ಟಿಯ ಸಂಬಂಧವನ್ನು ಜೋಡಿಸುತ್ತಾಳೆ. ಎರಡನೆಯದಾಗಿ ಆಕೆ ವಿಶ್ವಂಭರಳೂ, ವಿಶ್ವರೂಪಳೂ ಆದ ಮಹಾಶಕ್ತಿಯಾಗಿದ್ದಾಳೆ. ಈ ರೂಪದಲ್ಲಿ ಆಕೆಯು ಜೀವರಾಶಿಗಳನ್ನು ಸೃಷ್ಟಿಸುತ್ತಾಳೆ, ಅವುಗಳನ್ನು ತನ್ನೊಳಗೆ ಧರಿಸುತ್ತಾಳೆ, ಅವೆಲ್ಲವುಗಳಲ್ಲಿ ಹೊಕ್ಕು ಹರಿದಾಡುತ್ತ ಪರಿಪೋಷಿಸುತ್ತಾಳೆ ಮತ್ತು ಅನಂತಕೋಟಿ ವ್ಯಾಪಾರ ವಿಧಾನಗಳನ್ನೂ ಶಕ್ತಿ ಸಂದೋಹಗಳನ್ನೂ ಸಂಚಾಲಿಸುತ್ತಾಳೆ. ಮೂರನೆಯದಾಗಿ ಆಕೆಯು ವ್ಯಕ್ತಿಗತ ಸ್ವರೂಪಳೂ ಆಗಿದ್ದಾಳೆ. ಈ ವ್ಯಕ್ತಿಗತ ರೂಪದಲ್ಲಿ ಆಕೆ ತನ್ನ ಈ ಇಬ್ಬಗೆಯ ಬೃಹತ್ತರ ಅಸ್ತಿತ್ವಗಳ ಮೂರ್ತಿಮಂತ ಶಕ್ತಿಸ್ವರೂಪಳಾಗಿ, ಅವು ನಮಗೆ ಸಜೀವವಾಗಿಯೂ ನಿಕಟವರ್ತಿಯಾಗಿಯೂ ಗೋಚರಿಸುವಂತೆ ಮಾಡುತ್ತಾಳೆ. ಅಲ್ಲದೆ ಈ ರೂಪದಲ್ಲಿ, ಮಾನವ ಆಧಾರ ಮತ್ತು ದಿವ್ಯಪ್ರಕೃತಿಗಳ ನಡುವೆ ಆಕೆ ಸೇತುವೆಯಾಗಿ ವ್ಯವಹರಿಸುತ್ತಾಳೆ.

ಅದ್ವಿತೀಯಳಾದ ಆದ್ಯ ಪರಾಶಕ್ತಿಯ ರೂಪದಲ್ಲಿ ಆದಿಮಾತೆಯು ಅಖಿಲ ಲೋಕಗಳ ಊರ್ಧ್ವಸ್ಥ ಅಧೀಶ್ವರಿಯಾಗಿದ್ದು ತನ್ನ ಸನಾತನ ಚೈತನ್ಯದಲ್ಲಿ ಪುರುಷೋತ್ತಮನನ್ನು ಧಾರಣಮಾಡಿಕೊಂಡಿರುತ್ತಾಳೆ. ಕೇವಲ ಆಕೆಯೊಬ್ಬಳೇ ಪರಾತ್ಪರ ಪರಮಶಕ್ತಿಗೂ ವಾಚಾಮಗೋಚರವಾದ ಸತ್ತೆಗೂ ತನ್ನಲ್ಲಿ ಆಶ್ರಯ ಕೊಟ್ಟಿರುತ್ತಾಳೆ. ವ್ಯಕ್ತವಾಗಲೇಬೇಕಾಗಿರುವ ಸತ್ಯಗಳೆಲ್ಲವನ್ನೂ ಆಕೆ ತಾನೇ ಅಳವಡಿಸಿಕೊಂಡು ಅಥವಾ ಅವುಗಳನ್ನು ಆಹ್ವಾನಿಸಿ, ಅತಿನಿಗೂಢ ಪರಮರಹಸ್ಯದಲ್ಲಿ ಅಡಗಿದ್ದ ಅವುಗಳನ್ನು ತನ್ನ ಅಸೀಮ ಚೈತನ್ಯದ ಬೆಳಕಿನಲ್ಲಿ ಕೆಳಗೆ ಕರೆತರುತ್ತಾಳೆ. ಮತ್ತೆ, ತನ್ನ ಓರ್ವ ಸಮರ್ಥವಾದ ಶಕ್ತಿಯಿಂದಲೂ ತನ್ನ ಅಪಾರ ಪ್ರಾಣಧಾರೆಯಿಂದಲೂ ಅವುಗಳಿಗೆ ಈ ವಿಶ್ವಲೀಲೆಯಲ್ಲಿ ಶಕ್ತಿಯ ಒಂದೊಂದು ವಿಶೇಷ ರೂಪವನ್ನು ನೀಡಿದ್ದಾಳೆ. ಆಕೆಯಲ್ಲಿಯೇ ಪುರುಷೋತ್ತಮನು ನಿತ್ಯ ನಿರಂತರ ಸಚ್ಚಿದಾನಂದ ರೂಪದಲ್ಲಿ ಪ್ರಕಟನು. ಆಕೆಯನ್ನು ಆಶ್ರಯಿಸಿಯೇ ಆತನು ಈಶ್ವರ ಶಕ್ತಿಯ ದ್ವೈತಾದ್ವೈತ ಚೈತನ್ಯರೂಪವಾಗಿ ಮತ್ತು ಪುರುಷ ಪ್ರಕೃತಿಯ ದ್ವೈತತತ್ತ್ವರೂಪವಾಗಿ ಸಕಲ ಲೋಕಗಳಲ್ಲಿ ಪ್ರಕಟನಾಗಿದ್ದಾನೆ. ಆಕೆಯ ನೆರವಿನಿಂದಲೇ ಆತನು ಸಮಸ್ತ ಭುವನಗಳಲ್ಲಿ, ಚೈತನ್ಯಸ್ತರಗಳಲ್ಲಿ, ದೇವತೆಗಳಲ್ಲಿ, ದೇವತಾಶಕ್ತಿಗಳಲ್ಲಿ ವ್ಯಾವೆತ್ತಿದ್ದಾನೆ. ಆಕೆಯಿಂದಾಗಿಯೇ ಆ ಪರಮ ಪುರುಷನು ಜ್ಞಾತಾಜ್ಞಾತವಾದ ಇನ್ನೂ ಅನ್ಯಾನ್ಯ ಲೋಕಗಳಲ್ಲಿ ಏನೇನು ಉಂಟೋ ಅದೆಲ್ಲದರಲ್ಲೂ ಸಾಕಾರ ರೂಪನಾಗಿದ್ದಾನೆ. ಎಲ್ಲವೂ ಪುರುಷೋತ್ತಮನೊಡಗೂಡಿ ಮಾಡುವ ಆಕೆಯ ಲೀಲೆಯೇ ಆಗಿದೆ. ಸಕಲ ಸನಾತನ ರಹಸ್ಯಗಳೂ ಅನಂತ ತತ್ತ್ವದ ಅಲೌಕಿಕ ಚಮತ್ಕಾರಗಳೂ ಆಕೆಯ ಅಭಿವ್ಯಕ್ತಿಯೇ. ಎಲ್ಲವೂ ಆಕೆಯೇ. ಏಕೆಂದರೆ ಸರ್ವಸ್ವವೂ ದಿವ್ಯ ಚಿಚ್ಛಕ್ತಿಯ ಅಂಶವೇ, ಅವಿಭಾಜ್ಯ ಅಂಗವೇ. ಆಕೆಯ ನಿರ್ದೇಶವಿಲ್ಲದೆ, ಮತ್ತು ಪರಮ ಪುರುಷನ ಅನುಮತಿಯಿಲ್ಲದೆ, ಇಹದಲ್ಲಿಯೇ

ಆಗಲಿ, ಇನ್ನೆಲ್ಲಿಯೇ ಆಗಲಿ, ಯಾವುದೂ ಘಟಿಸಲಳವಲ್ಲ. ಪರಮ ಪುರುಷನ ಪ್ರೇರಣೆಯ ಮೇರೆಗೆ ಆಕೆಯು ತನ್ನ ದಿವ್ಯದೃಷ್ಟಿಯಲ್ಲಿ ಕಂಡ ಹಾಗೂ ತನ್ನ ಸೃಷ್ಟಿಯ ಆನಂದದಲ್ಲಿ ಬೀಜ ರೂಪವಾಗಿ ಎರಕ ಹಾಕಿ ಆಕಾರಕೊಡುವ ವಸ್ತುಗಳಷ್ಟೇ, ರೂಪಗ್ರಹಣ ಮಾಡಬಲ್ಲವು.

ಮಹಾಶಕ್ತಿಯು—ವಿಶ್ವಮಾತೆಯು, ಪರಾತ್ಪರ ಪುರುಷನಿಂದ ಬಂದ ತನ್ನ ಪರಾಚೈತನ್ಯವು ಪ್ರಚೋದಿಸಿದ ಹಾಗೆ ಸೃಷ್ಟಿ ವ್ಯಾಪಾರದಲ್ಲಿ ತೊಡಗುತ್ತಾಳೆ. ಹಾಗೂ ತಾನು ಉಂಟು ಮಾಡಿದ ಭುವನಗಳಲ್ಲೆಲ್ಲ ಹಾಸು ಹೊಕ್ಕಾಗಿರುತ್ತಾಳೆ. ಆಕೆಯ ಸಾನ್ನಿಧ್ಯವು ಎಲ್ಲೆಲ್ಲೂ ಆವರಿಸಿ ದಿವ್ಯೋತ್ಸಾಹ, ಸರ್ವ ಪರಿಪೋಷಕವಾದ ದಿವ್ಯ ಶಕ್ತಿ ಮತ್ತು ದಿವ್ಯಾನಂದಗಳಿಂದ ಆ ಭುವನಗಳನ್ನೆಲ್ಲ ಸಂರಕ್ಷಿಸುತ್ತದೆ. ಈ ದಿವ್ಯೋತ್ಸಾಹ, ಈ ದಿವ್ಯಶಕ್ತಿ, ಈ ದಿವ್ಯಾನಂದಗಳ ನೆರವಿಲ್ಲದೆ ಈ ಭುವನಗಳಿಗೆ ಅಸ್ತಿತ್ವವೇ ಅಸಂಭವವಾಗಿಬಿಡುತ್ತಿತ್ತು. ನಾವು ಪ್ರಕೃತಿಯೆಂದು ಕರೆಯುವುದು, ಮಹಾಶಕ್ತಿಯ ಬಾಹ್ಯತಮ ವ್ಯಾವಹಾರಿಕ ಕ್ರಿಯಾರೂಪಮಾತ್ರವಾಗಿದೆ. ಮಹಾಶಕ್ತಿಯು ತನ್ನ ಶಕ್ತಿಗಳ ಕ್ರಿಯಾವ್ಯೂಹಗಳ ಸಾಮಂಜಸ್ಯವನ್ನು ಕ್ರಮಗೊಳಿಸಿ ಸರಿಪಡಿಸುತ್ತಾಳೆ. ಪ್ರಕೃತಿಯ ಕಾರ್ಯಗಳಿಗೆ ಪ್ರೇರಣೆ ಕೊಡುತ್ತಿರುತ್ತಾಳೆ. ನಾವು ಕಾಣುವ ಅನುಭವಿಸುವ, ಜೀವನ–ಗತಿಯಲ್ಲಿ ಹರಿದಾಡಿಸುವ, ಎಲ್ಲದರಲ್ಲಿಯೂ ಆಕೆಯೇ ಗುಪ್ತವಾಗಿಯೋ ವ್ಯಕ್ತವಾಗಿಯೋ ಪರಿಚಲಿಸುತ್ತ ಇರುತ್ತಾಳೆ. ಒಂದೊಂದು ಲೋಕವೂ ಆಯಾ ಮಂಡಲಗಳ ಅಥವಾ ಬ್ರಹ್ಮಾಂಡದ ಮಹಾಶಕ್ತಿಯ ಒಂದು ಲೀಲೆಯಾಗಿದೆ. ಈ ಮಹಾಶಕ್ತಿಯು ಆಯಾ ಲೋಕಗಳಲ್ಲಿ ಆದ್ಯಶಕ್ತಿಯ ವಿರಾಟ ಆತ್ಮಸತ್ತೆಯಾಗಿಯೂ ವಿಶ್ವರೂಪಳಾಗಿಯೂ ಇರುತ್ತಾಳೆ. ಪ್ರತಿಲೋಕವೂ ಆಕೆ ತನ್ನ ದಿವ್ಯ ದೃಷ್ಟಿಯಲ್ಲಿ ಕಂಡಂತಹದು., ತನ್ನ ಸೌಂದರ್ಯಸಂಪನ್ನ ಶಕ್ತಿಮಯ ಹೃದಯ ಸಂಪುಟದಲ್ಲಿ ಧರಿಸಿದಂತಹದು, ತನ್ನ ಆನಂದದಲ್ಲಿ ನಿರ್ಮಿಸಿದಂತಹದು.

ಆದರೆ ಆಕೆಯ ಸೃಷ್ಟಿಯು ಅನೇಕ ಸ್ತರಗಳಲ್ಲಿ ಉಂಟು, ದಿವ್ಯಶಕ್ತಿಯ ಮೆಟ್ಟಿಲುಗಳೂ ಅನೇಕ ಉಂಟು. ನಾವು ಯಾವ ಲೋಕದ ಅಂಗವಾಗಿರುವೆವೋ ಅಂಥ ಈ ಅಭಿವ್ಯಕ್ತಿಯ ತುಟ್ಟತುದಿಗುಂಟು ಅನಂತ ಅಸ್ತಿತ್ವದ, ಚೈತನ್ಯದ, ಶಕ್ತಿಯ, ಆನಂದದ ಅನೇಕ ಲೋಕಗಳು. ಅವೆಲ್ಲವುಗಳ ಮೇಲೆ ಆದಿಮಾತೆಯು ಅನಾವೃತ-ಶಾಶ್ವತ-ಶಕ್ತಿಸ್ವರೂಪಳಾಗಿ ನಿಂತಿದ್ದಾಳೆ. ಅಲ್ಲಿಯ ಜೀವಕೋಟಿಗಳೆಲ್ಲ ಅನಿರ್ವಚನೀಯವಾದ ಪ್ರಪೂರ್ಣತೆ, ಹಾಗೂ ನಿರ್ವಿಕಾರವಾದ ಏಕತೆಗಳಲ್ಲಿ ವಾಸಿಸುತ್ತವೆ, ವಿಹರಿಸುತ್ತವೆ. ಏಕೆಂದರೆ ಆಕೆಯೇ ಅವುಗಳನ್ನು ಸುರಕ್ಷಿತವಾಗಿ ಚಿರಕಾಲವೂ ತನ್ನ ತೋಳುಗಳಲ್ಲಿ ತಳೆದುಕೊಂಡಿದ್ದಾಳೆ. ಈ ಲೋಕಗಳಿಗಿಂತ ನಮಗಿನ್ನೂ ಸಮೀಪಕ್ಕುಂಟು, ಸರ್ವಾಂಗ ಪೂರ್ಣವಾದ ಅತಿಮಾನಸ ಸೃಷ್ಟಿಯ ಲೋಕಗಳು. ಈ ಲೋಕಗಳಲ್ಲಿ ಆದಿಮಾತೆಯು ಅತಿಮಾನಸ ಮಹಾಶಕ್ತಿಯಾಗಿದ್ದಾಳೆ. ಅಲ್ಲಿ ಆಕೆ ದಿವ್ಯವಾದ ಸರ್ವಜ್ಞ ಸಂಕಲ್ಪಶಕ್ತಿಯುಳ್ಳವಳಾಗಿಯೂ ಸರ್ವಸಮರ್ಥಜ್ಞಾನಸ್ವರೂಪ

ಳಾಗಿಯೂ ವಿರಾಜಿಸುತ್ತಾಳೆ. ಆಕೆಯ ಆ ಶಕ್ತಿಯು ಅಲ್ಲಿ ತನ್ನ ತಪ್ಪರಿಯದ ಕ್ರಿಯೆಗಳಲ್ಲಿ ನಿರಂತರ ಪ್ರಸ್ಫುಟವಾಗಿ ಪ್ರತಿ ಪ್ರಕ್ರಿಯೆಯಲ್ಲಿಯೂ ಸಹಜ ಸಿದ್ಧವಾಗಿ ಇದೆ. ಅಲ್ಲಿಯ ವ್ಯಾಪಾರಗಳೆಲ್ಲ ಸತ್ಯದ ಹೆಜ್ಜೆಗಳೇ. ಅಲ್ಲಿಯ ಜೀವಕೋಟಿಗಳೆಲ್ಲ ದಿವ್ಯಜ್ಯೋತಿಯಿಂದೊಗೆದು ಬಂದ ಜೀವಾಂಶಗಳೇ, ಶಕ್ತಿಸಮೂಹಗಳೇ, ವಿವಿಧ ಶರೀರಗಳೇ. ಅಲ್ಲಿಯ ಅನುಭವಗಳೆಲ್ಲ ನಿಬಿಡವಾದ ಕೇವಲಾನಂದದ ಸಾಗರಗಳು, ಮಹಾಪೂರಗಳು, ತರಂಗ ಮಾಲೆಗಳು. ಆದರೆ ನಾವಿರುವ ಈ ಲೋಕಗಳೋ ಅವಿದ್ಯೆಯಿಂದ ಕೂಡಿದ ಮನೋಮಯ, ಪ್ರಾಣಮಯ, ಅನ್ನಮಯ ಲೋಕಗಳು. ಇವಕ್ಕೆ ಚೈತನ್ಯದ ಮೂಲ ಉದ್ಗಮಸ್ಥಾನದ ಸಂಬಂಧವೇ ತಪ್ಪಿಹೋಗಿದೆ. ಆದರೂ ಈ ಪೃಥ್ವಿಯು ಈ ಅವಿದ್ಯಾಲೋಕದ ಒಂದು ವಿಶೇಷ ಅರ್ಥಪೂರ್ಣಕೇಂದ್ರ ವಾಗಿದ್ದು, ಈ ಪೃಥ್ವಿಯ ಕ್ರಮವಿಕಾಸವು ಒಂದು ಮಹಾಕಠಿಣ ಜಟಿಲ ಪ್ರಕ್ರಿಯೆಯೇ ಆಗಿದೆ. ತಮಸ್ಸು, ಪರಸ್ಪರ ಹೋರಾಟ, ಲೋಪದೋಷಗಳಿಂದ ಕೂಡಿದ ಇಂಥ ಲೋಕವನ್ನು ಸಹ ವಿಶ್ವಜನನಿಯು ಎತ್ತಿಹಿಡಿದಿದ್ದಾಳೆ. ತನ್ನ ಪ್ರೇರಣೆಯ ಮೂಲಕ ಇದನ್ನು ಸಹ ಇದರ ಗೂಢವಾದ ಗುರಿಯತ್ತ ಆ ಮಹಾ ಶಕ್ತಿಯೇ ನಡೆಸಿಕೊಂಡು ಸಾಗಿದ್ದಾಳೆ.

ಅಜ್ಞಾನದ ಈ ಲೋಕತ್ರಯದ ಮಹಾಶಕ್ತಿಸ್ವರೂಪಿಣಿಯಾದ ಪರಾ-ಮಾತೆಯು ಒಂದು ಮಧ್ಯವರ್ತಿಯಾದ ಲೋಕದಲ್ಲಿ ಅಧಿಷ್ಠಿತಳಾಗಿದ್ದಾಳೆ. ಆಕೆಯ ಮೇಲ್ಗಡೆಗುಂಟು, ಈ ಲೋಕದಲ್ಲಿ ತಂದು ತುಂಬಬೇಕಾದ ಅತಿಮಾನಸ ಜ್ಯೋತಿ, ಸತ್ಯಾತ್ಮಕ ಸೃಷ್ಟಿ; ಮತ್ತೆ ಆಕೆಯ ಕೆಳಗಡೆಗುಂಟು, ಚೈತನ್ಯದ ವಿವಿಧ ಸ್ತರಗಳ ಆರೋಹಣ ಅವರೋಹಣದ ಶ್ರೇಣಿಕ್ರಮ. ಈ ಏರಿಳಿತದ ಬಗೆಯು ಒಂದು ಇಬ್ಬ-ಗೆಯ ನಿಚ್ಚಣಿಕೆಯಂತಿದ್ದು ಅದು ಒಂದು ಕಡೆಗೆ ಇಳಿದು ಕಳೆದು ಹೋಗಿದೆ ಜಡದ ನಿಜ್ಞಾನದ ಮಧ್ಯದಲ್ಲಿ; ಇನ್ನೊಂದು ಕಡೆಗೆ ಮತ್ತೆ ಮರಳಿ ಮೇಲೇರಿ ಹೊರಟಿದೆ, ಪ್ರಾಣಹೃದಯ ಮನಗಳನ್ನು ಅರಳಿಸುತ್ತ ಅವುಗಳ ವಿಕಾಸ ಮುಖಾಂ-ತರವಾಗಿ ಪರಮಾತ್ಮನ ಅನಂತತ್ವದ ಮಧ್ಯದಲ್ಲಿ. ಆದಿಮಾತೆಯು ಎಲ್ಲ ದೇವತೆಗಳನ್ನು ಮಿಕ್ಕಿ ಮೀರಿ ನಿಂತಿದ್ದಾಳೆ. ಅಲ್ಲಿ ಆಕೆ ತಾನು ಕಂಡಂತೆ, ಅನುಭವಿಸಿದಂತೆ, ಮತ್ತು ತನ್ನೊಳಗಿಂದ ಹೊರ ಹೊಮ್ಮಿಬಂದಂತೆ, ಈ ಬ್ರಹ್ಮಾಂಡದಲ್ಲಿಯೂ ಈ ಪಾರ್ಥಿವ ಕ್ರಮನಿವರ್ತನೆಯಲ್ಲಿಯೂ ಜರುಗಬೇಕಾಗಿರುವದನ್ನೆಲ್ಲ ನಿರ್ದೇಶಿಸುತ್ತ ಇರುತ್ತಾಳೆ. ಆಕೆಯು ತನ್ನ ಸಮಸ್ತ ಶಕ್ತಿಸಮೂಹವನ್ನೂ ತನ್ನ ವ್ಯಕ್ತ ಸ್ವರೂಪಗಳನ್ನೂ ಕರ್ಮ ನಿರ್ವಹಣಕ್ಕೆಂದು ತನ್ನೊಳಗಿಂದ ತನ್ನ ಸಮ್ಮುಖದಲ್ಲಿ ತಂದು ನಿಲ್ಲಿಸಿಕೊಂಡು ಅವು ಗಳ ಅಂಶಸಂಭೂತರನ್ನು ಈ ಅಧೋಲೋಕಗಳಲ್ಲಿ ಕೆಳಗಿಳಿಸಿ ಕಳಿಸಿಕೊಡುತ್ತಾಳೆ— ಇಲ್ಲಿ ಮಧ್ಯಸ್ಥಿಕೆ ವಹಿಸುವುದಕ್ಕೆ, ಆಳುವುದಕ್ಕೆ, ಕಾದಾಡುವುದಕ್ಕೆ, ಗೆದ್ದು ಪಾದಾ ಕ್ರಾಂತ ಮಾಡುವುದಕ್ಕೆ ಹಾಗೂ ಈ ಲೋಕಗಳ ಯುಗಚಕ್ರಗಳನ್ನು ತಿರುಗಿಸಿ ಸರಿ ಯಾಗಿ ಪರಿಚಾಲನೆಗೊಳಿಸಲಿಕ್ಕೆ, ಇಲ್ಲಿಯ ಶಕ್ತಿ ಸಂದೋಹಗಳ ಸಮಷ್ಟಿಗತ ಮತ್ತು

ವ್ಯಷ್ಟಿಗತ ಕರ್ಮಧಾರೆಗಳಿಗೆ ಇಷ್ಟ ಮಾರ್ಗಗಳನ್ನು ತೋರಿಸಿಕೊಡುವದಕ್ಕೆ. ಈ ಅಂಶಸಂಭೂತರೆಲ್ಲರೂ ಪರಾಮಾತೆಯ ನಾನಾವಿಧ ದಿವ್ಯರೂಪಗಳು, ವ್ಯಕ್ತಮೂರ್ತಿಗಳು. ಇವರ ಮುಖಾಂತರವಾಗಿ ಯುಗಯುಗಾಂತರದಿಂದ ಜನರು ನಾನಾ ನಾಮರೂಪಗಳಲ್ಲಿ ಆದಿಮಾತೆಯನ್ನೇ ಸಂಪೂಜಿಸುತ್ತ ಬಂದಿದ್ದಾರೆ. ಈ ಸಕಲ ಶಕ್ತಿಗಳ ಮತ್ತು ಅಂಶಸಂಭೂತರ ದ್ವಾರವಾಗಿ ಆದಿಮಾತೆಯು ತನ್ನ ಸ್ವಂತ ವಿಭೂತಿಗಳ ದೇಹಗಳನ್ನೂ ಮನಗಳನ್ನೂ ಸಿದ್ಧಗೊಳಿಸುವಂತೆ ರೂಪಿಸುವಂತೆ ತನ್ನ ಈಶ್ವರನ ವಿಭೂತಿಗಳ ಸಲುವಾಗಿಯೂ ಆಕೆ ದೇಹಮನಗಳನ್ನು ಸಿದ್ಧಗೊಳಿಸುತ್ತಾಳೆ, ರೂಪಿಸುತ್ತಾಳೆ. ತನ್ಮೂಲಕ ಈ ಸ್ಥೂಲ ಪ್ರಪಂಚದಲ್ಲಿಯೂ ಛದ್ಮರೂಪದಲ್ಲಿದ್ದ ಮಾನವ ಚೈತನ್ಯದಲ್ಲಿಯೂ ತನ್ನ ಶಕ್ತಿಯ, ಗುಣದ ಹಾಗೂ ಸಾನ್ನಿಧ್ಯದ ಪ್ರಭಾಕಿರಣಗಳನ್ನು ವ್ಯಕ್ತಗೊಳಿಸಬೇಕೆಂದೇ ಆಕೆಯ ಉದ್ದೇಶ. ಈ ಮರ್ತ್ಯಲೋಕದ ಪಾರ್ಥಿವ ಲೀಲೆಯ ದೃಶ್ಯಗಳೆಲ್ಲ ಆಕೆಯಿಂದಲೇ ಸುಸಂಯೋಜಿತ ಸುಕಲ್ಪಿತ ಹಾಗೂ ಸುಅಭಿನೀತವಾದ ಒಂದು ನಾಟಕದಂತಿವೆ. ವಿಶ್ವದೇವತೆಗಳೆಲ್ಲ ಈ ನಾಟಕದಲ್ಲಿ ಆಕೆಯ ಸಹಾಯಕರು; ಸ್ವತಃ ತಾನೇ ತೆರೆಯ ಮರೆಗಿದ್ದ ನಟಿ.

ಪರಾಮಾತೆಯು ಕೇವಲ ಊರ್ಧ್ವಸ್ಥಳಾಗಿ ಅಲ್ಲಿಂದಲೇ ಎಲ್ಲವನ್ನೂ ಆಳುತ್ತಿರುವದಿಲ್ಲ. ಆದರೆ ಈ ನಿಮ್ನತರ ತ್ರಿವಿಧಾತ್ಮಕವಾದ ವಿಶ್ವದಲ್ಲಿಯೂ ಆಕೆ ಇಳಿದು ಬರುತ್ತಾಳೆ. ಆಕೆಯ ನಿರಾಕಾರ ವ್ಯಕ್ತಿತ್ವದ ದೃಷ್ಟಿಯಿಂದ ಹೇಳುವು ದಾದರೆ ಇಲ್ಲಿಯ ಸಮಸ್ತ ವಸ್ತುಸಂಜಾತಗಳು, ಅದೇಕೆ ಅಜ್ಞಾನದ ವೃತ್ತಿಗಳು ಕೂಡ ಆದಿಮಾತೆಯ ಪ್ರಚ್ಛನ್ನ ಶಕ್ತಿರೂಪಗಳೇ ಆಗಿವೆ. ಎಲ್ಲವೂ ಅವಳ ಸೃಷ್ಟಿಯೇ. ಆದರೆ ಅವೆಲ್ಲ ಆಕೆಯ ವಿಕಲ ಸತ್ತ್ವದಿಂದಾದ ಸೃಷ್ಟಿಗಳು. ಒಟ್ಟಾರೆ ಎಲ್ಲವೂ ಆದಿಮಾತೆಯ ಪ್ರಕೃತಿ ಮೂರ್ತಿಗಳು, ಪ್ರಕೃತಿ ಶಕ್ತಿಗಳು. ಅನಂತತೆಯ ಒಡಲಲ್ಲಿ ಅಡಗಿದ್ದ ಅದಾವುದೋ ಒಂದು ಉದ್ದೇಶಸಿದ್ಧಿಯ ಸಲುವಾಗಿ ಪರಮೇಶ್ವರನ ನಿಗೂಢ ಸಂಕೇತದಿಂದ ಪ್ರೇರಿತಳಾಗಿ ಆದಿಮಾತೆಯು ಮಹಾತ್ಯಾಗಕ್ಕೆ ಸಮ್ಮತಿಸಿ ಅಜ್ಞಾನದ ಜೀವ ಮತ್ತು ರೂಪಗಳನ್ನು ಒಂದು ಮುಖವಾಡದಂತೆ ಧರಿಸಿಕೊಂಡಿದ್ದಾಳೆ. ಎಂದೇ ಸಮಸ್ತ ವಸ್ತುಸಂದೋಹಗಳಿಗೂ ಒಂದು ಅಸ್ತಿತ್ವ ಬಂದಿದೆ. ಇನ್ನು ಆಕೆಯ ಸಾಕಾರವಾದ ವ್ಯಕ್ತಿತ್ವದ ದೃಷ್ಟಿಯಿಂದಲೂ ಆದಿಮಾತೆಯು ಕರುಣೆಯಿಂದ ಕೆಳಗಿಳಿದು ತಮಸ್ಸಿನ ಮಧ್ಯದಲ್ಲಿ ಕಾಲಿಕ್ಕಿದ್ದಾಳೆ ತಮಸ್ಸನ್ನು ತೇಜಸ್ಸಿನತ್ತ ಕರೆದೊಯ್ಯಲೆಂದು; ಮಿಥ್ಯೆ ಪ್ರಮಾದಗಳ ಮಧ್ಯದಲ್ಲಿ ಇಳಿದಿದ್ದಾಳೆ ಅವನ್ನು ಸತ್ಯವಾಗಿ ಮಾರ್ಪಡಿಸಲೆಂದು; ಮೃತ್ಯುಮಧ್ಯದಲ್ಲಿ ಬಂದಿದ್ದಾಳೆ ಅದನ್ನು ಅಮರ ಜೀವನವಾಗಿ ಪರಿವರ್ತಿಸಲೆಂದು; ಈ ಭವತಾಪದಲ್ಲಿಯೂ, ಅದರ ದುರ್ದಮ ದುಃಖಯಾತನೆಯಲ್ಲಿಯೂ ನಿಂದಿದ್ದಾಳೆ ತನ್ನ ಪರಮಾನಂದದ ಪರಿವರ್ತನ ಪಟುವಾದ ದಿವ್ಯ ಆನಂದೋಲ್ಲಾಸದಲ್ಲಿ ನೋವು ನರಳುವಿಕೆಗಳನ್ನೆಲ್ಲ ಕೊನೆಗಾಣಿಸಿ ಬಿಡಲೆಂದು. ತನ್ನ ಮಕ್ಕಳ ಮೇಲಿನ ಆಳವಾದ ಮತ್ತು ವೆಗ್ಗಳ

ವಾದ ಕಕ್ಕುಲತೆಯಿಂದಾಗಿ ಆಕೆ ಈ ತಮಸ್ಸಿನ ಮುಸುಕನ್ನು ತನ್ನ ಮೇಲೆ ಹೊದ್ದು ಕೊಳ್ಳಲು ಒಪ್ಪಿದ್ದಾಳೆ. ಅಜ್ಞಾನದ ಮತ್ತು ಅಸತ್ಯದ ಶಕ್ತಿ ಸಮೂಹಗಳ ಆಕ್ರಮಣಗಳನ್ನೂ ಅವುಗಳ ಪ್ರಭಾವಗಳ ಪೀಡನವನ್ನೂ ತಾಳಿಕೊಳ್ಳಲು ಆಕೆ ಕೃಪೆಯಿಂದ ಅಂಗೀಕರಿಸಿದ್ದಾಳೆ. ಮೃತ್ಯುವಿನ ಪರ್ಯಾಯಸಾಮದಂತಿರುವ ಜನ್ಮದ ದ್ವಾರಗಳೊಳಗಿಂದ ಹಾಯ್ದು ಬರುವುದನ್ನೂ ಆಕೆ ಸಹಿಸಿದ್ದಾಳೆ. ಸೃಷ್ಟಿಯ ಕಷ್ಟ ಕ್ಲೇಶಗಳನ್ನೂ ದುಃಖಭೋಗಗಳನ್ನೂ ಸ್ವತಃ ತನ್ನ ಮೇಲೆಯೇ ತೆಗೆದು ಕೊಂಡಿದ್ದಾಳೆ. ಏಕೆಂದರೆ ಈ ವಿಧ ಉಪಾಯದಿಂದ ಮಾತ್ರವೆ ಈ ಸೃಷ್ಟಿ ಯನ್ನು ಜ್ಯೋತಿಯ, ಆನಂದದ, ಸತ್ಯದ, ಅನಂತಜೀವನದ ಮಟ್ಟಕ್ಕೆ ಎತ್ತಬಹು ದೆಂದು ಆಕೆಗೆ ಕಂಡುಬಂದಿತು. ಪುರುಷಯಜ್ಞವೆಂದು ಕೆಲ ಸಲ ಕರೆಯಲಾಗುವ ಮಹಾತ್ಯಾಗವಿದೇ. ಆದರೆ ಇದಕ್ಕೂ ಅದೆಷ್ಟೋ ಗಂಭೀರಾರ್ಥದಲ್ಲಿ ಇದು ಪ್ರಕೃತಿಯ ಆತ್ಮ ಸ್ವಾಹಾಕಾರವಾಗಿದೆ, ದಿವ್ಯ ಜಗನ್ಮಾತೆಯ ನಿಃಶೇಷ ಆತ್ಮ ಯಜ್ಞವಾಗಿದೆ.

ಪರಾಮಾತೆಯ ಚತುರ್ವಿಧ ಬೃಹದ್ರೂಪಗಳೂ ಆಕೆಯ ಚತುರ್ವಿಧ ಪ್ರಮುಖ ಶಕ್ತಿಗಳೂ ಮೂರ್ತಸ್ವರೂಪಗಳೂ ಈ ವಿಶ್ವ ಬ್ರಹಾಂಡದ, ಈ ಪಾರ್ಥಿವ ಲೀಲಾ ವ್ಯಾಪಾರಗಳ ಪರಿಚಾಲನೆಗೆಂದು ಪ್ರಕಟವಾಗಿ ಬಂದು ನಿಂದಿವೆ. ಆಕೆಯ ಒಂದು ಮೂರ್ತಸ್ವರೂಪವು ಪ್ರಶಾಂತ ವಿಶಾಲತೆ, ಸರ್ವಗಮ್ಯಜ್ಞಾನ ಶಾಂತದಯಾಪರತೆ; ಅಪಾರಕಾರುಣ್ಯ, ಸಾರ್ವಭೌಮಿಕವಾದ ಸರ್ವಶ್ರೇಷ್ಠವಾದ ರಾಜದರ್ಪ, ಹಾಗೂ ಸರ್ವಶಾಸಕ ಆಧಿಪತ್ಯ ಇವುಗಳಿಂದ ಕೂಡಿದ್ದಿದೆ. ಇನ್ನೊಂದು ಆಕೆಯ ವೀರ್ಯ-ವಿಕ್ರಮದಿಂದಲೂ, ದುರ್ದಮ ರಾಗವೇಗದಿಂದಲೂ, ಆಕೆಯ ರಣೋತ್ಸಾಹದಿಂದಲೂ, ಆಕೆಯ ಸರ್ವಂಜಯ ಸಂಕಲ್ಪದಿಂದಲೂ, ಆಕೆಯ ಕ್ಷಿಪ್ರತರವೇಗದಿಂದಲೂ, ಪ್ರಳಯಂಕರ ಪ್ರತಾಪದಿಂದಲೂ, ಕೂಡಿದಂತಹದು. ಮೂರನೆಯದು ಆಕೆಯ ಶಿಲ್ಪಿಕೆಯ ನಿಗೂಢ ರಹಸ್ಯದಿಂದ, ಸಾಮಂಜಸ್ಯದಿಂದ, ಛಂದಲಾಲಿತ್ಯದಿಂದ, ಸ್ಫುರ-ದ್ರೂಪವುಳ್ಳದ್ದಿದೆ; ಆಕೆಯ ಜಟಿಲವೂ ಮಾರ್ಮಿಕವೂ ಆದ ಅತಿ-ಸೂಕ್ಷ್ಮರೂಪ ಸಂಪದದಿಂದ ಮಾಧುರ್ಯಮಯವಾಗಿದೆ. ಆಕೆಯ ಬರಸೆಳೆವ ಆಕರ್ಷಕತೆ ಮತ್ತು ಮನಸೆಳೆವ ಸುಕುಮಾರತೆಯಿಂದ ವಿಸ್ಮಯಕರವಾಗಿದೆ. ಇನ್ನು ನಾಲ್ಕನೆಯದು ಆಕೆಯ ಅಂತಜ್ಞಾನದ ಘನನಿಬಿಡ-ಸಾಮರ್ಥ್ಯದಿಂದಲೂ ಜೋಕೆವಿಡಿದುಮಾಡಿದ ತಪ್ಪರಿಯದ ಕರ್ಮಕೌಶಲದ, ಮತ್ತೆ ಪ್ರಶಾಂತವಾದ ಪುಂಖಾನುಪುಂಖವಾದ ಪರಿ-ಪೂರ್ಣತೆಯ ಸಾಮರ್ಥ್ಯದಿಂದಲೂ ಸುಸಜ್ಜಿತವಾಗಿದೆ. ಜ್ಞಾನ–ಬಲ–ಸಾಮಂಜಸ್ಯ ಪ್ರಪೂರ್ಣತೆ ಇವೇ ಆ ನಾಲ್ಕು ಮೂರ್ತಸ್ವರೂಪಗಳ ನಾನಾವಿಧಲಕ್ಷಣಗಳಾಗಿವೆ. ಈ ಶಕ್ತಿಗಳನ್ನೇ ಅವು ಈ ಜಗದೊಳಗೆ ತಮ್ಮ ಸಂಗಡ ತಂದು, ತಮ್ಮ ವಿಭೂತಿ ಗಳಲ್ಲಿ, ಮಾನವಪಾತ್ರದಲ್ಲಿ ಅವನ್ನು ಪ್ರಕಟಗೊಳಿಸುತ್ತ ಇರುವುದುಂಟು. ಪರಾ-ಮಾತೆಯ ಪ್ರತ್ಯಕ್ಷವಾದ ಜೀವಂತ ಪ್ರಭಾವಕ್ಕೆ ತಮ್ಮ ಪಾರ್ಥಿವ ಪ್ರಕೃತಿಯನ್ನು

ತೆರೆದೊಡ್ಡಬಲ್ಲವರಲ್ಲಿ ಈ ಮೂರ್ತಸ್ವರೂಪಗಳು ತಮ್ಮ ತಮ್ಮ ದಿವ್ಯ ಅಧಿಷ್ಠಾನಗಳ ಆರೋಹಣ ಕ್ರಮಕ್ಕೆ ಅನುಗುಣವಾಗಿ ಈ ಶಕ್ತಿ-ವಿಶೇಷಗಳನ್ನು ನೆಲೆಗೊಳಿಸುವವು. ಪರಾಮಾತೆಯ ಈ ನಾಲ್ಕು ಅಭಿವ್ಯಕ್ತ ಶಕ್ತಿಗಳಿಗೆ ಮಾಹೇಶ್ವರಿ, ಮಹಾಕಾಲಿ, ಮಹಾಲಕ್ಷ್ಮಿ, ಮಹಾಸರಸ್ವತಿ, ಎಂದು ನಾವು ನಾಲ್ಕು ಮಹಾನಾಮಗಳನ್ನು ಕೊಟ್ಟಿದ್ದೇವೆ.

ಸರ್ವಸಾಮ್ರಾಜ್ಞಿಯಾದ **ಮಾಹೇಶ್ವರಿಯು,** ವಿಚಾರಪರಮನಸ್ಸು ಮತ್ತು ಸಂಕಲ್ಪ ಇವುಗಳ ಮೇಲ್ಗಡೆಯ ವಿಶಾಲತೆಯಲ್ಲಿ ವಿರಾಜಮಾನಳಾಗಿ ಇವೆರಡೂ ವೃತ್ತಿಗಳನ್ನು ಆಕೆ ಜ್ಞಾನದ ಮತ್ತು ವಿಸ್ತೀರ್ಣತೆಯ ಘನತೆಗೆ ಎತ್ತರಿಸುತ್ತಾಳೆ. ಅಥವಾ ಅವುಗಳ ಆಚೆಗಿನ ಪರಂಜ್ಯೋತಿಯಿಂದ ಪ್ಲಾವಿತಗೊಳಿಸುತ್ತಾಳೆ. ಏಕೆಂದರೆ ಆಕೆ ಶಕ್ತಿಶಾಲಿನಿಯಾದ, ಜ್ಞಾನಸ್ವರೂಪಿಣಿಯಾದ ಏಕೇಶ್ವರಿಯು. ಆಕೆ ನಮ್ಮನ್ನು ತೆರೆದಿರಿಸುತ್ತಾಳೆ: ಅತಿಮಾನಸದ ಅನಂತ ಸತ್ತಿಗಳತ್ತ, ವಿಶ್ವವ್ಯಾಪಕ ವಿಸ್ತೀರ್ಣತೆಯತ್ತ, ಪರಂಜ್ಯೋತಿಯ ಮಹೈಶ್ವರ್ಯದತ್ತ, ಅಲೌಕಿಕ ಜ್ಞಾನಭಾಂಡಾರದತ್ತ, ಮತ್ತು ಪರಾಮಾತೆಯ ಚಿರಂತನ ಶಕ್ತಿಗಳ ಅಪರಿಮೇಯ ವ್ಯಾಪಾರಗಳತ್ತ. ಎಂದೆಂದಿಗೂ ಆಕೆ ಅಚಂಚಲಳು, ಅದ್ಭುತಳು, ಮಹಿಮಾನ್ವಿತಳು, ಪ್ರಶಾಂತಳು. ಯಾವುದೂ ಆಕೆಯನ್ನು ಅಲುಗಿಸಲಾರದು. ಏಕೆಂದರೆ ಜ್ಞಾನ ಸರ್ವಸ್ವವೂ ಆಕೆಯಲ್ಲಿ ಮನೆಮಾಡಿದೆ. ಆಕೆ ತಿಳಿಯಬಯಸಿದ್ದಾವುದೂ ಆಕೆಯಿಂದ ಮರೆಯಾಗಿ ಇರಲಾರದು. ಸಮಸ್ತ ವಸ್ತುಗಳನ್ನೂ ಸಮಸ್ತ ಜೀವರಾಶಿಗಳನ್ನೂ ಅವುಗಳ ಸ್ವಭಾವವನ್ನೂ ಅವುಗಳ ಚಾಲಕ ಶಕ್ತಿಯನ್ನೂ ಸೃಷ್ಟಿಯ ನಿಯಮವನ್ನೂ ಅದರ ಕಾಲಗತಿಗಳನ್ನೂ ಆಕೆ ಬಲ್ಲಳು. ಅದರಂತೆ ಹಿಂದೆ ಎಲ್ಲವೂ ಯಾವ ಬಗೆಯಾಗಿತ್ತು, ಇಂದು ಹೇಗಿದೆ ಮತ್ತು ಮುಂದೆ ಹೇಗಿರತಕ್ಕದ್ದು ಎಂಬುದೆಲ್ಲವೂ ಅವಳಿಗೆ ಅವಗತವಿದೆ. ಎಲ್ಲವನ್ನೂ ಎದುರಿಸಿ ಎಲ್ಲದರ ಅಧೀಶ್ವರಿಯಾಗಿರಬಲ್ಲ ಸಾಮರ್ಥ್ಯ ಆಕೆಯಲ್ಲುಂಟು. ಆಕೆಯ ಪಾರಾವಾರವಿಲ್ಲದ ಮತ್ತು ತಿಳಿಯಲಳವಲ್ಲದ ಜ್ಞಾನವನ್ನೂ ಉತ್ತುಂಗವೂ ಪ್ರಶಾಂತವೂ ಆದ ಶಕ್ತಿಯನ್ನೂ ಪ್ರತಿಭಟಿಸಿ ಯಾರೂ ಗೆಲ್ಲಲಾರರು. ಸಮದರ್ಶಿಯೂ ಸಹನಶೀಲಳೂ ಸ್ಥಿರಸಂಕಲ್ಪಳೂ ಆದ ಆಕೆ ಮಾನವರ ಜತೆಗೂಡಿ ಅವರವರ ಸ್ವಭಾವಕ್ಕೆ ಅನುರೂಪವಾಗಿ ವ್ಯವಹರಿಸುತ್ತಾಳೆ. ವಸ್ತುಮಾತ್ರಗಳಲ್ಲಿಯೂ ಘಟನಾಮಾತ್ರಗಳಲ್ಲಿಯೂ ಅವುಗಳ ಶಕ್ತಿ ಮತ್ತು ಅವುಗಳಲ್ಲಿ ಸನ್ನಿಹಿತವಾದ ಸತ್ಯಕ್ಕೆ ಅನುಗುಣವಾಗಿ ವ್ಯವಹರಿಸುತ್ತಾಳೆ, ಪಕ್ಷಪಾತದ ಲವಲೇಶವೂ ಆಕೆಯಲ್ಲಿಲ್ಲ. ಆದರೆ ಆಕೆಯು ಪರಮೇಶ್ವರನ ಅನುಶಾಸನವನ್ನು ಅನುಸರಿಸುತ್ತ ಕೆಲವರನ್ನು ಉದ್ಧರಿಸುತ್ತಾಳೆ ಇನ್ನು ಕೆಲವರನ್ನು ಅಧೋಗತಿಗೆ ಅಟ್ಟುತ್ತಾಳೆ. ಅಥವಾ ತನ್ನಿಂದ ದೂರ ದಬ್ಬಿ ಅಂಧಂತಮಸ್ಸಿಗೆ ತಳ್ಳುತ್ತಾಳೆ. ವಿವೇಕಿಗಳಾದವರಿಗೆ ಮತ್ತಷ್ಟು ಘನತರವಾದ ಹಾಗು ದೇದೀಪ್ಯಮಾನವಾದ ಜ್ಞಾನದಾನ ಮಾಡುತ್ತಾಳೆ. ದೀರ್ಘ

ದರ್ಶಿಗಳಾದವರಿಗೆ ಆಕೆಯು ತನ್ನ ಮಂತ್ರಣರಹಸ್ಯವನ್ನು ಪ್ರಕಟಗೊಳಿಸುತ್ತಾಳೆ. ವಿರೋಧಿಗಳಾದವರಿಗೆ ಅವರ ವಿರೋಧದ ಫಲಭೋಗವನ್ನು ಉಣ್ಣಹಚ್ಚುತ್ತಾಳೆ. ಜ್ಞಾನಶೂನ್ಯರನ್ನೂ ಮೂಢರನ್ನೂ ಅವರವರ ಕುರುಡುತನಕ್ಕೆ ಅನುಗುಣವಾಗಿಯೇ ಕರೆದೊಯ್ಯುತ್ತಾಳೆ. ಪ್ರತಿಯೊಬ್ಬ ಮಾನವನಲ್ಲಿಯೂ ಇದ್ದು ಅವನವನ ಪ್ರಕೃತಿಗತ ವಿಭಿನ್ನ ಪ್ರವೃತ್ತಿಗಳನ್ನು, ಅಂಗಅಂಗಗಳನ್ನು ಪರಿಚಾಲಿಸಿ ಆಯಾ ಅಂಗ ಪ್ರವೃತ್ತಿಗಳ ಪ್ರಯೋಜನ, ಪ್ರೇರಣೆ, ಬಯಸಿದ ಪ್ರತಿಫಲ ಇವಕ್ಕೆ ತಕ್ಕಂತೆ ಅವನ್ನು ಪೂರೈಸುತ್ತಾಳೆ. ಅಗತ್ಯ ಕಂಡಲ್ಲಿ ಬಲಪ್ರಯೋಗವನ್ನು ಮಾಡುತ್ತಾಳೆ. ಅಥವಾ ಅವಕ್ಕೆ ಅತಿಪ್ರಿಯವಾಗಿರುವ ಸ್ವಾತಂತ್ರ್ಯಕ್ಕೆ ಸ್ವೈರಾಚಾರಕ್ಕೂ ಎಡೆಗೊಟ್ಟು ಅವಿದ್ಯೆಯ ದುರ್ಮಾರ್ಗಗಳಲ್ಲಿ ಏಳ್ಗೆಹೊಂದಲು ಇಲ್ಲವೆ ಹಾಳಾಗಲು ಅನುಗೊಡುತ್ತಾಳೆ. ಏಕೆಂದರೆ ಆಕೆ ಎಲ್ಲದರಿಂದ ಅತೀತಳಾಗಿದ್ದಾಳೆ, ಎಲ್ಲವನ್ನೂ ಮೀರಿದವಳಾಗಿದ್ದಾಳೆ. ಈ ವಿಶ್ವಸಂಬಂಧೀಯ ಅದಾವ ವಿಷಯದ ಬಗ್ಗೆಯೇ ಆಗಲಿ ಆಕೆ ಆಬದ್ಧಳಲ್ಲ, ಆಸಕ್ತಳಲ್ಲ. ಆದರೂ ವಿಶ್ವಮಾತೆಯ ಮಾತೃಹೃದಯವು ಇನ್ನುಳಿದವರಿಗಿಂತ ಮಿಗಿಲಾಗಿ ಆಕೆಯಲ್ಲಿಯೇ ಉಂಟು. ಆಕೆಯ ಕರುಣೆಗೆ ಕೊನೆಯಿಲ್ಲ, ಕೊರತೆಯಿಲ್ಲ. ಅಸುರ, ರಾಕ್ಷಸ, ಪಿಶಾಚ ಮೊದಲ್ಗೊಂಡು ವಿದ್ರೋಹಿಗಳು ವಿರೋಧಿಗಳವರೆಗೆ ಆಕೆಯ ದೃಷ್ಟಿಯಲ್ಲಿ ಎಲ್ಲರೂ ಆಕೆಯ ಮಕ್ಕಳೇ, ಆ ಏಕಮೇವಾದ್ವಿತೀಯದ ಅಂಶವೇ ಆಗಿದ್ದಾರೆ. ಆಕೆಯ ನಿರಾಕರಣೆಗಳು ಕೂಡ ಕೇವಲ ತಡೆದು ನೀಡುವ ಪರಿತ್ರಾಣವೆಂದೇ ಅರ್ಥ. ಆಕೆಯ ದಂಡನೆಗಳು ಕೂಡ ಆಕೆಯ ಪ್ರಸಾದವೇ. ಆದರೆ ಆಕೆಯ ಕಾರುಣ್ಯದಿಂದ ಆಕೆಯ ವಿವೇಕವು ಕಂಗೆಡುವದಿಲ್ಲ, ಅಥವಾ ಆಕೆಯ ಕ್ರಿಯೂಧಾರೆಯನ್ನು ಪೂರ್ವನಿರ್ದಿಷ್ಟ ಪಥದಿಂದ ಹೊರಳಿಸುವದಿಲ್ಲ. ಏಕೆಂದರೆ ವಸ್ತುಗಳ ಸತ್ಯವಷ್ಟೇ ಆಕೆಗೆ ಸಂಬಂಧಿಸಿದ್ದು, ಜ್ಞಾನವೇ ಆಕೆಯ ಶಕ್ತಿಯಕೇಂದ್ರ. ನಮ್ಮ ಅಂತರಾತ್ಮವನ್ನೂ ನಮ್ಮ ಪ್ರಕೃತಿಯನ್ನೂ ದಿವ್ಯಸತ್ತ್ವಸ್ವರೂಪದಲ್ಲಿ ಸಿದ್ಧಗೊಳಿಸುವುದೇ ಆಕೆಯ ಕಟಿಬದ್ಧಕಾರ್ಯ, ಆಕೆಯ ಪರಿಶ್ರಮ.

**ಮಹಾಕಾಳಿಯ** ಸ್ವಭಾವವು ಬೇರೆ ಬಗೆಯದು. ಆಕೆಯ ಶಕ್ತಿ ವಿಶೇಷಗಳು ವ್ಯಾಪಕತೆಯಲ್ಲ ಆದರೆ ಉತ್ತುಂಗತೆ; ಜ್ಞಾನವಲ್ಲ, ಆದರೆ ಬಲ ಮತ್ತು ಶಕ್ತಿ. ಆಕೆಯಲ್ಲುಂಟು ದುರ್ನಿವಾರ್ಯವಾದ ತೀವ್ರತೆ, ಕಾರ್ಯಸಿದ್ಧಿಯ ಪ್ರಚಂಡ ಬಲೋದ್ರೇಕ; ಪ್ರತಿಯೊಂದು ಮಿತಿ ಮರ್ಯಾದೆಯನ್ನೂ ಅಡೆತಡೆಯನ್ನೂ ಕೊಚ್ಚಿ ನುಚ್ಚುನೂರುಗೊಳಿಸಿ ಚದುರಿಸಲು ಧಾವಿಸುವ ದಿವ್ಯ ಹಿಂಸಾ ಪ್ರತಾಪ. ಆಕೆಯ ದಿವ್ಯತ್ವವೆಲ್ಲ ಝುಗ್ಗನೆ ನೆಗೆದೆದ್ದು ಪ್ರಜ್ವಲಿಸುತ್ತದೆ, ಝುಂಝಾರುದ್ರ ಖರಗತಿಯ ಕರ್ಮರೂಪದಲ್ಲಿ. ದ್ರುತಗತಿಗಾಗಿಯೂ ಸದ್ಯಃಫಲದಾಯಕವಾದ ಕಾರ್ಯ ಪದ್ಧತಿಗಾಗಿಯೂ ಕ್ಷಿಪ್ರವೂ ನಿರ್ವಕ್ರವೂ ಆದ ಪ್ರಹಾರಕ್ಕೋಸ್ಕರವಾಗಿಯೂ ತನ್ನಿದುರು ಬಂದುದನ್ನೆಲ್ಲ ಸವರುತ್ತ ಸಾಗುವ ಮುಂದಳದ ದಾಳಿಗೋಸ್ಕರವಾಗಿಯೂ ಉಂಟು ಆಕೆಯ

ಅಸ್ತಿತ್ವ. ಅಸುರನಿಗೆ ಆಕೆಯ ಮುಖ ಭೀಕರವಾಗಿರುವದು. ದೇವದ್ರೋಹಿಗಳ ಬಗ್ಗೆ ಆಕೆಯ ವೃತ್ತಿ ನಿರ್ಮಮವೂ ನಿದಾರುಣವೂ ಆಗಿದೆ. ಏಕೆಂದರೆ ಆಕೆ ರಣದಿಂದ ಎಂದೂ ಹಿಂದೆಗೆಯದ ಅಖಿಲ ಬ್ರಹ್ಮಾಂಡಗಳ ರಣಚಂಡಿಯಾಗಿದ್ದಾಳೆ. ಲೋಪ ದೋಷಗಳನ್ನು ಆಕೆ ಸಹಸಾ ಸಹಿಸಳು. ಎಂದೇ ಮಾನವ ಪ್ರಕೃತಿಯಲ್ಲಿ ಪ್ರತಿಕೂಲ ವಾಗಿರುವುದರ ಎಲ್ಲದರ ಜತೆಗೂ ಆಕೆ ಬಲು ಬಿರುಸಾಗಿಯೇ ವ್ಯವಹರಿಸುತ್ತಾಳೆ. ಹಟಮಾರಿತನದಿಂದ ಅಜ್ಞಾನದಲ್ಲಿ ತಮೋಗ್ರಸ್ತವಾಗಿಯೇ ಇರಬಯಸಿದ್ದೆಲ್ಲದರ ವಿಷಯಕ್ಕೂ ಆಕೆ ನಿಷ್ಕರುಣಳು. ದ್ರೋಹ, ಮಿಥ್ಯಾಚಾರ, ಬದ್ಧದ್ವೇಷ ಇವುಗಳ ವಿರುದ್ಧ ಆಕೆಯ ರೋಷವು ಕೂಡಲೆ ಕೆರಳಿ ರುದ್ರರೂಪ ತಾಳುತ್ತದೆ. ದುಷ್ಟ ಬುದ್ಧಿಯು ಆಕೆಯ ಶೂಲದ ಸೆಳೆತಕ್ಕೆ ಸಿಲುಕಿ ತತ್ಕಾಲ ಜರ್ಜರಿತವಾಗುತ್ತದೆ. ಭಗವತ್ಕಾರ್ಯದಲ್ಲಿ ಉದಾಸೀನತೆ, ಉಪೇಕ್ಷೆ, ಆಲಸ್ಯಗಳನ್ನು ಆಕೆ ಎಳ್ಳಷ್ಟೂ ಸಹಿಸು ವದಿಲ್ಲ. ಹಾಗೂ ಹೊತ್ತಿಲ್ಲದ ಹೊತ್ತಿನಲ್ಲಿ ಮಲಗುವವನನ್ನೂ ಕೆಲಸಗೇಡಿಯಾಗಿ ಸುಮ್ಮನೆ ಸುತ್ತುವವನನ್ನೂ ಅಗತ್ಯಕಂಡರೆ ತೀವ್ರವೇದನೆ ಕೊಟ್ಟು ಕೂಡ ಕೂಡಲೇ ಬಡಿದೆಬ್ಬಿಸುತ್ತಾಳೆ. ಚಪಲವಾದ, ಸರಳವಾದ, ನಿಷ್ಕಪಟವಾದ ಪ್ರೇರಣೆಗಳೂ ಧಾರಾಳವಾದ ನಿರ್ವಿಕಾರವಾದ ವ್ಯಾಪಾರಗಳೂ ಉರಿನಾಲಿಗೆಯ ಹಾಗೆ ಉನ್ಮುಖ ವಾಗಿ ನೆಗೆದೇಳುವ ಅಭೀಪ್ಸೆಯೂ ಮಹಾಕಾಳಿಯ ಸಂಚಲನ ಲಕ್ಷಣಗಳಾಗಿವೆ. ಆಕೆಯ ಚಿತ್ತವೃತ್ತಿಯು ಅದನ್ನು, ಆಕೆಯ ದೃಷ್ಟಿ ಆಕೆಯ ಸಂಕಲ್ಪ ಶಕ್ತಿಗಳು ಗರುಡಪಕ್ಷಿಯ ಉಡ್ಡಾಣದ ಹಾಗೆ ಉತ್ತುಂಗವೂ ದೂರಸ್ಪರ್ಶಿಯೂ ಆಗಿವೆ. ಆಕೆಯ ಪದಹತಿಯೋ ಊರ್ಧ್ವಪಥದಲ್ಲಿ ದ್ರುತಗತಿಯಿಂದ ಕೂಡಿದ್ದು. ಮಾರಣಕ್ಕಾಗಿಯೂ ತಾರಣಕ್ಕಾಗಿಯೂ ಆಕೆ ಸದಾ ತನ್ನ ಕರಗಳನ್ನು ಮುಂದೆ ಚಾಚಿದ್ದಾಳೆ. ಏಕೆಂದರೆ ಆಕೆಯೂ ಜನನಿಯೇ. ಆಕೆಯ ಸ್ನೇಹವು ಆಕೆಯ ಕ್ರೋಧದಷ್ಟೇ ಗಾಢವಾಗಿದೆ. ಆಳವಾದ, ಭಾವನಿರ್ಝರವಾದ ಕಾರುಣ್ಯದಿಂದ ಕೂಡಿದಂತಹಳು ಆಕೆ. ಒಂದು ವೇಳೆ ಆಕೆಗೆ ತನ್ನ ಶಕ್ತಿಸಮೇತವಾಗಿ ಬಂದು ಮಧ್ಯಸ್ಥಿಕೆ ವಹಿಸಲು ಆಸ್ಪದ ದೊರೆ ತದ್ದಾದರೆ ಅನ್ವೇಷಕನ ಪ್ರಗತಿಯನ್ನು ತಡೆಗಟ್ಟುವ ವಿಘ್ನಗಳು, ಅಥವಾ ಅವನ ಮೇಲೆರಗುವ ವೈರಿಸಂದೋಹ, ಒಂದು ನಿಮಿಷ ಮಾತ್ರದಲ್ಲಿ ಅಸಾಂದ್ರ ವಸ್ತುಗಳ ಹಾಗೆ ಹುಡಿ ಹುಡಿಯಾಗಿ ಹೋಗುವವು. ಆಕೆಯ ಕೋಪಾನಲವು ವಿರೋಧಿಗಳಿಗೆ ಭಯಾನಕವಾಗಿದೆ. ಆಕೆಯಿರುವ ಆವೇಗಪೂರ್ಣ ಹೆಜ್ಜೆಯ ಒತ್ತಡವು ದುರ್ಬಲ ರಿಗೂ ಪುಕ್ಕರಿಗೂ ಪೀಡೆಗೊಡುವಂತಹದು. ಆದರೆ ಮಹಾಮಹಿಮರಿಗೆ, ವೀರರಿಗೆ, ಯೋಗ್ಯತಾಸಂಪನ್ನರಿಗೆ, ಆಕೆ ಅತಿಪ್ರಿಯಳು, ಅವರಿಂದ ಪೂಜಿತಳು. ಏಕೆಂದರೆ ಆಕೆ ಕೊಟ್ಟ ಪೆಟ್ಟುಗಳು, ತಮ್ಮ ಆಧಾರದಲ್ಲಿ ವಿದ್ರೋಹಕಾರಕವಾಗಿರುವದನ್ನೆಲ್ಲ ಸಾಮರ್ಥ್ಯವಾಗಿ ನಿರ್ದೋಷ ಸತ್ಯವಾಗಿ ಮಾರ್ಪಡಿಸುವವೆಂದೂ ವಕ್ರವೂ ವಿಕೃ ತವೂ ಆಗಿರುವದನ್ನೆಲ್ಲ ಆಕೆಯ ಸುತ್ತಿಗೆಯ ಏಟುಗಳು ನೇರವಾಗಿ ತಿದ್ದುವವೆಂದೂ ಅಪವಿತ್ರ ಅಥವಾ ವ್ಯಂಗವಾಗಿರುವದನ್ನೆಲ್ಲ ಹೊರದೂಡುವವೆಂದೂ ಅವರಿಗೆ ಅನಿ

ಸುತ್ತದೆ. ಆಕೆ ಇಲ್ಲದೆ ಹೋಗಿದ್ದರೆ ಈಗ ಒಂದು ದಿನದಲ್ಲಾಗುವ ಕೆಲಸಕ್ಕೆ ನೂರಾರು ವರ್ಷಗಳ ಕಾಲ ಹಿಡಿಯಬಹುದಾಗಿತ್ತು. ಆಕೆಯಿಲ್ಲದೆ ಹೋಗಿದ್ದರೆ ಆನಂದವೆಂಬದು ಉದಾರ ಗಂಭೀರವಾಗಿ ಇಲ್ಲವೆ ಮೃದು ಮಧುರ ಸುಂದರವಾಗಿ ಮಾತ್ರ ಇರಬಹುದಾಗಿತ್ತು. ಆದರೆ ಆನಂದದ ಪರಮ ಗಾಢೋಪಗೂಢವಾದ ಪ್ರಜ್ವಲಿತ ಸುಖೋಲ್ಲಾಸದ ತೀವ್ರತೆ ಅದಕ್ಕೆ ಇರುತ್ತಿರಲಿಲ್ಲ. ಜ್ಞಾನಕ್ಕೆ ವಿಜಯಂಕರ ಪರಾಕ್ರಮ ನೀಡುವಾಕೆ ಆಕೆಯೇ, ಮತ್ತೆ ಸೌಂದರ್ಯ ಸಾಮಂಜಸ್ಯಗಳಿಗೆ ಆಕೆ ಒದಗಿಸುತ್ತಾಳೆ ಸಮುನ್ನತ ಊರ್ಧ್ವಮುಖಗತಿಯನ್ನು; ಮಂದವೂ ಕಷ್ಟಸಾಧ್ಯವೂ ಆದ ಸಂಸಿದ್ಧಿಯ ಪರಿಶ್ರಮಕ್ಕೆ ಸ್ಫುರದ್ವೇಗವನ್ನು ತುಂಬಿ, ತನ್ಮೂಲಕ ಸಾಧಕನ ಶಕ್ತಿಯನ್ನು ನೂರ್ಮಡಿ ಹೆಚ್ಚಿಸಿ ಉದ್ದನ್ನ ದಾರಿಯನ್ನು ಕಿರಿದಾಗಿಸುತ್ತಾಳೆ ಆಕೆಯೇ. ಪರತಮ ಪರಮಾನಂದ, ಉತ್ತುಂಗತಮ ಔನ್ನತ್ಯ, ದೀರ್ಘತಮ ದೃಕ್ಪಾತಗಳು ಇವಕ್ಕಿಂತ ನ್ಯೂನವಾಗಿರುವ ಅದಾವದೂ ಆಕೆಗೆ ತೃಪ್ತಿ ತರಲಾರದು. ಎಂದೇ ಪರಮೇಶ್ವರನ ವಿಜಯಂಕರ ಶಕ್ತಿಯು ಆಕೆಯ ಹತ್ತಿರವೇ ಸನ್ನಿಹಿತವಾಗಿದೆ; ಹಾಗೂ ಆಕೆಯ ತೇಜ, ಆವೇಗ, ಕ್ಷಿಪ್ರತೆಗಳ ಅನುಗ್ರಹ ಮೂಲಕವಾಗಿ ನಮ್ಮ ಮಹಾ ಸಂಸಿದ್ಧಿಯ ಕಾರ್ಯ ಮುಂದೆ ಎಂದಾದರೂ ಒಂದು ದಿನವಲ್ಲ, ಇಂದೇ ಸಿದ್ಧಿಸಿದರೂ ಸಿದ್ಧಿಸಬಲ್ಲದು.

ಕೇವಲ ಜ್ಞಾನ ಮತ್ತು ಶಕ್ತಿಮತ್ತೆಗಳಷ್ಟೇ ಪರಾತ್ಪರಳಾದ ಪರಾಮಾತೆಯ ವ್ಯಕ್ತಸ್ವರೂಪಗಳಲ್ಲ. ಆಕೆಯ ಪ್ರಕೃತಿಗತವಾಗಿ ಮತ್ತೊಂದು ಸೂಕ್ಷ್ಮತರ ರಹಸ್ಯವುಂಟು. ಅದಿಲ್ಲದೆ ಹೋಗಿದ್ದರೆ ಜ್ಞಾನಕ್ಕೂ ಶಕ್ತಿಗೂ ನ್ಯೂನತೆ ಬಂದುಬಿಡುತ್ತಿತ್ತು. ಅದೇ ಬಗೆಯಾಗಿ ಪೂರ್ಣತೆಯೆಂಬುದು ಸಮ್ಯಕ್ ಪೂರ್ಣವಾಗಿ ಇರುತ್ತಿರಲಿಲ್ಲ. ಜ್ಞಾನ ಮತ್ತು ಶಕ್ತಿಗಳ ಆಚೆಗುಂಟು ಚಿರಂತನ ಸೌಂದರ್ಯದ ಇಂದ್ರಜಾಲ, ಲೋಕೋತ್ತರವಾದ ದಿವ್ಯ ಸಾಮರಸ್ಯಗಳ ಅಗಮ್ಯ ರಹಸ್ಯ, ದುರ್ನಿವಾರವಾದ ವಿಶ್ವಮೋಹಕ ಆಕರ್ಷಣೆಯ ಅಪ್ರತಿಹತವಾದ ವಶೀಕರಣದ ಮೋಡಿ. ಈ ಜಗನ್ಮೋಹಕತೆಯೇ ಎಲ್ಲ ವಸ್ತುಗಳನ್ನೂ ಎಲ್ಲ ಶಕ್ತಿಗಳನ್ನೂ ಎಲ್ಲ ಜೀವಿಗಳನ್ನೂ ಒಂದೆಡೆಗೆ ಸೆಳೆದು ತಂದು ಹಿಡಿದಿರಿಸುತ್ತದೆ. ಮತ್ತೆ ಅವುಗಳೆಲ್ಲ ಪರಸ್ಪರ ಒಡಗೂಡುವಂತೆಯೂ ಹೊಂದಿ ಒಂದಾಗಿರುವಂತೆಯೂ ಒತ್ತಾಯ ಪಡಿಸುತ್ತದೆ. ತನ್ಮೂಲಕವಾಗಿ ತೆರೆಯ ಮರೆಯೊಳಗಿಂದಲೇ ಅವೆಲ್ಲ ತಮ್ಮ ಗುಪ್ತ ಆನಂದದ ಲೀಲೆ ತೋರಲೆಂದೂ ಅವುಗಳು ತನ್ನ ತಾಲಲಯಗಳ ಛಂದೋಗತಿಯಾಗಿಯೂ ತನ್ನ ರೂಪಪ್ರಾಯವಾಗಿಯೂ ಪ್ರಕಟಗೊಳ್ಳಲೆಂದೂ ಆ ಜಗನ್ಮೋಹಕತೆಯ ಇಂಗಿತವಾಗಿದೆ. ಇದುವೆ **ಮಹಾಲಕ್ಷ್ಮಿಯ ಶಕ್ತಿ.** ಪರಾಶಕ್ತಿಯ ಬೇರಾವ ಸ್ವರೂಪವೂ ದೇಹಧಾರಿಗಳಾದ ಜೀವಿಗಳ ಹೃದಯಕ್ಕೆ ಇದಕ್ಕಿಂತ ಹೆಚ್ಚು ಚಿತ್ತಾಕರ್ಷಕವಾಗಿರುವದಿಲ್ಲ. ಅಲ್ಪತ್ವದಿಂದ ಕೂಡಿದ ಪಾರ್ಥಿವ ಪ್ರಕೃತಿಗೆ ಮಾಹೇಶ್ವರಿಯು ತೀರ ಸ್ತಬ್ಧಳಾಗಿ, ತೀರ ಬೃಹದ್ರೂಪಳಾಗಿ, ತೀರ ದೂರವರ್ತಿಯಾಗಿ ತೋರುವ ಸಂಭವವಿದೆ, ಹಾಗೂ ಆಕೆಯ

ಸಾನ್ನಿಧ್ಯ ಸೇರುವುದಾಗಲಿ, ಆಕೆಯನ್ನು ಧಾರಣ ಮಾಡಿಕೊಂಡಿರುವದಾಗಲಿ ಅದಕ್ಕೆ ಅಸಾಧ್ಯವೆನ್ನಿಸುವ ಸಂಭವವಿದೆ. ಮಹಾಕಾಳಿಯು ಕೂಡ ಪಾರ್ಥಿವ ಪ್ರಕೃತಿಯ ದುರ್ಬಲತೆಗೆ ತೀರ ತೀವ್ರ ಗತಿಯುಳ್ಳವಳಾಗಿಯೂ ತೀರ ಪ್ರಖರ ಪ್ರತಾಪಳಾಗಿಯೂ ಅಸಹನೀಯಳಾಗಿಯೂ ತೋರಬಹುದು. ಆದರೆ ಮಹಾ ಲಕ್ಷ್ಮಿಯ ಕಡೆಗೆ ಮಾತ್ರ ಎಲ್ಲರೂ ಉಲ್ಲಾಸದಿಂದಲೂ ಲವಲವಿಕೆಯಿಂದಲೂ ಹೊರಳುತ್ತಾರೆ. ಅದೇಕೆಂದರೆ ಪರಮೇಶ್ವರನ ಮಾದಕವಾದ ಮಾಧುರ್ಯದ ಮೋಹಿನಿ ಯನ್ನು ಪಸರಿಸುವಾಕೆ ಮಹಾಲಕ್ಷ್ಮಿಯೇ. ಆಕೆಯ ಸಾಮೀಪ್ಯವೆಂದರೆ ಪ್ರಗಾಢ ಸುಖ, ಹೃದಯದಲ್ಲಿ ಆಕೆಯ ಸಾನ್ನಿಧ್ಯದ ಅನುಭವವೆಂದರೆ ಜೀವಿತವನ್ನು ಆನಂದ ತುಂದಿಲವಾಗಿಯೂ ಕೌತುಕಮಯವಾಗಿಯೂ ಪರಿಣತಗೊಳಿಸುವುದು; ಸೂರ್ಯ ನಿಂದ ಬೆಳಕುಗ್ಗಿ ಬರುವಂತೆ ಆಕೆಯಿಂದ ಸುಗ್ಗಿ ಬರುತ್ತವೆ ಶ್ರೀ, ಶೋಭೆ, ಮಾರ್ದವತೆಗಳು. ಆಕೆ ತನ್ನ ಅನುಪಮವಾದ ಕಟಾಕ್ಷಕ್ಷೇಪ ಮಾಡಿದಲ್ಲೆಲ್ಲ ಇಲ್ಲವೆ ತನ್ನ ಮುಗುಳ್ನಗೆಯ ಚೆಲ್ವಿಕೆಯನ್ನು ಚೆಲ್ಲಿದಲ್ಲೆಲ್ಲ. ಮಾನವನ ಅಂತರಾತ್ಮವು ಈ ಬಲೆಯಲ್ಲಿ ಸಿಲುಕಿ ಸೆರೆಯಾಳಾಗಿದೆ, ಹಾಗೂ ಅತುಲವಾದ ಆನಂದವಾರಿಧಿಯ ಆಳದಲ್ಲಿ ಲೋಲಾಡಿದೆ. ಆಕೆಯ ಕೈ-ಸೋಂಕೆಂದರೆ ಸೂಜಿಗಲ್ಲಿನ ಸೆಳೆತವೇ; ಅವುಗಳ ನಿಗೂಢ ಕೋಮಲ ಸ್ಪರ್ಶ ಪ್ರಭಾವದಿಂದ ಮನಸ್ಸು, ಪ್ರಾಣ, ಶರೀರಗಳ ಕೊಳೆ ಕಳಚಿ ಅವು ಪುನೀತವಾಗುತ್ತವೆ, ಹಾಗೂ ಆಕೆ ಪದಾರ್ಪಣ ಮಾಡಿದಲ್ಲೆಲ್ಲ ಚಿತ್ತವಿಮೋಹಕವಾದ ಅಮೋಘ ಆನಂದದ ಸೆಲೆಗಳೇ ಚಿಮ್ಮಿ ಹರಿಯುತ್ತವೆ.

ಆದರೂ ಈ ಮನವಿಮೋಹಕಶಕ್ತಿಯನ್ನು ಪ್ರಸನ್ನಗೊಳಿಸುವದಾಗಲಿ, ಈಕೆ ಯನ್ನು ಹೃದಯದಲ್ಲಿ ಧರಿಸಿಕೊಂಡಿರುವದಾಗಲಿ ಸುಲಭವಲ್ಲ. ಮನಸ್ಸಿನ ಹಾಗೂ ಅಂತರಾತ್ಮದ ಸಮಂಜಸತೆ ಮತ್ತು ಸೌಂದರ್ಯ, ಚಿಂತನೆ ಹಾಗೂ ಭಾವನೆಗಳ ಸಮಂಜಸತೆ ಮತ್ತು ಸೌಂದರ್ಯ, ಪ್ರತಿಯೊಂದು ಬಾಹ್ಯಕ್ರಿಯೆಯ ಮತ್ತು ಬಾಹ್ಯ ಚರ್ಯೆಯ ಸಮಂಜಸತೆ ಹಾಗೂ ಸೌಂದರ್ಯ, ಜೀವನದ ಹಾಗೂ ಜೀವನದ ಸುತ್ತಿರುವ ನೆರೆಹೊರೆಯ ಸಮಂಜಸತೆ ಹಾಗೂ ಸೌಂದರ್ಯ ಇವನ್ನೆಲ್ಲ ಮಹಾಲಕ್ಷ್ಮಿಯು ಅಪೇಕ್ಷಿಸುತ್ತಾಳೆ. ನಿಗೂಢ ಜಗದಾನಂದದ ಜತೆಗೆ ಜೀವನದ ಛಂದಸಾಮ್ಯ ವಿರುವಲ್ಲಿ, ಸರ್ವಸುಂದರನ ಕರೆಗೆ ಮಾರ್ದನಿ ದೊರೆವಲ್ಲಿ, ಏಕತಾನತೆ ಏಕೋಭಾವಗಳು ನೆಲೆಸಿರುವಲ್ಲಿ, ಬಹು ಜನರ ಜೀವನಗಳ ಆನಂದ ಪ್ರವಾಹವು ಭಗವದಭಿಮುಖ ವಾಗಿ ಸಾಗಿರುವಲ್ಲಿ, ಈ ಬಗೆಯ ಅನುಕೂಲ ಆವರಣವಿರುವಲ್ಲಿ ಮಾತ್ರ ನೆಲೆ- ಯೂರಿ ನಿಲ್ಲಲು ಆಕೆ ಸಮ್ಮತಿಸುತ್ತಾಳೆ. ಆದರೆ ಯಾವುದೆಲ್ಲ ಕುರೂಪವೂ ಕ್ಷುದ್ರವೂ ಹೀನವೂ ಆಗಿರುವುದೊ, ಯಾವುದೆಲ್ಲ ದರಿದ್ರವೂ ಕುತ್ಸಿತವೂ ಕಶ್ಮಲವೂ ಆಗಿರು ವದೋ, ಮತ್ತಾವುದೆಲ್ಲ ಪಶುಪ್ರಾಯವೂ ಒರಟಾಗಿಯೂ ಇರುವುದೋ ಅದೆಲ್ಲವೂ ಆಕೆಯ ಆಗಮನವನ್ನು ಮೂದಲಿಸುತ್ತದೆ. ಪ್ರೇಮ, ಸೌಂದರ್ಯ ಇಲ್ಲದಿರುವಲ್ಲಿ, ಅಥವಾ ಅವು ಮೈದಾಳಲು ಒಪ್ಪದಿರುವಲ್ಲಿ ಆಕೆಯೂ ಆಗಮಿಸಳು. ಪ್ರೇಮ

ಸೌಂದರ್ಯಗಳು ಹೀನತರ ವಸ್ತುಗಳ ಜತೆಗೂಡಿ ವಿಕೃತವಾಗಿರುವಲ್ಲಿಂದ ಆಕೆ ಕೂಡಲೆ ವಿಮುಖಳಾಗಿ ಹೊರಟುಬಿಡುತ್ತಾಳೆ. ಅಥವಾ ಅಲ್ಲಿ ಆಕೆ ತನ್ನ ಐಶ್ವರ್ಯ ಸುರಿಯಲು ಉಪೇಕ್ಷಿಸುತ್ತಾಳೆ. ಸ್ವಾರ್ಥಪರತೆ, ದ್ವೇಷ, ಮಾತ್ಸರ್ಯ, ಹಿಂಸಾಭಾವ, ಅಸೂಯೆ, ಕಲಹವೃತ್ತಿ ಇವೇ ಮೊದಲಾದುವುಗಳಿಂದ ಸುತ್ತುವರಿದ ಮಾನವ ಹೃದಯದಲ್ಲಿ ತಾನಿರುವುದನ್ನು ಕಂಡದ್ದಾದರೆ ಆಕೆ ಅಲ್ಲಿಂದ ಕೂಡಲೆ ಕಾಲ್ತೆಗೆಯು ತ್ತಾಳೆ. ದ್ರೋಹ ಲೋಭ ಕೃತಘ್ನತೆಗಳು ದೇವೋದ್ದಿಷ್ಟ ಪವಿತ್ರ ಪಾತ್ರದಲ್ಲಿ ಬೆರಕೆ ಗೊಂಡಿದ್ದರೆ, ರಾಗಾವೇಗದ ಸ್ಥೂಲತೆಯೂ ಅಪವಿತ್ರ ಕಾಮನಾಪಿಪಾಸೆಯೂ ಭಕ್ತಿ ಯನ್ನು ಮಲಿನಗೊಳಿಸಿದ್ದಾದರೆ, ಈ ಬಗೆಯ ಹೃದಯಗಳಲ್ಲಿ ಪ್ರಸನ್ನವದನಳಾದ ಅಭಿರಾಮರೂಪಳಾದ ಮಹಾಲಕ್ಷ್ಮಿ ಕ್ಷಣ ಸಹ ನಿಲ್ಲುವದಿಲ್ಲ. ದೈವಿಕ ಜುಗುಪ್ಸೆ ಬಂದು ಆಕೆಯನ್ನು ಆವರಿಸಿ ಆಕೆ ಅಲ್ಲಿಂದ ಪೈದೆಗೆಯುತ್ತಾಳೆ. ಏಕೆಂದರೆ ಆಕೆ ಒತ್ತಾಯದ ಅಥವಾ ಹೋರಾಟದ ವೃತ್ತಿಯವಳಲ್ಲ; ಅಥವಾ ಈ ಕಹಿ, ವಿಷಮಯ ಪೈಶಾಚಿಕ ದುರ್ಭಾವವು ಮಾನವ ಆಧಾರದಿಂದ ಮರೆಯಾಗುವ ವರೆಗೆ ಮತ್ತು ಅದು ಅದನ್ನು ಅಲ್ಲಗಳೆಯುವ ವರೆಗೆ ಆಕೆ ತನ್ನ ಮೊಗ ಮರೆಸಿಕೊಂಡು ಕಾಯ್ದಿದ್ದು ಆ ಮೇಲೆ ತನ್ನ ಮಂಗಲಮಯ ಪ್ರಭಾವವನ್ನು ಮರಳಿ ಪಸರಿಸುತ್ತಾಳೆ. ವಿರಕ್ತಿಯ ರಿಕ್ತತೆಯಾಗಲಿ ರುಕ್ಷತೆಯಾಗಲಿ ಆಕೆಗೆ ಸೊಗಸುವದಿಲ್ಲ. ಬಗೆದುಂಬಿ ಬಂದ ಗಂಭೀರ ಭಾವಗಳ ದಮನವೂ ಅಂತರಾತ್ಮದ ಮತ್ತು ಜೀವನದ ಸೌಂದರ್ಯಾಂಶಗಳ ಅಭಿವ್ಯಕ್ತಿಯ ಉಗ್ರ ನಿಗ್ರಹವೂ ಆಕೆಗೆ ರುಚಿಸುವದಿಲ್ಲ. ಏಕೆಂದರೆ ಪ್ರೇಮ ಸೌಂದರ್ಯ ಗಳ ಮುಖಾಂತರವೇ ಆಕೆ ಮಾನವರನ್ನು ಭಗವದ್ಬಾಹುಪಾಶದಲ್ಲಿ ಸಿಲುಕಿಸುತ್ತಾಳೆ. ಆಕೆಯ ಸಮುಚ್ಚತಮ ಸೃಷ್ಟಿಕ್ರಮದಲ್ಲಿ ಜೀವಿತವೆಂಬುದು ಒಂದು ಸ್ವರ್ಗೀಯ ಶ್ರೀಕರಕಲಾಕೃತಿಯಾಗಿ ಕುದುರುತ್ತದೆ. ಹಾಗೂ ಅಸ್ತಿತ್ವ ಸರ್ವಸ್ವವೂ ಒಂದು ದಿವ್ಯಾನಂದದ ಕಾವ್ಯವಾಗಿ ಅರಳುತ್ತದೆ. ಲೋಕದ ಸಂಪತ್‌ಸಂಚಯವನ್ನೆಲ್ಲ ಒಂದೆ ಡೆಗೆ ತಂದು ಒಟ್ಟುಗೂಡಿಸಿ ಅದನ್ನು ಒಂದು ಮಹತ್ತಮ ವ್ಯವಸ್ಥಾವಿಧಾನಕ್ಕಾಗಿ ವಿನಿಯೋಗಿಸಲಾಗುತ್ತದೆ. ಆಕೆಯ ಅಂತರ್‌ಜ್ಞಾನದ ಸಾಕ್ಷಾತ್ ಏಕತ್ವದರ್ಶನ ದಿಂದಲೂ ಆಕೆಯ ಪ್ರಾಣಸ್ಪರ್ಶನದಿಂದಲೂ ಅತಿ ಸಾಮಾನ್ಯ ಪಾಮರ ಪದಾರ್ಥ ಗಳು ಸಹ ಅಲೌಕಿಕವಾಗುತ್ತವೆ. ಹೃತ್ಪೀಠದಲ್ಲಿ ಆಕೆಗೆ ಅನುವುಗೊಟ್ಟದ್ದಾದರೆ ಆಕೆ ಜ್ಞಾನವನ್ನು ಅಮೋಘತೆಯ ಉತ್ತುಂಗ ಶಿಖರಕ್ಕೆ ಎತ್ತುತ್ತಾಳೆ. ಮತ್ತು ಸಮಸ್ತ ಜ್ಞಾನವನ್ನು ಮಿಕ್ಕಿ ಮೀರುವ ಪರಮಾನಂದದ ಗುಪ್ತ ರಹಸ್ಯರಾಜಿಗಳನ್ನು ಆ ಹೃದಯಕ್ಕೆ ತೆರೆತೆರೆದು ತೋರಿಸುತ್ತಾಳೆ. ಭಕ್ತಿಭಾವಕ್ಕೆ ಪರಮೇಶ್ವರನ ಪ್ರಬಲ ಆಕರ್ಷಣಶಕ್ತಿಯ ಜತೆಗೂಡಿಸಿ ಬೆಸುಗೆಗೊಳಿಸುತ್ತಾಳೆ. ಶೌರ್ಯಕ್ಕೂ ಶಕ್ತಿಗೂ ಆಕೆ ಸಮಗತಿಯನ್ನು ಕಲಿಸಿ ತನ್ಮೂಲಕ ಅವುಗಳ ಕ್ರಿಯೆಗಳ ಪ್ರಚಂಡತೆಯ ಅಳವು ಮೀರದಂತೆಯೂ ತಾಳಗೆಡದಂತೆಯೂ ಇರಿಸುತ್ತಾಳೆ; ಮತ್ತೆ ಆಕೆ ಸಂಸಿದ್ಧಿಯ ಮೇಲೆ ಮೋಹಿನಿಯ ಮಾಧುರ್ಯ ಪಸರಿಸಿ ಅದು ಚಿರಕಾಲ ಬಾಳುವಂತೆ ಮಾಡುತ್ತಾಳೆ.

**ಮಹಾಸರಸ್ವತಿಯು** ಆದಿಮಾತೆಯ ಕರ್ತೃತ್ವ ಶಕ್ತಿಯ ಮೂರ್ತ-ಸ್ವರೂಪಳೂ ಪ್ರಪೂರ್ಣತೆ ಹಾಗು ವ್ಯವಸ್ಥಾನ ವಿಧಾನದಲ್ಲಿ ಆಕೆಯ ಚೈತನ್ಯ ಸ್ವರೂಪಳೂ ಆಗಿದ್ದಾಳೆ. ಶಕ್ತಿ ಚತುಷ್ಟಯದಲ್ಲಿ ಈಕೆ ಎಲ್ಲರಿಗಿಂತ ಚಿಕ್ಕವಳು. ಈಕೆಯ ಕಾರ್ಯನಿರ್ವಹಣ ನೈಪುಣ್ಯಕ್ಕೆ ಎಣೆಯಿಲ್ಲ. ಹಾಗೂ ಪಾರ್ಥಿವ ಪ್ರಕೃತಿಗೆ ಮಹಾಸರಸ್ವತಿಯು ತೀರಸಮೀಪವಾಗಿದ್ದವಳು. ಮಾಹೇಶ್ವರಿಯು ವಿಶ್ವಶಕ್ತಿಗಳ ಗಡಣಕ್ಕೆ ವ್ಯಾಪಕವಾದ ಪರಿಕ್ರಮಣ ವಿಧಾನವನ್ನು ನಿಯೋಜಿಸಿ ಕೊಡುತ್ತಾಳೆ. ಮಹಾಕಾಳಿಯು ಅವುಗಳ ಪ್ರಾಣತ್ರಾಣಗಳಿಗೆ ಪ್ರಚೋದನೆ ಕೊಟ್ಟು ನಡೆಯಿಸುತ್ತಾಳೆ. ಮಹಾಲಕ್ಷ್ಮಿಯು ಆ ಶಕ್ತಿಗಡಣದಲ್ಲಿ ಅಡಗಿದ ಛಂದೋಗತಿಯ ತಾಲ ಲಯಗಳನ್ನು ಹುಡುಕಿ ತೆಗೆಯುತ್ತಾಳೆ. ಆದರೆ ಮಹಾಸರಸ್ವತಿಯು ಆ ಶಕ್ತಿ ಸಂದೋಹದ ಮೇಲೆ ನೇತೃತ್ವ ವಹಿಸಿ ನೋಡಿಕೊಳ್ಳುತ್ತಾಳೆ, ಅವುಗಳ ಸಂಘಟನದ ಮತ್ತು ಪ್ರಯೋಗದ ಒಂದೊಂದೂ ಸೂಕ್ಷ್ಮ ವಿವರಗಳನ್ನು, ಅವುಗಳ ವಿವಿಧ ವಿಭಾಗಗಳ ಪರಸ್ಪರ ಸಂಬಂಧವನ್ನು, ಭಿನ್ನ ಭಿನ್ನ ಶಕ್ತಿಗಳ ಸಮರ್ಪಕಸಂಯೋಜನೆಯನ್ನು ಹಾಗೂ ಹುಸಿಹೋಗದ ಲವಲೇಶವೂ ಹೆಚ್ಚು ಕಡಿಮೆಯಾಗದ ಪರಿಣಾಮ ಮತ್ತು ಸಾಫಲ್ಯದ ವಿಷಯವನ್ನು. ಸಮಸ್ತ ವಸ್ತುವಿಷಯಕವಾದ ವಿಜ್ಞಾನ, ಕೌಶಲ್ಯ, ಪ್ರಯೋಗ ಪದ್ಧತಿ, ಇವುಗಳೆಲ್ಲ ಮಹಾಸರಸ್ವತಿಯ ಸೀಮೆಗೆ ಸೇರಿವೆ. ಗಾಢವೂ ಯಥಾಯಥವೂ ಆದ ಅಂತರ್ಜ್ಞಾನ, ಸೂಕ್ಷ್ಮಬೋಧ ಹಾಗೂ ಸಹನಶೀಲತೆ, ಸಹಜಜ್ಞಾನಸಂಪನ್ನ ಮನದ ಮತ್ತು ಸಚೇತ ಹಸ್ತದ ಮತ್ತು ಪರಿಶೀಲಕ ದೃಷ್ಟಿಯ, ತಪ್ಪು ತೊದಲಿಲ್ಲದ ಅಚ್ಚುಕಟ್ಟುತನ, ಇವೇ ಮೊದಲಾದ ಸಿದ್ಧ ಕಾರ್ಯಕರ್ತೃವಿನ ಲಕ್ಷಣಗಳನ್ನು ಮಹಾಸರಸ್ವತಿಯು ತನ್ನ ಪ್ರಕೃತಿಯಲ್ಲಿ ನಿರಂತರ ಧರಿಸಿಕೊಂಡಿದ್ದಾಳಲ್ಲದೆ, ತನ್ನ ಅನುಗ್ರಹಕ್ಕೆ ಪಾತ್ರರಾದವರಿಗೆಲ್ಲ ಈಕೆ ಈ ಸಕಲ ಸಂಪದವನ್ನು ಕರುಣಿಸಬಲ್ಲಳು. ಈ ಶಕ್ತಿಯೇ ಸಕಲ ಲೋಕಗಳ ಬಲಿಷ್ಠ, ಅಕ್ಲಾಂತ, ಜಾಗ್ರತ, ಸಮರ್ಥ, ನಿರ್ಮಾಪಕ, ಸಂಘಟಕ, ಶಾಸಕ, ಪ್ರಯೋಗ ತಂತ್ರಜ್ಞ, ಕಲಾಪ್ರಸನ್ನ ಹಾಗೂ ಲೋಕಗಳ ವರ್ಗೀಕಾರಕ ಶಕ್ತಿಯಾಗಿದೆ. ಮಾನವಸ್ವಭಾವದ ಪರಿವರ್ತನವನ್ನೂ ನವನಿರ್ಮಾಣವನ್ನೂ ಈಕೆ ಕೈಕೊಂಡಾಗ ಈಕೆಯ ಕಾರ್ಯವು ಶ್ರಮಸಂಕುಲವೂ ಪುಂಖಾನುಪುಂಖವೂ ಆಗಿರುತ್ತದೆ. ನಮ್ಮ ತಾಳ್ಮೆಗೆಟ್ಟ ಮನಕ್ಕೆ ಆ ಕಾರ್ಯಕಲಾಪವು ತೀರ ಮಂದಗತಿಯದೆಂದೂ ಅಂತಹೀನ-ವೆಂದೂ ತೋರುತ್ತದೆ. ಆದರೆ ವಸ್ತುತಃ ಆ ಕಾರ್ಯವು ಅವಿಚ್ಛಿನ್ನವೂ ಸರ್ವಾಂಗೀಣವೂ ದೋಷಲೇಶಶೂನ್ಯವೂ ಆಗಿರುತ್ತದೆ. ಏಕೆಂದರೆ ಕರ್ಮವಿಷಯಕವಾದ ಈಕೆಯ ಸಂಕಲ್ಪವು ಸುದಕ್ಷ, ಅತಂದ್ರಿತ, ಶ್ರಮರಹಿತವಾದದ್ದು. ಮೇಲಿನಿಂದ ಬಾಗಿ ಈಕೆ ನಮ್ಮ ಸುತ್ತುವರಿದು ಪ್ರತಿಯೊಂದು ಸಣ್ಣ ಪುಟ್ಟ ಸಂಗತಿಯನ್ನು ಸಹ ಗಮನಿಸಿ ನೇವರಿಸಿ ನೇರ್ಪಡಿಸುತ್ತಾಳೆ. ಪ್ರತಿಯೊಂದು ಸೂಕ್ಷ್ಮಾನುಸೂಕ್ಷ್ಮವಾದ ಕುಂದು ಕೊರತೆ, ಕೊಂಕು ಅಥವಾ ನ್ಯೂನತೆಗಳನ್ನು ಕಂಡು ಹಿಡಿಯುತ್ತಾಳೆ. ಈ ಮುನ್ನ

ಮಾಡಿದ್ದನ್ನೆಲ್ಲ ಮತ್ತೆ ಇನ್ನು ಮುಂದೆ ಮಾಡಬೇಕಾದದ್ದನ್ನೆಲ್ಲ ಸರಿಯಾಗಿ ಇದ್ದಕ್ಕಿ-ದ್ದಂತೆ ತೂಗಿ ತೀರ್ಮಾನಿಸಿ ತನ್ನ ಗಣನೆಗೆ ತಂದುಕೊಳ್ಳುತ್ತಾಳೆ. ಈಕೆಯ ಗಣನೆಯಲ್ಲಿ ಅದಾವ ವಿಷಯುವೂ ಕ್ಷುದ್ರವಲ್ಲ, ತುಚ್ಛವಲ್ಲ; ಅದಾವ ಸಂಗತಿಯೇ ಇರಲಿ, ಅದೆಷ್ಟೇ ಸೂಕ್ಷ್ಮವಾಗಿ ಕೈಗೆ ಸಿಲುಕದಂತಿದ್ದರೂ, ಅದೆಷ್ಟೇ ಪ್ರಚ್ಛನ್ನ ರೂಪದಲ್ಲಿದ್ದರೂ ಅಂತರ್ಲುಪ್ತವಾಗಿದ್ದರೂ, ಅದಾವದೂ ಈಕೆಯ ಕಣ್ಣು ತಪ್ಪಿಸಿ ಪಾರಾಗಲಾರದು. ಒಂದೊಂದು ಅಂಗವೂ ತನ್ನ ಸದ್ರೂಪವನ್ನು ಹೊಂದುವತನಕ, ಸಮಗ್ರತೆಯ ಮಧ್ಯದಲ್ಲಿ ಅದು ತನ್ನ ತಕ್ಕ ತಾಣದಲ್ಲಿ ಹೊಂದಿಕೆಯಾಗುವ ತನಕ, ಮತ್ತು ಅದು ತನ್ನ ಯಥೋಚಿತ ನಿಯತ ವ್ಯಾಪಾರವನ್ನು ಪೂರೈಸುವ ತನಕ ಮಹಾಸರಸ್ವತಿಯು ಆ ಒಂದೊಂದು ಅಂಗವನ್ನೂ ಪ್ರಯಾಸಪೂರ್ವಕವಾಗಿ ಮತ್ತೆ ಮತ್ತೆ ಜೋಕೆವಿಡಿದು ಎರಕಹಾಕುತ್ತ ತಿದ್ದುತ್ತ ತೀಡುತ್ತ ಸಂಸ್ಕರಿಸುತ್ತಲೇ ಇರುತ್ತಾಳೆ. ನಿರಂತರ ಉದ್ಯಮಮಗ್ನಳಾಗಿ ಈಕೆ ವಸ್ತುಮಾತ್ರಗಳನ್ನೆಲ್ಲ ಪುನಃ ಪುನಃ ಸಜ್ಜುಗೊಳಿಸುತ್ತಿದ್ದಾಳೆ. ಏಕಕಾಲಕ್ಕೆ ಈಕೆಯ ಲಕ್ಷ್ಯವಿರಬಲ್ಲದು, ಎಲ್ಲ ಪ್ರಕಾರದ ಪ್ರಯೋಗಗಳತ್ತ ಹಾಗೂ ಅವುಗಳನ್ನು ಪೂರೈಸುವ ಉಪಾಯ ಯೋಜನೆಗಳತ್ತ. ಈಕೆ ತನ್ನ ಅಂತರ್ಜ್ಞಾನದಿಂದ ಅರಿಯುತ್ತಾಳೆ ಯಾವದನ್ನು ಆಯ್ದುಕೊಳ್ಳತಕ್ಕದ್ದು ಮತ್ತಾವದನ್ನು ತೊರೆಯತಕ್ಕದ್ದು ಎಂಬುದನ್ನು. ಈಕೆಯ ಅಂತರ್ಜ್ಞಾನವು ಯೋಗ್ಯಪಾತ್ರ, ಯೋಗ್ಯಕಾಲ, ಯೋಗ್ಯ ಅವಸ್ಥೆ ಹಾಗೂ ಯೋಗ್ಯ ಪ್ರಯೋಗಕ್ರಮ ಮೊದಲಾದವನ್ನು ಯಶಸ್ವಿಯಾಗಿ ನಿರ್ದೇಶಿಸುತ್ತದೆ. ಅಜಾಗರೂಕತೆ, ಉಪೇಕ್ಷೆ, ಮೈಗಳ್ಳತನ ಕಂಡರೆ ಈಕೆ ಹೇಸುತ್ತಾಳೆ. ಎಲ್ಲ ಬಗೆಯ ಮನವಿಲ್ಲದ ಹೇಗೋ ಅವಸರದಿಂದ ಮಾಡಿದ ಕ್ರಮಗೆಟ್ಟ ಕೆಲಸವಾಗಲಿ, ಎಲ್ಲ ಬಗೆಯ ಹೆಡ್ಡತನ, ಅಜ್ಞ ಪ್ರಮಾದ, ಗುರಿಗೆಟ್ಟ ಲಕ್ಷ್ಯಭೇದ, ಸಾಧನ ಸಲಕರಣೆಗಳ ಮತ್ತು ಗುಣವೃತ್ತಿಗಳ ಎಲ್ಲಬಗೆಯ ವ್ಯರ್ಥ ಪ್ರಯೋಗ ಹಾಗೂ ದುರ್ವಿನಿಯೋಗವಾಗಲಿ, ಅರೆಕೊರೆಯಾಗಿ ಮಾಡಿದ, ಇಲ್ಲವೆ ಪೂರೈಸದೆ ನಡುವೇ ಕೈಬಿಟ್ಟ ಕೆಲಸವಾಗಲಿ ಮಹಾಸರಸ್ವತಿಯು ಸ್ವಭಾವ ಪ್ರತಿಷ್ಠೆಗೆ ಭಂಗ ತರುವಂತಹದು, ಈಕೆಯ ಪ್ರಕೃತಿವಿರುದ್ಧವಾದದ್ದು. ಈಕೆ ತನ್ನ ಕೆಲಸಮಾಡಿ ಮುಗಿಸಿದಾಗ ಯಾವದನ್ನೂ ಮರೆತಿರುವದಿಲ್ಲ, ಯಾವ ಅಂಶವನ್ನೂ ತಪ್ಪುತಾಣದಲ್ಲಿ ಇಟ್ಟಿರುವದಿಲ್ಲ, ಇಲ್ಲವೆ ಬಿಟ್ಟುಕೊಟ್ಟಿರುವದಿಲ್ಲ, ಅಥವಾ ಸದೋಷ ಸ್ಥಿತಿಯಲ್ಲಿ ಉಳಿಸಿರುವದಿಲ್ಲ. ಈಕೆಯ ಕೆಲಸವೆಲ್ಲ ಗಟ್ಟಿಮುಟ್ಟಾದದ್ದು, ಚೊಕ್ಕ ಲೆಕ್ಕದ್ದು, ಮುಗಿದು ಬಿಟ್ಟದ್ದು, ತಲೆದೂಗುವಂತಹದು. ಪ್ರಪೂರ್ಣ ಪೂರ್ಣತೆಗೆ ಲವಲೇಶ ನ್ಯೂನತೆ ಉಂಟಾದರೂ ಈಕೆಗೆ ತೃಪ್ತಿಯಿಲ್ಲ. ತನ್ನ ಸೃಷ್ಟಿಯ ಸರ್ವಾಂಗ ಪರಿಪೂರ್ಣತೆಗಾಗಿ ಅನಂತ ಕಾಲದ ವರೆಗೆ ಪರಿಶ್ರಮ ಮಾಡಬೇಕಾದ ಅವಶ್ಯಕತೆ ಉಂಟಾದರೂ ಈಕೆ ಅದಕ್ಕೂ ಸಿದ್ಧಳು. ಆದ್ದರಿಂದ ಆದಿಮಾತೆಯ ಸಕಲ ಶಕ್ತಿಸ್ವರೂಪಗಳಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಮಹಾಸರಸ್ವತಿಯೇ ಮಾನವನೊಡನೆಯೂ ಅವನ ಸಾವಿರಾರು ತಪ್ಪುತಡೆ ಅರೆಕೊರೆಗಳೊಡನೆಯೂ ಬಹುದೀರ್ಘ ಕಾಲದಿಂದ

ಕ್ಲೇಶ ಸಹನ ಮಾಡುತ್ತ ಬಂದಿದ್ದಾಳೆ. ಈಕೆ ಸದಯಳೂ ಸ್ಮಿತವದನಳೂ, ನಮ್ಮ ಸಮೀಪದಲ್ಲಿದ್ದು ಸಹಾಯ ನೀಡುವವಳೂ ಆಗಿದ್ದಾಳೆ. ಈಕೆ ಸಹಸಾ ವಿಮುಖಳಾಗಳು, ಹತಾಶಗೊಳ್ಳಳು. ಮಾನವನು ಪುನಃ ಪುನಃ ಪರಾಜಿತನಾಗುತ್ತಿದ್ದರೂ, ಎಡೆಬಿಡದೆ ಈಕೆ ಅವನ ಬೆನ್ನು ಕಟ್ಟುತ್ತಿದ್ದಾಳೆ. ಹೆಜ್ಜೆಹೆಜ್ಜೆಗೂ ಈಕೆಯ ಕೈ ನಮ್ಮನ್ನು ನಡೆಯಿಸುತ್ತ ಸಾಗಿರುತ್ತದೆ. ಇಷ್ಟೇ, ಇದಕ್ಕೆಲ್ಲ ನಮ್ಮ ಸಂಕಲ್ಪವು ಏಕನಿಷ್ಠವೂ ನಿಷ್ಕಪಟವೂ ಆಗಿರತಕ್ಕದ್ದೆಂಬ ಒಂದು ಮಾತು ಮಾತ್ರ ಈಡೇರಲಿಕ್ಕೆ ಬೇಕು. ಏಕೆಂದರೆ ಇಬ್ಬಗೆಯ ಮನಸ್ಸನ್ನು ಈಕೆ ಸೈರಿಸಳು. ಕಪಟ ನಾಟಕ, ನಟನ ಪಟುತ್ವ, ಆತ್ಮವಂಚನೆ, ಸುಳ್ಳು ಸೋಗು ಇವನ್ನು, ವಿಕಟತೆಯನ್ನು ವ್ಯಕ್ತಗೊಳಿಸುವ ಈಕೆಯ ವೃತ್ತಿಯು ನಿರ್ಮಮತೆಯಿಂದ ಬೈಲಿಗೆಳೆಯುತ್ತದೆ. ನಮ್ಮ ಅಭಾವದಲ್ಲಿ ಮಾತೃಸ್ವರೂಪಳಾಗಿಯೂ ವಿಪತ್ಕಾಲದಲ್ಲಿ ಮಿತ್ರಪ್ರಾಯಳಾಗಿಯೂ, ಶಾಂತ ಅವಿಶ್ರಾಂತ ಮಂತ್ರಣಗಾರ್ತಿಯಾಗಿಯೂ ಆಪ್ತಸಚಿವಳಾಗಿಯೂ ಇದ್ದುಕೊಂಡು ಈಕೆ ತನ್ನ ಸಮುಜ್ವಲ ಮಂದಹಾಸದಿಂದ ನಮ್ಮ ವಿಷಣ್ಣತೆಯ ಮತ್ತು ಸಿಡುಕುಮಿಡುಕಿನ ಮೋಡಗಳನ್ನು ಚದರಿಸಿ ಬಿಡುತ್ತಾಳೆ. ತನ್ನ ನಿತ್ಯ ಪ್ರತ್ಯಕ್ಷ ಸನ್ನಿಧಿಯ ಸಂರಕ್ಷಣದ ಸ್ಮರಣೆಯನ್ನು ನಮಗೆ ಸದಾ ತಂದುಕೊಡುತ್ತಲಿರುತ್ತಾಳೆ. ನಿರಂತರವಿರುವ ಪರಂಜ್ಯೋತಿಯತ್ತ ಬೆರಳಿಟ್ಟು ತೋರಿಸುತ್ತಲಿರುತ್ತಾಳೆ. ಹೀಗೆ ಪರಾಪ್ರಕೃತಿಯ ಸಮಗ್ರತೆಯತ್ತ ನಮ್ಮನ್ನು ನೂಕಿಕೊಂಡು ನಡೆದಿರುವ ಗಭೀರವೂ ನಿರವಚ್ಛಿನ್ನವೂ ಆದ ಅಂತಃಪ್ರೇರಣೆಗೆ ಪುಟಕೊಡುವಲ್ಲಿ ಈಕೆ ದೃಢಳಾಗಿ ಅಚಂಚಲಳಾಗಿ ಅವಿರತಳಾಗಿ ಇರುತ್ತಾಳೆ. ಇನ್ನುಳಿದ ಶಕ್ತಿ ಸ್ವರೂಪಗಳು ತಮ್ಮ ಕಾರ್ಯಸಿದ್ಧಿಗಾಗಿ ಮಹಾಸರಸ್ವತಿಯನ್ನೇ ಅವಲಂಬಿಸಿಕೊಂಡಿರಬೇಕಾಗುತ್ತದೆ. ಏಕೆಂದರೆ ಭೌತಿಕ ಆಧಾರವನ್ನು ಈಕೆಯೇ ಭದ್ರಗೊಳಿಸುತ್ತಾಳೆ. ಅಂಗಪ್ರತ್ಯಂಗವನ್ನು ಕುಶಲತೆಯಿಂದ ಜಿನುಜಿನುಗಾಗಿ ಕುದುರಿಸಿ, ಅಭೇದ್ಯ ಕವಚದಂತೆ ಈಕೆಯೇ ಸೌಧವನ್ನು ಬಲಿದು ರಚಿಸುತ್ತಾಳೆ.

ಪರಾತ್ಪರ ಪರಾಮಾತೆಯ ಬೇರೆ ಬೇರೆ ಮಹದ್ರೂಪಗಳು ಇನ್ನೂ ಉಂಟು. ಆದರೆ ಧರಾತಲದಲ್ಲಿ ಅವುಗಳ ಅವತರಣವು ಹೆಚ್ಚು ಕಷ್ಟಕರ. ಎಂದೇ ಪೃಥ್ವೀಪುರುಷನ ಕ್ರಮವಿಕಾಸದಲ್ಲಿ ಅವು ಅಷ್ಟೊಂದು ಸ್ಫುಟವಾಗಿ ಮುಂದೆ ಬಂದಿಲ್ಲ. ಆದರೆ ಅತಿಮಾನಸ ಸಿದ್ಧಿಗೋಸ್ಕರ ಆ ಮಹತ್ ರೂಪಗಳಲ್ಲಿ ಕೆಲವೊಂದರ ಆವಿರ್ಭಾವವು ಅಪರಿಹಾರ್ಯವೇ ಆಗಿದೆ. ಎಲ್ಲಕ್ಕಿಂತ ಹೆಚ್ಚು ಅಪರಿಹಾರ್ಯವಾಗಿರುವ ಮೂರ್ತಸ್ವರೂಪವೆಂದರೆ ದುರ್ಜ್ಞೇಯವೂ ದುರ್ನಿವಾರಶಕ್ತಿಯುಕ್ತವೂ ಆದ ಪರಾಮಾತೆಯ ದಿವ್ಯ ಆನಂದ ಮೂರ್ತಿ. ಆ ಆನಂದಕ್ಕಾದರೋ ದಿವ್ಯ ಪ್ರೇಮದ ಪರಮ ಪದವೇ ಉದ್ಗಮಸ್ಥಾನವಾಗಿದೆ. ಕೇವಲ ಈ ಆನಂದವು ಮಾತ್ರ ಅತಿಮಾನಸ ಚೈತನ್ಯದ ಉಚ್ಚತಮ ಶಿಖರವನ್ನೂ ಜಡ ಪ್ರಕೃತಿಯ ಅಧಸ್ತಮ ಗಹ್ವರವನ್ನೂ ಜೋಡಿಸಿ ಬೆಸುಗೆಗೊಳಿಸಿ ಇವುಗಳ ನಡುವಿನ ಮಹದಂತರವನ್ನು ತೊಲಗಿಸುವ ಮಿಲನ

ಸೇತುವೆಯಾಗಿ ನಿಲ್ಲಬಹುದು. ವಿಸ್ಮಯಕಾರಕ ದಿವ್ಯತಮ ಜೀವನದ ಗುಟ್ಟನ್ನು ಈ ಆನಂದವೇ ತನ್ನ ಹೊಟ್ಟೆಯಲ್ಲಿಟ್ಟುಕೊಂಡಿರುತ್ತದೆ. ಅಲ್ಲದೆ ಇಂದಿಗೂ ಈ ಆನಂದವೇ ತನ್ನ ಗುಪ್ತ ಧಾಮಗಳಿಂದ ವಿಶ್ವದ ಇನ್ನುಳಿದ ಮಹತ್ ಶಕ್ತಿಗಳ ಕ್ರಿಯಾಪರಿವರ್ತನೆಯನ್ನು ಪರಿಪೋಷಿಸುತ್ತಿರುತ್ತದೆ. ಆದರೆ ಮನುಷ್ಯ ಪ್ರಕೃತಿಯು ಆಬದ್ಧವೂ ಅಹಂಭಾವಜಡಿತವೂ ತಮೋಗ್ರಸ್ತವೂ ಆಗಿರುವ ಕಾರಣ ಈ ಬೃಹತ್ಸಾನ್ನಿಧ್ಯಗಳನ್ನು ಅದು ಬರಮಾಡಿಕೊಳ್ಳಲು ಅನರ್ಹವಾಗಿದೆ. ಅಥವಾ ಅವುಗಳ ಪ್ರಚಂಡ ಕ್ರಿಯಾವೇಗಕ್ಕೆ ತಕ್ಕ ಆಧಾರವಾಗಿ ಅದನ್ನು ಧರಿಸಿಕೊಳ್ಳಲು ಅಸಮರ್ಥವಾಗಿದೆ. ಈ ಶಕ್ತಿಚತುಷ್ಟಯಗಳು ಪರಿವರ್ತಿತ ಮನಸ್ಸು ಪ್ರಾಣ ದೇಹಗಳಲ್ಲಿ ತಮ್ಮ ಸುಸಮಂಜಸ ಮುಕ್ತ ಲೀಲೆಯನ್ನು ನೆಲೆಗೊಳಿಸಿದಾಗಲೇ ಇನ್ನುಳಿದ ಅಸಾಮಾನ್ಯ ವಿರಲ ಶಕ್ತಿಸ್ವರೂಪಗಳು ಈ ಪಾರ್ಥಿವ ಗತಿಧಾರೆಯಲ್ಲಿ ಪ್ರಕಟಗೊಳ್ಳಬಲ್ಲವು. ಹಾಗೂ ಆಗ ಮಾತ್ರವೇ ಅತಿಮಾನಸ ಕ್ರಿಯೆಯು ಶಕ್ಯವಾಗಬಲ್ಲದು. ಏಕೆಂದರೆ ಪರಾಮಾತೆಯ ಸಮಸ್ತ ಮೂರ್ತಸ್ವರೂಪಗಳೂ ಆಕೆಯಲ್ಲಿ ಸಂಗಡಿಸಿ ಪ್ರಕಟಗೊಂಡಾಗ ಹಾಗೂ ಅವುಗಳ ಭಿನ್ನ ಭಿನ್ನ ವ್ಯಕ್ತಿಗತ ಕ್ರಿಯಾವ್ಯಾಪಾರಗಳೆಲ್ಲ ಸಮರಸಗೊಂಡು ಏಕತಾನತೆಯಲ್ಲಿ ಪರಿಣತಗೊಂಡಾಗ ಮತ್ತೆ ಆ ವ್ಯಕ್ತರೂಪಗಳು ಪರಾಮಾತೆಯಲ್ಲಿ ತಮ್ಮ ಅತಿಮಾನಸ ದೇವಸ್ವರೂಪಗಳ ಮಟ್ಟಕ್ಕೆ ಮುಟ್ಟಿದಾಗ ಪರಾಮಾತೆಯು ಅತಿಮಾನಸ ಮಹಾಶಕ್ತಿರೂಪದಲ್ಲಿ ಆವಿರ್ಭವಿಸುತ್ತಾಳೆ. ಅಲ್ಲದೆ ಆಗ ಆಕೆ ತನ್ನ ದೇದೀಪ್ಯಮಾನವಾದ ಪರಾತ್ಪರ ಜ್ಯೋತಿಃಪ್ರವಾಹವನ್ನೆಲ್ಲ, ಅವುಗಳ ಅಗೋಚರ ಅನಿರ್ವಚನೀಯ ವ್ಯೋಮಧಾಮದಿಂದ ತಂದು ಈ ಧರಾತಲಕ್ಕೆ ಸುರಿಯ ಹತ್ತುತ್ತಾಳೆ. ಆಗ ಮಾತ್ರ ಮನುಷ್ಯಸ್ವಭಾವವು ಮಾರ್ಪಟ್ಟು ತೇಜಸ್ವಿಯಾದ ದೇವಸ್ವಭಾವವಾಗಿ ಪರಿಣತಗೊಳ್ಳಲು ಸಾಧ್ಯ. ಏಕೆಂದರೆ ಆಗಲೇ ಅತಿಮಾನಸದ ಸತ್ಯಾತ್ಮಕ ಚೈತನ್ಯದ ಮತ್ತು ಸತ್ಯಾತ್ಮಕ ಶಕ್ತಿಯ ಮೂಲಧಾರೆಗಳು ತಂತಿಗಳಂತೆ ಒಂದೆಡೆ ಮೇಳೈಸಿ ಬಿಗಿಯಲ್ಪಡುತ್ತವೆ. ಹಾಗೂ ಜೀವನವೀಣೆಯು ಸನಾತನ ಛಂದೋಮಯ ಸ್ವರಲಹರಿಗಳ ಜತೆಗೆ ತನ್ನ ಶ್ರುತಿಯನ್ನೂ ಬೆರೆಯಿಸಲು ಆಗಲೆ ಪಾತ್ರತೆ ಪಡೆಯುತ್ತದೆ.

ನೀನು ಈ ಬಗೆಯ ಪರಿವರ್ತನವನ್ನು ಬಯಸುತ್ತಿದ್ದರೆ ಇಲ್ಲದ ಆಕ್ಷೇಪವೆತ್ತದೆ. ವಿರೋಧ ತೋರದೆ, ನೀನು ಪರಾಮಾತೆಯ ಮತ್ತು ಆಕೆಯ ಶಕ್ತಿಸ್ವರೂಪಗಳ ಕರವಶವಾಗಿಬಿಡು. ನಿರಾತಂಕವಾಗಿ ನಿನ್ನೊಳಗೆ ತನ್ನ ಕಾರ್ಯ ಸಾಗಿಸಲು ಆಕೆಗೆ ಅನುವುಗೊಡು. ಚೇತನೆ, ನಮನಶೀಲತೆ (ಮೇಣದಂತೆ ಮಣಿವ ಗುಣ), ನಿಃಶೇಷ ಆತ್ಮಸಮರ್ಪಣೆ ಈ ಮೂರು ಗುಣವಿಶೇಷಗಳು ನಿನ್ನ ಬಳಿ ಅಗತ್ಯವಾಗಿ ಇರಲಿಕ್ಕೇ ಬೇಕು. ಏಕೆಂದರೆ ನೀನು ನಿನ್ನ ಮನಸ್ಸು ಬುದ್ಧಿಗಳಲ್ಲಿಯೂ, ಅಂತರಾತ್ಮದಲ್ಲಿಯೂ, ಹೃದಯ ಪ್ರಾಣಗಳಲ್ಲಿಯೂ ಅದೇಕೆ ನಿನ್ನ ದೇಹದ ರೋಮರೋಮ ಕಣಕಣಗಳಲ್ಲಿಯೂ ಜಾಗ್ರತಚೇತನನಾಗಿರಲಿಕ್ಕೆ ಬೇಕು; ಪರಾಮಾತೆಯ ಮತ್ತು ಆಕೆಯ

ಶಕ್ತಿಸ್ವರೂಪಗಳ ವಿಷಯಕ್ಕೂ ಅವೆಲ್ಲವುಗಳ ಕ್ರಿಯಾ ವ್ಯಾಪಾರಗಳ ವಿಷಯಕ್ಕೂ ನೀನು ಎಚ್ಚರವುಳ್ಳವನಾಗಿರಲಿಕ್ಕೆ ಬೇಕು. ನೀನು ತಮೋಗ್ರಸ್ತನಾದಾಗಲೂ ನಿನ್ನ ಅಂಗಾಂಗಗಳಿಗೆ ಮೈಮರೆವು ಉಂಟಾದಾಗಲೂ ನೀನು ಎಚ್ಚರದಪ್ಪಿದ ಕ್ಷಣಗಳಲ್ಲಿ ಸಹ ಪರಾಮಾತೆ ನಿನ್ನಲ್ಲಿ ತನ್ನ ವ್ಯಾಪಾರವನ್ನು ಸಾಗಿಸಬಲ್ಲಳು, ಆದೇಕೆ ಸಾಗಿಸಿಯೇ ಸಾಗಿಸುತ್ತಾಳೇನೋ ನಿಜ. ಆದರೂ ಆ ಬಗೆಯೇ ಬೇರೆ; ನೀನು ಆಕೆಯೊಡನೆ ಜಾಗ್ರತ ಜೀವಂತ ಸಂಯೋಗದಲ್ಲಿ ಇದ್ದುಕೊಂಡಿರುವಾಗಿನ ಬಗೆಯೇ ಬೇರೆ. ಪರಾ-ಮಾತೆಯ ಸೋಂಕಿಗೆ ನಿನ್ನ ಸಮಗ್ರಸ್ವಭಾವವು ಮಿದುಮಿದುವಾಗಿ ಮಣಿದುಬಿಡಬೇಕು. ಅಹಂಮನ್ಯವೂ ಅಜ್ಞವೂ ಸಂಶಯಗ್ರಸ್ತವೂ ಆದ ಮನಸ್ಸಿನ ಹಾಗೆ ಮಾತುಮಾತಿಗೂ ಪ್ರಶ್ನಿಸಿ, ವಾದಿಸಿ, ಶಂಕಿಸಿ ಅದು ತನ್ನ ಜ್ಞಾನೋದಯಕ್ಕೂ ಪರಿವರ್ತನಕ್ಕೂ ತಾನೇ ತನ್ನ ವೈರಿಯಾಗಿರುವಂತೆ ನಿನ್ನ ಸ್ವಭಾವವಾಗಿರಕೂಡದು. ಹಟಮಾರಿತನದಿಂದ ತನ್ನದನ್ನೇ ಸಾಧಿಸಲು ಪಟ್ಟುಹಿಡಿವ ಹಾಗೂ ಮತ್ತೆ ಮತ್ತೆ ತನ್ನ ದುರ್ದಾಂತ ಕಾಮನೆಗಳನ್ನೂ ದುರುದ್ದೇಶಗಳನ್ನೂ ಪ್ರತಿಯೊಂದು ದೈವಿಕ ಪ್ರಭಾವದ ವಿರುದ್ಧ ಒಡ್ಡುವ ಮನುಷ್ಯನ ಪ್ರಾಣಮಯ ಪ್ರವೃತ್ತಿಯ ಹಾಗೆ ನೀನು ಹಟಮಾರಿಯಾಗಿರಬೇಡ. ಇದೇ ಬಗೆಯಾಗಿ ಅನ್ನಮಯ ಜಡಚೇತನವು ಅಕ್ಷಮತೆ, ಜಡತೆ, ತಾಮಸಿಕತೆಯ ದುರ್ಗವನ್ನೇ ತನ್ನ ಸುತ್ತೂ ಬಲಿದುಕೊಂಡು ಅಡ್ಡಿ ಒಡ್ಡುವ ಹಾಗೆ ನಿನ್ನ ಸ್ವಭಾವವು ಪರಾಮಾತೆಯ ದಿವ್ಯಸ್ಪರ್ಶಕ್ಕೆ ಅಡ್ಡಿ ಒಡ್ಡದಿರಲಿ. ಕ್ಷುದ್ರತೆಗೆ ಒಳಪಟ್ಟು ತಮೋಗ್ರಸ್ತವಾಗಿ ವಿಷಯಸುಖಾಸಕ್ತಿಗೆ ಅಂಟಿಕೊಂಡಿದ್ದು ತನ್ನ ನಿರ್ಜೀವ ನಿತ್ಯಜೀವನಕ್ರಮಕ್ಕೂ ತನ್ನ ನಿಸ್ತೇಜ ಆಲಸ್ಯಕ್ಕೂ ತನ್ನ ಸಾಂದ್ರತಂದ್ರಾ ನಿಮಗ್ನತೆಗೂ ಭಂಗತರುವ ಪ್ರತಿಯೊಂದು ದಿವ್ಯಸ್ಪರ್ಶದ ವಿರುದ್ಧವೂ ಅನ್ನಮಯ ಜಡಚೇತನವು ಕೂಗೆಬ್ಬಿಸುವ ಹಾಗೆ ನಿನ್ನ ಸ್ವಭಾವ ಕೂಗೆಬ್ಬಿಸದಿರಲಿ. ನಿನ್ನ ಅಂತರ್ಬಾಹ್ಯ ಜೀವನಧಾರೆಯ ಪ್ರಾಂಜಲವಾದ ಸರ್ವಸಮರ್ಪಣವು ನಿನ್ನ ಸ್ವಭಾವದ ಅಂಗಪ್ರತ್ಯಂಗದಲ್ಲಿಯೂ ಮಣಿಸಿದಂತೆ ಮಣಿವ ಈ ಗುಣವನ್ನು ತಾನೇ ತಂದುಕೊಡುವದು. ಮೇಲಿಂದ ಕೆಳಗೆ ಹರಿದುಬರುತ್ತಿರುವ ಜ್ಞಾನ-ಜ್ಯೋತಿಗಳತ್ತ, ಆ ಮಹಾಶಕ್ತಿಯತ್ತ, ಸಮರಸತೆ ಸೌಂದರ್ಯಗಳತ್ತ, ಮತ್ತು ಪೂರ್ಣತೆಯತ್ತ ಸತತವಾಗಿ ನಿನ್ನನ್ನು ನೀನು ತೆರೆದಿರಿಸಿ ಅವುಗಳನ್ನು ಆಳವಡಿಸಿಕೊಂಡದ್ದಾದರೆ ಚೈತನ್ಯವೆಂಬುದು ನಿನ್ನೊಳಗೆ ಎಲ್ಲೆಲ್ಲಿಯೂ ಜಾಗ್ರತವಾಗಿ ಬಿಡುವುದು. ಜಡದೇಹವು ಕೂಡ ಜಾಗ್ರತವಾಗಿ ಕಟ್ಟಕಡೆಗೆ ಈ ಜಡ ತನುಚೇತನವು ಕೂಡ ಆ ಮುಂದೆ ಎಂದೂ ಪ್ರಚ್ಛನ್ನವಾಗಿರದೆ ಅತಿಮಾನಸದ ಪರಾತ್ಪರ ಚಿಚ್ಛಕ್ತಿಯ ಜತೆಗೆ ಒಂದಾಗಿ ಹೋಗುವದು. ಶರೀರಕ್ಕೆ, ತನ್ನ ಮೇಲೆ ಕೆಳಗೆ ಕೆಲಬಲಕ್ಕೆ ಹೀಗೆ ದಶದಿಶೆಗಳಲ್ಲಿಯೂ ಪಸರಿಸಿದ ಪರಾಮಾತೆಯ ಸಕಲ ಶಕ್ತಿಗಳೂ ಓತಪ್ರೋತವಾಗಿ ತನ್ನೊಳಗೆ ಹರಿದಾಡುತ್ತಿರುವ ಅನುಭವವುಂಟಾಗಿ ಅದು ಒಂದು ಲೋಕೋತ್ತರ-ವಾದ ಪ್ರೇಮಾನಂದಗಳಿಂದ ಪುಲಕಿತಗೊಳ್ಳುತ್ತಿರುವುದು.

ಆದರೆ ಎಚ್ಚರಿಕೆ, ನಿನ್ನ ಕ್ಷುದ್ರ ಪಾರ್ಥಿವ ಮನಸ್ಸಿನಿಂದ ಆದಿಮಾತೆಯನ್ನು ಅರಿಯಲು, ಪರುಕಿಸಲು ಹವಣಿಸಬೇಡ. ತನ್ನ ಅಳವಿಗೆ ಮೀರಿದ ವಿಷಯಗಳನ್ನು ಸಹ ಮನಸ್ಸು ತನ್ನ ಪಡಿಯಚ್ಚುಗಳಿಗೆ, ತನ್ನ ಶ್ರೇಣೀಕ್ರಮಗಳಿಗೆ, ತನ್ನ ಸಂಕುಚಿತ ತರ್ಕವಿತರ್ಕಗಳಿಗೆ, ತನ್ನ ತಪ್ಪುಗ್ರಹಿಕೆಗಳಿಗೆ, ತನ್ನ ತಳವಿಲ್ಲದ ಆಕ್ರಮಣಶೀಲ ಅಜ್ಞಾನಕ್ಕೆ ಮತ್ತು ತನ್ನ ತುಚ್ಛ ಜ್ಞಾನದ ವ್ಯರ್ಥ ಆತ್ಮವಿಶ್ವಾಸಕ್ಕೆ ಗುರಿಪಡಿಸಿ ಅಳೆಯಲೆಳಸುತ್ತದೆ. ತನ್ನ ಅರೆಬೆಳಕಿನ ಮಬ್ಬುಗತ್ತಲದ ಸೆರೆಮನೆಯೊಳಗೆ ನುದುಡಿಕೊಂಡಿದ್ದ ಮಾನವ ಮನಸ್ಸಿಗೆ ಪರಾಶಕ್ತಿಯ ಅಬಾಧವಾದ ಬಹುಧಾ ಪದಗತಿಗಳನ್ನು ಅನುಸರಿಸುವುದು ಸಾಧ್ಯವಲ್ಲ. ಆಕೆಯ ದೃಷ್ಟಿಯ ಮತ್ತು ಕ್ರಿಯಾಧಾರೆಯ ಕ್ಷಿಪ್ರತೆ ಜಟಿಲತೆಗಳು ಹೆಜ್ಜೆ ಹೆಜ್ಜೆಗೂ ಮುಗ್ಗರಿಸುವ ಮಾನವ ಮನಸ್ಸಿನ ತಿಳುವಳಿಕೆಯನ್ನು ಹಿಮ್ಮೆಟ್ಟಿಸಿಬಿಡುತ್ತವೆ. ಆಕೆಯ ಗತಿಮಾಪನಗಳೆಂದರೆ ಮಾನವ ಮನದ ಗತಿಮಾಪನಗಳಲ್ಲ. ಆದಿಮಾತೆಯು ತನ್ನ ಅನೇಕಾನೇಕ ವಿಭಿನ್ನಮೂರ್ತ ಸ್ವರೂಪಗಳನ್ನು ತೊಡುತ್ತಾಳೆ, ಬಿಡುತ್ತಾಳೆ; ಆಕೆ ಒಂದೆಡೆಗೆ ಛಂದರಚನಾರತಳಾಗಿದ್ದರೆ ಇನ್ನೊಂದೆಡೆಗೆ ಛಂದೋಭಂಗವನ್ನುಂಟುಮಾಡುತ್ತಿರುತ್ತಾಳೆ. ಆಕೆಯ ವೇಗವು ಒಮ್ಮೆ ವೆಗ್ಗಳವಾದರೆ ಒಮ್ಮೆ ಕುಗ್ಗುತ್ತದೆ. ಆಕೆ ಒಬ್ಬರ ಸಮಸ್ಯೆಯನ್ನು ಒಂದು ಬಗೆಯಾಗಿ ಬಿಡಿಸಿದರೆ ಇನ್ನೊಬ್ಬರ ಸಮಸ್ಯೆಯನ್ನು ಇನ್ನೊಂದು ಬಗೆಯಾಗಿಯೇ ಬಿಡಿಸುತ್ತಾಳೆ. ಆಕೆ ಈ ಕ್ಷಣಕ್ಕೆ ಈ ದಾರಿಯಲ್ಲಿದ್ದರೆ, ಮರುಕ್ಷಣಕ್ಕೆ ಬೇರೊಂದು ದಾರಿಯಲ್ಲಿದ್ದು, ಮತ್ತೆ ಇದನ್ನೂ ಬಿಟ್ಟು ಅದನ್ನೂ ಬಿಟ್ಟು ಎಲ್ಲ ದಾರಿಗಳನ್ನೂ ಒಂದೆಡೆಗೆ ತಂದು ಜೋಡಿಸುತ್ತ ಇರುತ್ತಾಳೆ. ಈ ಎಲ್ಲ ತೊಡಕಿನ ಪರಿಶ್ರಮವನ್ನು ಕಂಡು ದಿಗ್ಭ್ರಾಂತಗೊಂಡ ಮಾನವ ಮನಸ್ಸು ಆ ಪರಾಶಕ್ತಿಯು ಅಜ್ಞಾನದ ದಟ್ಟ ಹೊದ್ದಿಕೆಯನ್ನು ಹೇಗೆ ಭೇದಿಸಿ ಹೇಗೆ ಸುಳಿಸುಳಿಯಾಗಿ ಊರ್ಧ್ವಮುಖವಾಗಿ ಮುನ್ನುಗ್ಗುತ್ತ ಆ ಪರಂಜ್ಯೋತಿಯತ್ತ ಹೇಗೆ ಸಾಗಿದೆಯೆಂಬದನ್ನು ಆಕಲನ ಮಾಡಿಕೊಳ್ಳಲು ಒಲ್ಲದು. ಆದ್ದರಿಂದ ನಿನ್ನ ಅಂತರಂಗವನ್ನು ಆಕೆಯತ್ತ ತೆರೆದಿರಿಸು. ನಿನ್ನ ಅಂತಃಪ್ರಕೃತಿಯಿಂದ ಆಕೆಯನ್ನು ಗ್ರಹಿಸಿ ಅನುಭವಿಸು. ನಿನ್ನ ಅಂತರ್ದೃಷ್ಟಿಯಿಂದ ಆಕೆಯನ್ನು ಈಕ್ಷಿಸು, ಇದರಿಂದಲೇ ನೀನು ಸಂತುಷ್ಟನಾಗು. ಈ ಮೂಲಕ ಮಾತ್ರ ನೇರವಾಗಿ ನಿತ್ಯಸಾಕ್ಷಾತ್ಕಾರಕ್ಕೆ ಮಾರ್ಪಡಿಗೊಡುವುದು ಸುಲಭ. ಆಗ ಸ್ವಯಂ ಪರಾಮಾತೆಯೇ ನಿನ್ನ ಮನಸ್ಸು, ಅಂತಃಕರಣ, ಪ್ರಾಣ ಮತ್ತು ಜಡ ಚೈತನ್ಯಾತ್ಮಕ ದೇಹ ಇವುಗಳನ್ನು ಆಯಾ ಕರಣಗಳ ಅಂತಃಸ್ಥ ಚೈತನ್ಯಾಂಶಗಳ ಸಹಾಯದಿಂದಲೇ ಪ್ರಬುದ್ಧಗೊಳಿಸುತ್ತಾಳೆ. ಅಲ್ಲದೆ ಅವಕ್ಕೆ ಕೂಡ ತನ್ನ ರೀತಿರಹಸ್ಯಗಳನ್ನೂ ತನ್ನ ಪ್ರಕೃತಿಧರ್ಮವನ್ನೂ ತೆರೆದು ತೋರಿಸುತ್ತಾಳೆ.

ಸರ್ವಜ್ಞತೆ ಮತ್ತು ಸರ್ವಶಕ್ತತೆ ಇವುಗಳ ವಿಷಯಕ್ಕೆ ನಮಗಿರುವ ಅತಿಸ್ಥೂಲ ತೀರ ಮೇಗರೆಯ ಅಲ್ಪಕಲ್ಪನೆಗಳಿಗೆ ಅನುಸರಿಸಿಯೇ ಯಾವಾಗಲೂ ಪರಾಶಕ್ತಿಯ ಕಾರ್ಯ ಜರುಗತಕ್ಕದ್ದೆಂಬ ಅಜ್ಞ ಮನದ ಭ್ರಾಂತ ದುರಾಗ್ರಹದೋಷದಿಂದಲೂ ನೀನು

ದೂರಿರಬೇಕು. ಏಕೆಂದರೆ ಅಘಟಿತಘಟನಾಚಮತ್ಕೃತಿಯಿಂದಲೂ ಸುಲಭಸಫಲತೆ ಯಿಂದಲೂ ಕಣ್ಣು ಕುಕ್ಕಿಸುವ ಪ್ರಭಾವೈಭವದಿಂದಲೂ ಹೆಜ್ಜೆ ಹೆಜ್ಜೆಗೆ ಬೆಕ್ಕಸ ಬೆರಗುಗೊಳ್ಳುತ್ತಿರಬೇಕೆಂದು ನಮ್ಮ ಮನಸ್ಸು ಹಂಬಲಿಸಿ ಹಲುಬುತ್ತಿರುತ್ತದೆ. ಇದಿಲ್ಲದೆ ಹೋದರೆ ಇಲ್ಲಿಯೇ ಭಗವತ್‌ಸಾನ್ನಿಧ್ಯವುಂಟೆಂಬ ಬಗ್ಗೆ ಆದಕ್ಕೆ ನಂಬಿ ಕೆಯೇ ಹುಟ್ಟಲಾರದು. ಆದಿಮಾತೆಯು ಅವಿದ್ಯಾಕ್ಷೇತ್ರದಲ್ಲಿ ನಿಂತೇ ಅವಿದ್ಯೆಯೊ ಡನೆ ವ್ಯವಹರಿಸುತ್ತ ಇದ್ದಾಳೆ. ಅವಿದ್ಯೆಯು ಮಧ್ಯದಲ್ಲಿ ಆಕೆ ಬೇಕೆಂದೇ ಇಳಿದು ಬಂದಿದ್ದಾಳಲ್ಲದೆ ಆಕೆ ಸರ್ವಥಾ ಆದರಿಂದ ದೂರ ಎಲ್ಲಿಯೋ ಮೇಲೆ ಇದ್ದುಕೊಂಡಿ ರುವದಿಲ್ಲ. ತನ್ನ ಜ್ಞಾನವನ್ನೂ ತನ್ನ ಶಕ್ತಿಯನ್ನೂ ಆಕೆ ಅಂಶತಃ ಮರೆಗಿರಿಸುತ್ತಾಳೆ ; ಅಂಶತಃ ತೆರೆತೆರೆದು ತೋರಿಸುತ್ತಾಳೆ. ಎಷ್ಟೋ ಸಲ ಈ ಜ್ಞಾನ ಶಕ್ತಿಗಳನ್ನು ತನ್ನ ಉಪಕರಣಗಳಿಂದಲೂ, ತನ್ನ ವಿಭೂತಿಗಳಿಂದಲೂ ಆಕೆ ಗುಪ್ತವಾಗಿ ಇರಿಸು ತ್ತಾಳೆ. ಅನ್ವೇಷಕ ಮನಸ್ಸಿನ, ಉನ್ಮುಖ ಅಂತರಾತ್ಮದ, ರಣೋತ್ಸುಕ ಪ್ರಾಣದ, ಪಾಶಾಬದ್ಧ ಪೀಡಾಕ್ಲಿಷ್ಟ ಆರ್ತ ಪಾರ್ಥಿವ ಪ್ರಕೃತಿಯ ಪಥಪದ್ಧತಿಯನ್ನು ಅನುಸರಿಸಿಯೇ ಆಕೆ ಸಾಗುತ್ತಾಳೆ. ಮತ್ತು ತನ್ಮೂಲಕವೇ ಇವೆಲ್ಲವುಗಳನ್ನು ಆಕೆ ರೂಪಾಂತರಗೊಳಿಸಬಲ್ಲಳು. ಪರಮೇಶ್ವರೇಚ್ಛೆಯಿಂದಲೇ ವಿಧಿಸಲ್ಪಟ್ಟ ಕೆಲ ವೊಂದು ವಿಧಿವ್ಯವಸ್ಥೆಗಳುಂಟು, ಅವನ್ನು ಪಾಲಿಸಲೇ ಬೇಕಾಗುತ್ತದೆ. ಆದೆಷ್ಟೋ ತೊಡಕಿನ ಗಂಟುಗಳುಂಟು, ಅವುಗಳನ್ನೆಲ್ಲ ಮೆಲ್ಲಗೆ ಸಡಿಲಿಸಿ ಬಿಡಿಸಬೇಕಲ್ಲದೆ ಕಟ್ಟನೆ ಕತ್ತರಿಸಿ ಕಿತ್ತೊಗೆದರಾಗದು. ಕ್ರಮವಿಕಾಸದಲ್ಲಿ ತೊಡಗಿದ ಈ ಪಾರ್ಥಿವ ಪ್ರಕೃತಿಯು ಅಸುರನ ಮತ್ತು ರಾಕ್ಷಸನ ವಶವರ್ತಿಯಾಗಿದೆ. ಬಹು ಪುರಾತನ ಕಾಲದಿಂದ ಗೆದ್ದು ತಮ್ಮ ಸ್ವಾಧೀನಪಡಿಸಿಕೊಂಡಿದ್ದ ಅವರ ಸ್ವಂತದ ಉಂಬಳಿ ಸೊತ್ತುಸೀಮೆಗಳಲ್ಲಿಯೇ ಅವರನ್ನು ಎದುರಿಸಿ, ಅವರ ನಿಯಮ ನಿರೀಕ್ಷೆಗಳಿಗೆ ಸಲ್ಲುವಂತೆಯೇ ಅವರನ್ನು ಗೆಲ್ಲಬೇಕಾಗಿದೆ. ನಮ್ಮೊಳಗಿನ ಮಾನುಷತೆಯ ಭಾವವು ತನ್ನ ಮಿತಿಮೇರೆಗಳನ್ನು ಮೀರುವಂತೆ ಕ್ರಮೇಣ ಹದಗೊಳಿಸಿ, ಅದನ್ನು ಕೈಹಿಡಿದು ಕರೆದೊಯ್ಯಲಿಕ್ಕೆಬೇಕು. ಅದಾದರೋ ತೀರ ದುರ್ಬಲ, ತೀರ ತಮೋಗ್ರಸ್ತವಾಗಿದ್ದ ಕಾರಣ ತನಗೆ ಮೀರಿದ ರೂಪವೊಂದನ್ನು ಹೊಂದಲು ಅದನ್ನು ಗಕ್ಕನೆ ಎತ್ತಿ ನಿಲ್ಲಿ ಸಲು ಶಕ್ಯವಿಲ್ಲ. ಪರಾಚೈತನ್ಯವೂ ಪರಾಶಕ್ತಿಯೂ ನಿತ್ಯ ನಿಕಟವರ್ತಿಯಾಗಿಯೇ ಇರುವದುಂಟು. ಸಾಧನೆಯ ಅವಸ್ಥೆಗನುಗುಣವಾಗಿ ಏನೇನು ಅಗತ್ಯವೊ ಅದನ್ನೆಲ್ಲ ಅವು ಪ್ರತಿನಿಮಿಷವೂ ಮಾಡುತ್ತ ಇರುವದುಂಟು. ಸದಾ ಸರ್ವಕಾಲ ಪೂರ್ವನಿರ್ದಿಷ್ಟ ಹೆಜ್ಜೆಯನ್ನೇ ಇಕ್ಕುತ್ತ ಅವು ಮುಂಬರಿಯುತ್ತ ಇರುವದುಂಟು. ಅಲ್ಲದೆ ಇಂದಿನ ಅಪೂರ್ಣತೆಯ ನಡುವೆ ನಿಂತು ನಾಳೆ ಬರಲಿರುವ ಪ್ರಪೂರ್ಣತೆಯನ್ನು ಅವು ರೂಪಿಸುತ್ತ ಇರುವುದೂ ಉಂಟು. ಆದರೆ ನಿನ್ನೊಳಗೆ ಅತಿಮಾನಸವೇ ಇಳಿದು ಬಂದಾಗ ಮಾತ್ರ, ನಿನ್ನ ಅತಿಮಾನಸ ಪ್ರಕೃತಿಗಳೊಡನೆ ಪರಾಮಾತೆಯು ಅತಿಮಾನಸ ಶಕ್ತಿರೂಪದಲ್ಲಿ ಪ್ರತ್ಯಕ್ಷ ವ್ಯವಹರಿಸಬಲ್ಲಳು. ನೀನು ನಿನ್ನ ಮನದ

ಬೆಂಬತ್ತಿ ನಡೆದೆಯಾದರೆ ನಿನ್ನಿದಿರು ಆದಿಮಾತೆ ಸಾಕ್ಷಾತ್ ವ್ಯಕ್ತಳಾಗಿದ್ದರೂ ಅದು ಆಕೆಯನ್ನು ಗುರುತಿಸದು. ನೀನು ನಿನ್ನ ಅಂತರಾತ್ಮವನ್ನು ಹಿಂಬಾಲಿಸಿ ನಡೆಯಬೇಕಲ್ಲದೆ ನಿನ್ನ ಮನಸ್ಸನ್ನಲ್ಲ. ನಿನ್ನ ಅಂತರಾತ್ಮವೇ ಸತ್ಯದ ಕರೆಗೆ ಓಗೊಡುವದಲ್ಲದೆ ಬಾಹ್ಯ ಆಭಾಸಗಳನ್ನು ಕಂಡೊಡನೆ ನೆಗೆದು ಮುಗಿಬೀಳುವ ನಿನ್ನ ಮನಸ್ಸಲ್ಲ. ಪರಾಶಕ್ತಿಯನ್ನೇ ನಂಬು. ಆಕೆ ನಿನ್ನೊಳಗಿನ ದೇವಸದೃಶ ಅಂಶಗಳನ್ನೆಲ್ಲ ಉನ್ಮುಕ್ತಗೊಳಿಸುತ್ತಾಳಲ್ಲದೆ ಅವನ್ನೆಲ್ಲ ದಿವ್ಯ ಪ್ರಕೃತಿಯ ಅಭಿವ್ಯಕ್ತಿಯಾಗಿ ರೂಪಿಸುತ್ತಾಳೆ.

ಅತಿಮಾನಸ ಪರಿವರ್ತನವು ನಿಯತಿನಿರ್ದಿಷ್ಟವಾಗಿದೆ ಹಾಗೂ ಪಾರ್ಥಿವ ಚೈತನ್ಯದ ಕ್ರಮ ವಿವರ್ತನೆಯಲ್ಲಿ ಅದು ಅನಿವಾರ್ಯವಾಗಿದೆ. ಏಕೆಂದರೆ ಈ ಪಾರ್ಥಿವ ಚೈತನ್ಯದ ಆರೋಹಣ ಕ್ರಮವು ಇನ್ನೂ ಮುಗಿದಿಲ್ಲ, ಮತ್ತು ಮನಸ್ಸೇ ಅದರ ಸರ್ವೋಚ್ಚ ಶಿಖರವಲ್ಲ. ಆದರೆ ಆ ಮಾರ್ಪಾಟು ಬಂದೊದಗಲು, ರೂಪುಗೊಳ್ಳಲು, ಚಿರಕಾಲ ತಾಳಿ ಬಾಳಲು, ಕೆಳಗಿನಿಂದ ಹಂಬಲದ ಕರೆ ಬೇಕು, ಹಾಗೂ ಅದರ ಜತೆಜತೆಗೆ ಪರಂಜ್ಯೋತಿ ಕೆಳಗಿಳಿದು ಬಂದಾಗ ಅದನ್ನು ನಿರಾಕರಿಸದೆ ಗುರುತಿಸಿ ಬರಮಾಡಿಕೊಳ್ಳುವ ದೃಢ ಸಂಕಲ್ಪ ಬೇಕು, ಮತ್ತೆ ಅತ್ಯಗತ್ಯವಾಗಿ ಮೇಲಿನಿಂದ ಪರಮೇಶ್ವರನ ಅನುಮತಿಯು ಬೇಕು. ಮೇಲಿನ ಈ ಅನುಮತಿ ಹಾಗೂ ಕೆಳಗಿನ ಈ ಕರೆ ಇವೆರಡರ ನಡುವಿದ್ದು ಕೊಡಕೊಳ್ಳುವ ಕೆಲಸ ನಡಸುವ ಶಕ್ತಿಯು ಸಾಕ್ಷಾತ್ ಪರಾಮಾತೆಯ ಸಾನ್ನಿಧ್ಯ ಮತ್ತು ಶಕ್ತಿಯೇ ಸೈ. ಮನುಷ್ಯನ ಎಂಥ ಪ್ರಯಾಸಕ್ಕೂ ತಪಸ್ಸಿಗೂ ಅಸಾಧ್ಯವಾಗಿದ್ದದ್ದು ಕೇವಲ ಆ ಆದಿಮಾತೆಯ ಶಕ್ತಿಗಷ್ಟೇ ಸಾಧ್ಯ. ಆಕೆ ಮಾತ್ರ ಮುಚ್ಚಳ ಒಡೆದು ಮುಸುಕು ಹರಿದು ಪಾತ್ರವನ್ನು ರೂಪಿಸಬಲ್ಲಳು, ಮತ್ತು ಅಜ್ಞಾನ, ಅಸತ್ಯ, ಕ್ಲೇಶಗಳಿಂದ ತುಂಬಿದ ಈ ಇಹಲೋಕಕ್ಕೆ ಆಕೆಯ ಶಕ್ತಿಮೂಲಕವೇ ಇಳಿದು ಬರಬಲ್ಲವು : **ಸತ್ಯ, ಪರಂಜ್ಯೋತಿ, ದಿವ್ಯ ಜೀವನ** ಹಾಗೂ ಅಮರನ **ಆನಂದ** !

ಅನುವಾದಕ : **ನಾರಾಯಣ ಸಂಗಮ, ಧಾರವಾಡ.**

# ವೇದ

## "Hymns to the Mystic Fire"

### ಅಗ್ನಿ ಸೂಕ್ತಗಳು ಎಂಬ ಗ್ರಂಥದ ಮುನ್ನುಡಿ

ಶ್ರೀ ಅರವಿಂದರು

## ವೇದದ ಬಗ್ಗೆ ಪ್ರಾಚೀನ ಕಲ್ಪನೆ

ಪ್ರಾಚೀನ ಕಾಲದಲ್ಲಿ ವೇದವು ಪವಿತ್ರ ಜ್ಞಾನಗ್ರಂಥವೆಂದು ಮನ್ನಣೆ ಪಡೆದಿದ್ದಿತು. ಅಂತಃಪ್ರೇರಿತ ಕಾವ್ಯವದು. ಋಷಿಮುನಿಗಳು, ದ್ರಷ್ಟಾರರು ತಮ್ಮ ಸಂಬುದ್ಧ ಮನಸ್ಸಿನಲ್ಲಿ ವ್ಯಕ್ತವಾದ ಸಾರ್ವದೇಶಿಕ ಸಾರ್ವಕಾಲಿಕ ಅಪೌರುಷೇಯ ಸತ್ಯವನ್ನು ಮಂತ್ರಮೂಲಕ ವ್ಯಕ್ತಪಡಿಸಿದರು. ದೈವೀಸ್ಫೂರ್ತಿಯಿಂದ ಮತ್ತು ಉಗಮದಿಂದ ಶಕ್ತಿಸಂಪನ್ನವಾದ ಋಕ್ಕುಗಳನ್ನು ಹೊರಹೊಮ್ಮಿದರು. ಅವೇನು ಸಾಮಾನ್ಯವಾದವುಗಳಾಗಿರಲಿಲ್ಲ. ಈ ಋಷಿಮುನಿಗಳೇ ಕವಿಗಳು. ಆದರೆ ಅನಂತರ ಮಾತ್ರ ಎಲ್ಲರಿಗೂ ಕವಿಗಳೆಂದು ಹೆಸರು ಬಿದ್ದಿತು. ಮೊದಲು ಮಾತ್ರ ಕವಿಗಳೆಂದರೆ ಸತ್ಯದ್ರಷ್ಟಾರರೆಂದು ಭಾವಿಸಲಾಗುತಿದ್ದಿತು. ವೇದದಲ್ಲಿ ಕೂಡ 'ಕವಯಃ ಸತ್ಯ ದ್ರಷ್ಟಾರಃ' ಎಂದು ಉಲ್ಲೇಖವಿದೆ. ಉಪನಿಷತ್ಕಾರರೂ ವೇದದ ಬಗ್ಗೆ ಇದೇ ಬಗೆಯ ಅಭಿಪ್ರಾಯ ತಾಳಿದರು. ವೇದವೆಂದರೆ ಆಧಾರಗ್ರಂಥವೆಂದು ಬಗೆದು ಅಲ್ಲಲ್ಲಿ ಅದನ್ನು ಉದಾಹರಿಸುವರು. ಇವೇ ಶ್ರುತಿಗಳೆಂದು ಪ್ರಸಿದ್ಧವಾದವು.

ಬ್ರಾಹ್ಮಣಗಳಲ್ಲಿಯೂ ಇದೇ ಪರಂಪರೆ ಮುಂದುವರಿಯಿತು. ಎಲ್ಲವೂ ಕಟ್ಟುಕಥೆ ಎಂದು ಯಾಜ್ಞಿಕರು ಅಭಿಪ್ರಾಯಪಟ್ಟರೂ ಪಂಡಿತರು ವೇದಗಳಲ್ಲಿ ಕರ್ಮ-ಕಾಂಡ ಮತ್ತು ಜ್ಞಾನಕಾಂಡವೆಂದು ಎರಡು ವಿಭಾಗ ಮಾಡಿದರು. ಮಂತ್ರಗಳು ಕರ್ಮಕಾಂಡಕ್ಕೆ ಸಂಬಂಧಿಸಿದ್ದು, ಉಪನಿಷತ್ತುಗಳು ಜ್ಞಾನಕಾಂಡವನ್ನು ಪ್ರತಿಪಾದಿಸುವವೆಂದು ಅವರು ಹೇಳಿದರು. ಇದರಿಂದ ಮೇಲೆ ಹೇಳಿದ ಪರಂಪರೆಗೆ ಲೋಪ ಬರಲಿಲ್ಲ. ಕರ್ಮಕಾಂಡವು ಜ್ಞಾನಕಾಂಡವನ್ನು ಗೌಣವಾಗಿಸಿದ್ದನ್ನು ಒಂದು ಉಪನಿಷತ್ತು ಮತ್ತು ಗೀತೆ ಟೀಕಿಸಿವೆ. ವೇದವು ಜ್ಞಾನಕಾಂಡವನ್ನು ಬೋಧಿಸುತ್ತಿದೆ-ಯೆಂದು ಉಪನಿಷತ್ತು ಮತ್ತು ಗೀತೆ ಸಾರುತ್ತವೆ. ವೇದೋಪನಿಷತ್ತುಗಳಿಂದ ಯುಕ್ತವಾದ ಶ್ರುತಿಯು ಕೂಡ ಆಧ್ಯಾತ್ಮಿಕ ಜ್ಞಾನಕ್ಕೆ ಶ್ರೇಷ್ಠ ಸಹಾಯಕ ಗ್ರಂಥವೆಂದು ಭಾವಿಸಲಾಗುತ್ತದೆ.

## ಸಾಯಣರ ಭಾಷ್ಯ

ಇದೆಲ್ಲ ಕೇವಲ ದಂತಕಥೆಯೋ? ಚಂದ್ರನ ಬೆಳದಿಂಗಳೇ? ತಳಬುಡವಿಲ್ಲದ ಮೂರ್ಖರ ಬಡಬಡಿಕೆಯೇ? ಅಥವಾ ವಿಚಾರಪ್ರವರ್ತಕವಾದ ಇತ್ತೀಚಿನ ಕೆಲ ಮಂತ್ರಗಳಲ್ಲಿ ಶ್ರೇಷ್ಠ ವಿಚಾರ ಕಡಮೆ ಇರುವವೇ? ಉಪನಿಷತ್ಕಾರರು ವೇದ ಋಕ್ಕು ಗಳಿಗೆ, ತಮ್ಮ ಬುದ್ಧಿಶಕ್ತಿಯಿಂದ, ಇಲ್ಲದ ಅರ್ಥವನ್ನು ಮಾಡಿದರೆ? ಆಧುನಿಕ ಯುರೋಪಿಯನ್ ವಿದ್ವಾಂಸರು ಈ ರೀತಿ ಅಭಿಪ್ರಾಯಪಡುತ್ತಾರೆ. ಇತ್ತೀಚಿನ ಭಾರತೀಯರ ಮನಸ್ಸಿನಲ್ಲಿಯೂ ಇವೇ ವಿಚಾರಗಳು ಮುದ್ರೆಯೊತ್ತಿವೆ. ವೇದದ ಋಷಿಗಳು ಕೇವಲ ಮಂತ್ರದ್ರಷ್ಟಾರರಾಗಿರದೆ, ಗಾಯಕರು, ಯಜ್ಞಗಳಲ್ಲಿ ಋತ್ವಿ-ಜರು ಆಗಿದ್ದರು. ಸಾರ್ವಜನಿಕ ಸಭೆಗಳಲ್ಲಿ ಅವರು ಮಂತ್ರಗಳನ್ನು ಘೋಷಿಸುತ್ತಿದ್ದರು. ಬೇರೆ ಬೇರೆ ಸಮಾರಂಭಗಳಲ್ಲಿ, ಸಂಪತ್ತು, ಸಮೃದ್ಧಿ, ವಿಜಯ ಮೊದಲಾ-ದ್ದನ್ನು ಪಡೆಯುವುದಕ್ಕಾಗಿ ವೇದಮಂತ್ರಗಳ ಪಠನ ನಡೆಯುತ್ತಿದ್ದಿತು. ಮೇಲಿನ ಅಭಿಪ್ರಾಯಕ್ಕೆ ಇದೆಲ್ಲ ಪೋಷಕವಾಗಿದೆ. ವೇದಕ್ಕೆ ವ್ಯಾಖ್ಯಾನ ಮಾಡಿದ ಸಾಯಣಾ-ಚಾರ್ಯರು ಋಕ್ಕುಗಳಿಗೆ ಕರ್ಮಕಾಂಡದ ಅರ್ಥವನ್ನು ಮಾಡುವರು; ಹೆಚ್ಚಿನ ಅರ್ಥ ವನ್ನು ಕ್ವಚಿತ್ತಾಗಿ ಹೇಳುವರು. ಆದರೂ ಅವರು ವೇದಗಳಿಗಿರುವ ಆಧ್ಯಾತ್ಮಿಕ ಶ್ರೇಷ್ಠತ್ವವನ್ನೂ ಅವುಗಳಲ್ಲಿರುವ ಪರಮಸತ್ಯವನ್ನೂ ಅಲ್ಲಗಳೆಯುವುದಿಲ್ಲ. ಕೊನೆಯ ಈ ವಿಕಾಸವು ನಮ್ಮ ಕಾಲಕ್ಕೇ ಮೀಸಲಾಗಿದ್ದಿತು. ಪಾಶ್ಚಾತ್ಯ ವಿದ್ವಾಂಸರು ಇದನ್ನು ಪ್ರಸಾರಮಾಡಿದರು.

## ಪಾಶ್ಚಾತ್ಯ ವಿದ್ವಾಂಸರ ಸಿದ್ಧಾಂತ

ಯುರೋಪಿಯನ್ ವಿದ್ವಾಂಸರು ಕರ್ಮಕಾಂಡದ ಪರಂಪರೆಯನ್ನು ಅನುಸರಿಸಿ-ದರು. ಆದರೆ ಉಳಿದ ವಿಷಯಗಳಲ್ಲಿ ಅವರು ಸಾಯಣರನ್ನು ಅನುಸರಿಸದೆ, ತಮ್ಮದೇ ಆದ ರೀತಿಯಲ್ಲಿ ಶಬ್ದಗಳ ವ್ಯುತ್ಪತ್ತ್ಯರ್ಥಾನುಸಾರವಾಗಿ ವಿವರಣೆ ಮಾಡಿ-ದರು. ವೇದಋಕ್ಕುಗಳಿಗೆ ಸ್ವಚ್ಛಂದ ಮತ್ತು ಕಾಲ್ಪನಿಕ ಅರ್ಥವನ್ನು ಮಾಡಿ-ದರು. ಅನೇಕ ಸಂದರ್ಭಗಳಲ್ಲಿ ಇದು ಪ್ರತ್ಯಯಕ್ಕೆ ಬರುವುದು. ವೇದದಲ್ಲಿ ಪ್ರಾಚೀನ ಭಾರತದ ಇತಿಹಾಸವೇ ಇದೆಯೆಂದು ಅವರು ಭಾವಿಸಿದರು. ಭಾರತದ ಪ್ರಾಚೀನ ಸಮಾಜ ಸಂಘ ಸಂಸ್ಥೆಗಳು, ರೂಢಿ ಪರಂಪರೆಗಳು ನಾಗರಿಕತೆ ಮತ್ತು ಆ ಕಾಲದ ಚಿತ್ರವು ವೇದಗಳಲ್ಲಿ ವರ್ಣಿತವಾಗಿದೆಯೆಂದು ಅವರು ಮತಪಟ್ಟರು. ಆರ್ಯರು ಉತ್ತರದಿಂದ ದ್ರಾವಿಡರ ಮೇಲೆ ಮಾಡಿದ ದಾಳಿಯ ಪರಿಣಾಮವಾಗಿ ಭಾಷೆಯಲ್ಲಿ ಕಂಡುಬಂದ ಭೇದದಿಂದ ಅವರು ತಮ್ಮೀ ಕಲ್ಪನಾಸಾಮ್ರಾಜ್ಯವನ್ನು ಕಟ್ಟಿದರು; ಆದರೆ ಭಾರತೀಯರಲ್ಲಿ ಈ ದಾಳಿಯ ಸ್ಮರಣೆಯಾಗಲಿ ಪರಂಪರೆಯಾಗಲಿ ಉಳಿದಿರುವದಿಲ್ಲ, ಅಲ್ಲದೆ ಅವರ ಪುರಾಣಗಳಲ್ಲಾಗಲಿ ಪ್ರಾಚೀನ ಸಾಹಿತ್ಯದಲ್ಲಾಗಲಿ

ಇದರ ಉಲ್ಲೇಖವಿರುವುದಿಲ್ಲ. ಈ ವಿದ್ವಾಂಸರ ಅಭಿಪ್ರಾಯದಲ್ಲಿ ವೇದಧರ್ಮವೆಂದರೆ ಸೃಷ್ಟಿದೇವತೆಯ ಪೂಜೆ, ಆ ದೇವತೆಗಾಗಿ ಯಜ್ಞಯಾಗಾದಿಗಳನ್ನು ಮಾಡುವುದು ತೀರ ಕಾಡುಸ್ಥಿತಿಯಲ್ಲಿ ಇರುವ ವಿಚಾರಗಳು ಪ್ರಾರ್ಥನೆಗಳು. ಇವುಗಳಿಗೇ ವೇದ-ಗಳಲ್ಲಿ ಹೆಚ್ಚು ಮಹತ್ವ ಕೊಟ್ಟು ಪ್ರಶಂಸಿಸಲಾಗಿದೆಯೆಂದು ಅವರು ಅಭಿಪ್ರಾಯ-ಪಡುತ್ತಾರೆ.

## ಉಪಾಸನಾಕ್ರಮದ ಬೆಳವಣಿಗೆ

ಪ್ರಾಚೀನಕಾಲದಲ್ಲಿ ಸೂರ್ಯ, ಚಂದ್ರ, ಆಕಾಶ, ಪೃಥ್ವಿ, ವಾಯು, ವರುಣ ಮೊದಲಾದ ದೇವತೆಗಳ ಪೂಜೆ ನಡೆಯುತ್ತಿದ್ದಿತು. ಸೃಷ್ಟ್ಯಭಿಮಾನಿಗಳಾದ ಅನೇಕ ದೇವತೆಗಳು, ಪವಿತ್ರನದಿಗಳು ಅರ್ಚಿಸಲ್ಪಡುತಿದ್ದವೆಂಬಲ್ಲಿ ಸಂದೇಹವಿಲ್ಲ. ಗ್ರೀಸ, ರೋಮ ಮತ್ತು ಇನ್ನಿತರ ಪ್ರಾಚೀನ ಜಗತ್ತಿನಲ್ಲಿಯು ಜನರು ಸಾಮಾನ್ಯವಾಗಿ ಇದೇ ಬಗೆಯ ಪೂಜೆ ಮಾಡುತಿದ್ದರು. ಆದರೆ ಬರಬರುತ್ತ, ಈ ದೇವತೆಗಳು ಈ ದೇಶಗಳಲ್ಲಿ ಶ್ರೇಷ್ಠ ಮತ್ತು ಮನೋವೈಜ್ಞಾನಿಕ ಕಾರ್ಯಗಳನ್ನು ಮಾಡಹತ್ತಿದವು. ಆಕಾಶ ದೇವತೆಯ ಶಿರಸ್ಸಿನಿಂದ ಅಗ್ನಿಯಲ್ಲಿ ಹೊರಹೊಮ್ಮಿದ ಉಷಾದೇವಿಯು ಗ್ರೀಕರ 'ಪಲ್ಲಾಸ ಅಥೆನೆ', ವೇದದ ದ್ಯೌಃ ದೇವತೆಯು ಮುಂದೆ ಅದೇ ಗ್ರೀಸಿನಲ್ಲಿ ಹೆಚ್ಚಿನ ಕಾರ್ಯ ಮಾಡಹತ್ತಿದಳು. ರೋಮನ್ನರು ಇವಳನ್ನೆ 'ಮಿನೆರ್ವಾ' ಎಂದು ಕರೆದರು, ಇವಳೇ ಅವರ ವಿದ್ಯಾರ್ಥಿದೇವತೆ. ಅದೇ ರೀತಿ ಭಾರತದಲ್ಲಿ ಸರಸ್ವತೀನದ್ಯಭಿಮಾನಿ ದೇವತೆಯು ವಿದ್ಯಾಭಿಮಾನಿ ದೇವತೆಯಾದಳು. ಗ್ರೀಕ ದೇವತೆಗಳೆಲ್ಲ ಈ ರೀತಿ ಬದಲಾವಣೆ ಹೊಂದಿದವು. ಸೂರ್ಯದೇವತೆಯಾದ 'ಅಪೋಲೊ' ಕಾವ್ಯದೇವತೆ-ಯಾದನು. ಅಗ್ನಿದೇವತೆಯಾದ ಹೆಫ್‌ಸ್ಟಸ್ ದೈವೀ ಪಂಚಾಳನಾದನು. ವೇದ ದೇವತೆಗಳು ಈ ರೀತಿ ತಮ್ಮ ಮನೋವೈಜ್ಞಾನಿಕ ಕಾರ್ಯಗಳನ್ನು ಮಾಡಹತ್ತಿದರೂ ತಮ್ಮ ಬಾಹ್ಯಸ್ವರೂಪವನ್ನು ಹಾಗೆಯೆ ಇಟ್ಟುಕೊಂಡವು. ಉಚ್ಚ ಉದ್ದೇಶಕ್ಕಾಗಿ ಹೊಸ ಕಾರ್ಯ ಮಾಡಹತ್ತಿದವು. ಪೌರಾಣಿಕ ದೇವತೆಗಳಿಗೆ ಹೆಚ್ಚಿನ ಪ್ರಾಮುಖ್ಯ ದೊರೆಯಿತು. ಆ ದೇವತೆಗಳು ವಿಕಾಸಹೊಂದಿ ಹೆಚ್ಚಿನ ಕಾರ್ಯ ಮಾಡಹತ್ತಿದವು ವಿಷ್ಣು, ರುದ್ರ, ಬ್ರಹ್ಮ— ವೇದದಲ್ಲಿಯ ಬೃಹಸ್ಪತಿ, ಬ್ರಹ್ಮಣಸ್ಪತಿಗಳಿಂದ ವಿಕಾಸ ಹೊಂದಿದರು— ಶಿವ, ಲಕ್ಷ್ಮೀ, ದುರ್ಗಾ ಇವುಗಳ ವಿಕಾಸವೂ ಹೀಗೆಯೇ ಆಯಿತು. ಈ ರೀತಿ ಭಾರತದಲ್ಲಿ ದೇವತೆಗಳ ಬದಲಾವಣೆ ಅಷ್ಟೊಂದು ಪರಿಪೂರ್ಣವಾಗಲಿಲ್ಲ. ಪ್ರಾಚೀನ ದೇವತೆಗಳು ಪೌರಾಣಿಕ ಕಾಲದಲ್ಲಿ ಕಡಿಮೆ ತರಗತಿಯ ದೇವತೆಗಳಾದವು. ಋಗ್ವೇದದಲ್ಲಿ ಅವುಗಳ ಮನೋವೈಜ್ಞಾನಿಕ ಮತ್ತು ಬಾಹ್ಯಕಾರ್ಯಗಳು ಕೂಡಿಯೇ ವರ್ಣಿಸಲ್ಪಟ್ಟಿರುವುದೇ ಇದಕ್ಕೆ ಕಾರಣ. ಇವೆರಡೂ ಕಾರ್ಯಗಳಿಗೆ ಅದರಲ್ಲಿ ಅಷ್ಟೇ ಮಹತ್ವ ಕೊಡಲಾಗಿದೆ. ಗ್ರೀಸ ಮತ್ತು ರೋಮಗಳಲ್ಲಿಯು ದೇವತೆಗಳ ಮೂಲ ಸ್ವರೂಪವನ್ನು ವರ್ಣಿಸಿದ ಗ್ರಂಥಗಳಾವುವೂ ಉಪಲಬ್ಧವಿರುವುದಿಲ್ಲ.

## ಆದಿಕಾಲದ ನಾಗರಿಕತೆಗಳ ಮೇಲೆ ಅನುಭಾವಿಗಳ ಪ್ರಭಾವ

ಈ ಪುರಾತನ ಜನತೆಯಲ್ಲಿ ಸಾಂಸ್ಕೃತಿಕ ಬೆಳವಣಿಗೆಯಾದ್ದರಿಂದ ಹೀಗಾಯಿತೆಂಬುದು ಸುಸ್ಪಷ್ಟ. ನಾಗರಿಕತೆಯಲ್ಲಿ ಅವರು ಮುಂದುವರಿದಂತೆ ಭೌತಿಕ ಜೀವನಕ್ಕೆ ಮಹತ್ವಕೊಡದೆ, ಆಧ್ಯಾತ್ಮಿಕ ಜೀವನಕ್ಕೆ ಹೆಚ್ಚು ಪ್ರಾಮುಖ್ಯ ದೊರೆಯಹತ್ತಿತು. ತಮ್ಮ ಆಧ್ಯಾತ್ಮಿಕ ವಿಚಾರಕ್ಕೆ ಪೋಷಕವಾಗುವಂತೆ ಧರ್ಮದಲ್ಲಿ ದೇವತೆಗಳಲ್ಲಿ ಅವರು ಸೂಕ್ಷ್ಮತರವಾದ ಮತ್ತು ಸುಂದರವಾದ ದೃಶ್ಯವನ್ನು ಕಾಣಹತ್ತಿದರು. ಅವುಗಳಿಂದ ನೆರವನ್ನು ಬಗೆದರು. ಆದರೆ ಈ ಜನತೆಯ ಮನಸ್ಸಿನಲ್ಲಿ ಆಧ್ಯಾತ್ಮಿಕತೆಯ ಒಲವು ಹೆಚ್ಚುವದಕ್ಕೆ ಅನುಭಾವಿಗಳೇ ಕಾರಣರೆಂದು ಒಪ್ಪಲೇಬೇಕಾಗುವದು. ಈ ಪುರಾತನ ನಾಗರಿಕತೆಯ ಮೇಲೆ ಅನುಭಾವಿಗಳ ವರ್ಚಸ್ಸು ಹೆಚ್ಚಿಗಿದ್ದಿತು. ಪ್ರತಿಯೊಂದು ದೇಶದಲ್ಲಿಯೂ ಈ ಅನುಭಾವಿಗಳ ಯುಗವಾಗಿ ಹೋಗಿದೆ. ಆ ಕಾಲದಲ್ಲಿ ಜ್ಞಾನಿಗಳು ಮತ್ತು ಆತ್ಮಜ್ಞಾನವುಳ್ಳವರು ಆಚಾರ ವಿಚಾರಗಳನ್ನು, ವಿಶಿಷ್ಟ ಕರ್ಮಗಳನ್ನು, ಚಿಹ್ನೆ ಮೊದಲಾದವುಗಳನ್ನು ಪ್ರಚಾರ ಮಾಡಿ, ಇನ್ನೂ ಕಾಡು ಸ್ಥಿತಿಯಲ್ಲಿ ಇದ್ದವರ ಬಾಹ್ಯ ಧಾರ್ಮಿಕ ಆಚಾರವಿಚಾರ ಗಳಲ್ಲಿ ಒಂದು ಬಗೆಯ ಕ್ರಾಂತಿಯನ್ನುಂಟುಮಾಡಿದರು. ಇದರಿಂದ ಆಯಾ ದೇಶ ಗಳಲ್ಲಿ ಭಿನ್ನ ಭಿನ್ನ ಪರಿಣಾಮ ಉಂಟಾದವು. ಗ್ರೀಸ, ರೋಮ, ಇಜಿಪ್ತ, ಇರಾಣ, ಮೊದಲಾದ ದೇಶಗಳಲ್ಲಿ ಅಲ್ಲಿನ ಅನುಭಾವಿಗಳು, ಭಾರತದಲ್ಲಿ ಋಷಿಮುನಿಗಳು, ಈ ಕಾರ್ಯವನ್ನು ನಡೆಸಿದರು. ಈ ಅನುಭಾವಿಗಳು ಆತ್ಮಜ್ಞಾನ ಪಡೆಯಲು ಮತ್ತು ಜಗದ್ರಹಸ್ಯವನ್ನು ತಿಳಿಯಲು ಹಂಬಲಿಸುತಿದ್ದರು. ಮಾನವನಲ್ಲಿ ಪರಮಾತ್ಮನಿರುವನೆಂದು ಕಂಡುಹಿಡಿದು ಅವನನ್ನು ಹುಡುಕಿ, ಅವನ ಜ್ಞಾನ ಮಾಡಿಕೊಳ್ಳುವುದೇ ತಮ್ಮ ಇತಿಕರ್ತ್ತವ್ಯವೆಂದು ಅವರೇ ಭಾವಿಸಿದರು. ಭಾರತದಲ್ಲಿ ಆತ್ಮಜ್ಞಾನವೇ ಆಧ್ಯಾತ್ಮಿಕ ಆವಶ್ಯಕತೆಯೆನಿಸಿದ್ದರೆ ಆ ದೇಶಗಳಲ್ಲಿ 'ನಿನ್ನ ನೀ ಅರಿ' ಎಂಬುದೇ ಬೀಜಮಂತ್ರವಾಗಿದ್ದಿತು. ಈ ಜಗತ್ತಿನ ಬಾಹ್ಯ ಸ್ವರೂಪದ ಹಿಂದೆ ಸತ್ಯವು ಹುದುಗಿಕೊಂಡಿದ್ದು ಅದನ್ನು ಅನುಸರಿಸಿ ಅದರ ಜ್ಞಾನಮಾಡಿಕೊಳ್ಳುವುದವಶ್ಯವೆಂದು ಅವರು ಮನಗಂಡರು. ಸೃಷ್ಟಿಯ ರಹಸ್ಯವನ್ನು, ಅದರ ಶಕ್ತಿಸಾಮರ್ಥ್ಯಗಳನ್ನು ಕಂಡುಹಿಡಿದರು. ಕೇವಲ ಬಾಹ್ಯ ಸೃಷ್ಟಿಯ ಸ್ವರೂಪವನ್ನಲ್ಲದೆ, ಅದೆಲ್ಲದರ ರಹಸ್ಯವನ್ನು ಅಂತಃಸತ್ವವನ್ನು ತಿಳಿದುಕೊಳ್ಳುವದೂ ಅವರ ಮನೀಷೆಯಾಗಿದ್ದಿತು. ಆದರೆ ಇದು ಸಾಧ್ಯವಾಗಬೇಕಾದರೆ ಕಠಿಣ ಮತ್ತು ನಿಯತ ಶಿಕ್ಷಣ, ಶಿಸ್ತು, ಪಾವಿತ್ರ್ಯ ಅತ್ಯವಶ್ಯವಾಗಿದ್ದವು. ಸಾಮಾನ್ಯ ಮನುಷ್ಯನಿಗೆ ಇದೆಲ್ಲ ಅಸಾಧ್ಯ. ಆದುದರಿಂದ ಈ ಬಗೆಯ ಅಧಿಕಾರಸಂಪತ್ತಿಯನ್ನು ಪಡೆಯದೆ ಯಾವನೊಬ್ಬ ಸಾಮಾನ್ಯ ಮನುಷ್ಯನು ಈ ಕಾರ್ಯ ಮಾಡಹತ್ತಿದರೆ ಅವನಿಗೆ ಮತ್ತು ಇತರರಿಗೆ ಘಾತಕ ಪರಿಣಾಮವುಂಟಾಗುತಿದ್ದಿತು. ಈ ಜ್ಞಾನ, ಈ ಶಕ್ತಿಯನ್ನು ದುರುಪಯೋಗ ಮಾಡಿ

ಕೊಂಡು ಅವುಗಳಿಗೆ ವಿಪರೀತ ಅರ್ಥಮಾಡಿ ಸತ್ಯದಿಂದ ಅಸತ್ಯದ, ಒಳ್ಳೆಯದರಿಂದ ಕೆಟ್ಟ ಮಾರ್ಗವನ್ನು ಹಿಡಿಯಬಹುದಾಗಿದೆ. ಅಂತೆಯೇ ಇದೆಲ್ಲವನ್ನು ಬಹಳ ಗುಪ್ತವಾಗಿರಿಸಲಾಗಿದ್ದಿತು. ಗುರು ಶಿಷ್ಯನಿಗೆ ಏಕಾಂತದಲ್ಲಿ ಈ ವಿದ್ಯೆಯನ್ನು ಬೋಧಿಸುತ್ತಿದ್ದನು; ಗುಪ್ತವಾಗಿಟ್ಟ ಗುಹ್ಯ ಭಾಷೆಯಿಂದಲೆ ಈ ಶಿಕ್ಷಣಕ್ರಮ ಸಾಗುತ್ತಿದ್ದಿತು. ಉಳಿದವರಿಗೆ ಇದರ ಜ್ಞಾನವಾಗುತಿರಲಿಲ್ಲ. ಯಾವದೇ ರೀತಿ ಯಿಂದ ಅವರು ಆ ಜ್ಞಾನವನ್ನು ಪಡೆದಿದ್ದರೆ ಅದು ಕೇವಲ ಆಪಾತತಃ ತೋರುವ ಅರ್ಥದಿಂದೊಡಗೂಡಿದ್ದು, ನಿಜವಾದ ಅರ್ಥವನ್ನು, ರಹಸ್ಯವನ್ನು ಗುಪ್ತವಾಗಿಯೇ ಇರಿಸಲಾಗುತಿದ್ದಿತು. ಪ್ರತಿ ದೇಶದಲ್ಲಿಯೂ ರಹಸ್ಯವಾದದ, ಅಧ್ಯಾತ್ಮಮಾರ್ಗದ ಸ್ವರೂಪವಿಂತಿದ್ದಿತು.

## ವೇದಾರ್ಥವನ್ನು ಅರಿಯಲು ಏಕಮಾತ್ರ ವಿಧಾನ

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಋಷಿಗಳು, ವೇದದ್ರಷ್ಟಾರರು ಈ ಬಗೆಯ ಜನರಾಗಿದ್ದರು. ಇದೊಂದು ಬಗೆಯ ಪರಂಪರೆಯೇ ರೂಢವಾಗಿತ್ತು. ಸಾಮಾನ್ಯ ಜನತೆಯಲ್ಲಿ ಇಲ್ಲದೆ ಇದ್ದಂಥ, ಶ್ರೇಷ್ಠವಾದ ಆಧ್ಯಾತ್ಮಿಕ ಗೂಢಜ್ಞಾನವು ಅವರಿಗಿರುತ್ತಿದ್ದಿತು. ಈ ಜ್ಞಾನವನ್ನು ಅವರು ಪರಂಪರೆಯಾಗಿ ಶಿಷ್ಯರಿಗೆ ಬೋಧಿಸುತಿದ್ದರು. ಆ ಶಿಷ್ಯರಾದರೂ ದೀಕ್ಷಾಬದ್ಧರಾಗಿ ಗುರುಗಳಲ್ಲಿಗೆ ಹೋಗಿ ಈ ಅಧ್ಯಾತ್ಮ ಜ್ಞಾನವನ್ನು ಸಂಪಾದಿಸುತಿದ್ದರು.

ಈ ಪರಂಪರೆಗೆ ತಳಬುಡಗಳೇನೂ ಇರಲಿಲ್ಲ ಎಂದು ಭಾವಿಸುವದು ತಪ್ಪಾಗುವುದು. ಎಷ್ಟೇ ಚಿಕ್ಕದಾಗಿದ್ದರೂ ಈ ಪರಂಪರೆಗೆ ಒಂದು ಬಗೆಯ ಬುನಾದಿಯಿದ್ದಿತು. ದಂತಕಥೆ ಮುಂತಾದವು ನೂರಾರು ವರ್ಷಗಳಿಂದ ಇದಕ್ಕೆ ಸ್ವಲ್ಪ ಹೆಚ್ಚು ಮಹತ್ವವನ್ನು ಕೊಟ್ಟಿರಬಹುದು. ಈ ಪರಂಪರೆಯು ಅಸ್ತಿತ್ವದಲ್ಲಿ ಇದ್ದಿತೆಂದು ಒಪ್ಪಿದ್ದಾದರೆ ಈ ಕವಿ-ದ್ರಷ್ಟಾರರು ತಮ್ಮ ಈ ಗುಪ್ತ ವಿದ್ಯೆಯ ಬಗ್ಗೆ ಸ್ವಲ್ಪಾದರೂ ವಿವರಣೆ ಮಾಡಿರಬೇಕೆಂಬುದು ಸುಸ್ಪಷ್ಟವಾಗುವದು. ಗುಹ್ಯವಾದ ಭಾಷೆಯಲ್ಲಾದರೂ ಅವರು ತಮ್ಮ ಅಧ್ಯಾತ್ಮವಿದ್ಯೆಯನ್ನು ತಮ್ಮ ಲೇಖನಗಳ ಮೂಲಕ ಪ್ರಸಾರ ಮಾಡಿರಬೇಕೆಂಬುದು ನಿಶ್ಚಿತ. ಅವರ ಭಾಷೆ, ಶಬ್ದ ಮುಂತಾದವುಗಳ ಅರ್ಥವಾಗಲಿಕ್ಕೆ ಬಹಳ ಕಠಿಣವಾಗಿದ್ದಿತೆಂಬುದು ನಿಜ. ಯಾಸ್ಕಾಚಾರ್ಯರು ತಮಗೆ ಅರ್ಥವಾಗದಿದ್ದ ಇಂಥ ೪೦೦ಕ್ಕಿಂತ ಹೆಚ್ಚು ಶಬ್ದಗಳನ್ನು ಎತ್ತಿತೋರಿಸಿದ್ದಾರೆ. ಈ ಶಬ್ದಗಳ ಅರ್ಥವನ್ನು ಅವರು ಗುಪ್ತವಾಗಿರಿಸಿದ್ದರಿಂದ ಮುಂದಿನ ಪೀಳಿಗೆಯವರಿಗೆ ಅವುಗಳ ಅರ್ಥವಾಗದಂತಾಯಿತು. ಉಪನಿಷತ್ಕಾಲದಲ್ಲಿ ಕೂಡ ಅಧ್ಯಾತ್ಮವಾದಿಗಳು ಈ ಪವಿತ್ರ ಜ್ಞಾನಸಂಪಾದನೆಗಾಗಿ,ದೀಕ್ಷಾಬದ್ಧರಾಗಿದ್ದುಕೊಂಡು ವೇದದ ಗುಹ್ಯಾರ್ಥವನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕಾಗುತಿದ್ದಿತು. ಅನಂತರದ ವಿದ್ವಾಂಸರಂತೂ ದಿಕ್ಕು ತೋಚದವರಾಗಿ ಕೇವಲ ಊಹೆಯಿಂದ ತರ್ಕದಿಂದ ಲಾಕ್ಷಣಿಕ ಮತ್ತು

ಅಸ್ಪಷ್ಟವಾದ ದಂತಕಥೆ ಮುಂತಾದವುಗಳಿಂದ ಅರ್ಥ ಹಚ್ಚಲು ಪ್ರಯತ್ನಿಸುತಿದ್ದರು. ಈ ಸಂಬಂಧದಲ್ಲಿ ಯಾಸ್ಕಾಚಾರ್ಯರು ನಿರೂಪಿಸಿದ ಸೂಚನೆಯನ್ನು ಗಂಭೀರವಾಗಿ ವಿಚಾರಿಸಿ, ವೇದದಲ್ಲಿ ದ್ರಷ್ಟಾರರ ಜ್ಞಾನ ಮತ್ತು ಶಬ್ದಗಳಿರುವವೆಂದು ಋಷಿಗಳು ಹೇಳಿದ್ದನ್ನು ಮನನಮಾಡಿ, ಈ ಪ್ರಾಚೀನ ಜ್ಞಾನವನ್ನು ಸಂಪಾದಿಸುವ ಮಾರ್ಗ ವನ್ನು ಕಂಡುಹಿಡಿಯುವುದು ಅವಶ್ಯವಾಗಿದೆ. ವೈಯ್ಯಾಕರಣಿಗಳು ವಿದ್ವಾಂಸರು ಮೊದಲಾದವರು ಎಷ್ಟೇ ಪ್ರಯತ್ನ ಮಾಡಿ ವೇದದ ಅರ್ಥವನ್ನು ತಿಳಿಯಲು ಪ್ರಯತ್ನಿ ಸಿದರೂ ಕೊನೆಯ ವರೆಗೆ ಅದು ಅರ್ಥವಾಗದೆ ಉಳಿಯಬಹುದು. ಆದರೆ ಈ ರಹಸ್ಯ ಜ್ಞಾನವನ್ನು ಶೋಧಿಸುವುದೇ ವೇದದ ನಿಜವಾದ ಅರ್ಥವನ್ನೂ ನಿಜವಾದ ಬೆಲೆ ಯನ್ನೂ ತಿಳಿಯಲು ಏಕಮಾತ್ರವಾದ ಉಪಾಯ.

## ವೇದವು ರಹಸ್ಯಾರ್ಥವನ್ನು ಒಳಗೊಂಡಿದೆ ಎಂಬ ವಿಚಾರಪ್ರಣಾಲಿ

ವೇದದ ಋಕ್ಕುಗಳಿಗೆ ಪರಂಪರೆಯಾಗಿ ಬಂದ ಗುಹ್ಯಾರ್ಥವು ಪ್ರಾಚೀನ ವೇದ ದಷ್ಟೇ ಪ್ರಾಚೀನವಾಗಿದೆಯೆಂಬುದು ನಿಜ. ಪವಿತ್ರ ವೇದಮಂತ್ರಗಳು ಅಂತಃಸ್ಫೂರ್ತಿ ಯಿಂದ ಹೊರಹೊಮ್ಮಿದವುಗಳಾಗಿ ಗುಹ್ಯಜ್ಞಾನಭಾಂಡಾರವಾಗಿವೆಯೆಂದು ಋಷಿಗಳ ಭಾವನೆ. ಇಂಥ ವೇದದ ನಿಜವಾದ ಅರ್ಥವು ದ್ರಷ್ಟಾರರಿಗೆ ಮಾತ್ರ ಆಗಬಲ್ಲುದು; ಉಳಿದವರಿಗೆ ವೇದಗಳು ನಿಜಾರ್ಥವನ್ನು ತಿಳಿಸಲಾರವು. ನಾಲ್ಕನೇ ಮಂಡಲದಲ್ಲಿ (೪-೩-೧೬) ವಾಮದೇವ ಮಂತ್ರವೊಂದರಲ್ಲಿ ಋಷಿಯು ಅಂತಃಸ್ಫೂರ್ತಿಯಿಂದ ತಾನೀ ಪವಿತ್ರ ವಚನಗಳನ್ನು, 'ನಿಣ್ಯಾ ವಚಾಂಸಿ' ಹೇಳುವುದಾಗಿ ಸಾರಿ ಇವುಗಳ ನಿಜಾರ್ಥವು ದ್ರಷ್ಟಾರರಿಗೆ ಮಾತ್ರ ಆಗಬಲ್ಲುದೆಂದು ಹೇಳಿರುವನು. ('ಕಾವ್ಯಾನಿ ಕವಯೇನಿವಚನಾ') ವೇದ ಋಕ್ಕುಗಳು ಮಂತ್ರಗಳು ವಿಶ್ವೇದೇವತೆಗಳು ಇರುವ ಅಕ್ಷರವಾದ ಮತ್ತು ಸ್ಥಿರವಾದ ಪರಮವ್ಯೋಮದಲ್ಲಿ ಇರುವವೆಂದು ದೀರ್ಘತಮಸ್ ಋಷಿಯು ಹೇಳಿರುವನಲ್ಲದೆ ಇದನ್ನು ತಿಳಿಯದಿದ್ದವನಿಗೆ ಆ ಋಕ್ಕುಗಳಿಂದ ಪ್ರಯೋಜನವೇನು ಎಂದು ಕೇಳುವನು. (೧-೧೬೪-೩೯) ವಾಕ್ಕು ನಾಲ್ಕು ವಿಧ- ವಾಗಿದ್ದು ಮೊದಲಿನ ಮೂರು ಗುಹ್ಯವಾಗಿವೆ, ನಾಲ್ಕನೆಯದು ಮನುಷ್ಯರು ಆಡ- ತಕ್ಕಂತಹದು. ಇದರಿಂದಲೆ ಸಾಮಾನ್ಯ ಶಬ್ದಗಳ ಉತ್ಪತ್ತಿಯಾಗುತಿದೆಯೆಂದು ಆ ಋಷಿಯ ಅಭಿಪ್ರಾಯ. ವೇದದ ಶಬ್ದಗಳು ಮತ್ತು ವಿಚಾರ ಇದಕ್ಕಿಂತ ಹೆಚ್ಚಿನ ಪರಿಮಿತಿಯುಳ್ಳದ್ದು ಎಂದೂ ಅದೇ ಋಷಿಯು ಹೇಳಿರುವನು. ಅತ್ಯಂತ ನಿರ್ದುಷ್ಟ ವಾದ ಶ್ರೇಷ್ಠ ವಚನಗಳವು. ಗುಪ್ತವಾಗಿದ್ದ ಆ ವಚನಗಳು ಹೊರಗೆ ಬಂದು ಗೋಚರ ವಾಗುತ್ತವೆ. ಸತ್ಯದ್ರಷ್ಟಾರರಾದ ಋಷಿಗಳಲ್ಲಿ ಸ್ಫೂರ್ತಿಗೊಂಡು ವಾಕ್ ರೂಪದಲ್ಲಿ ಹೊರಹೊಮ್ಮಿವೆ. ಆದರೆ ಎಲ್ಲರಿಗೂ ಅವುಗಳ ಗುಹ್ಯಾರ್ಥವು ತಿಳಿಯದು. ವೇದದ ಗುಹ್ಯಾರ್ಥವನ್ನು ತಿಳಿಯದವರು ನೋಡಿ ನೋಡದ, ಕೇಳಿ ಕೇಳದ ಮನುಷ್ಯರಂತಿ ರುವರು. ಒಳ್ಳೇ ವೇಷಭೂಷಣಗಳಿಂದ ಅಲಂಕೃತಳಾದ ಹೆಂಡತಿಯು ತನ್ನ ಗಂಡ

ನಿಗೆ ದೇಹವನ್ನೆಲ್ಲ ತೋರಿಸುವಂತೆ ಕೆಲವರಿಗೆ ಮಾತ್ರ ಈ ವಚನಗಳ ನಿಜಾರ್ಥ ತಿಳಿಯುವದು. ಉಳಿದವರಿಗೆ ಈ ಶಬ್ದಾಮೃತವನ್ನು ಸವಿಯುವುದಾಗದು. ವೇದ ಮಾತೆಯು ಇಂಥವನಿಗೆ ಹಾಲನ್ನು ಕರೆಯದೆ ಹಾಗೆಯೆ ಮುಂದೆ ಸಾಗುವಳು. ಇಂಥವನಿಗೆ ವೇದವಚನವೆಂದರೆ ಹೂ ಹಣ್ಣುಕಾಯಿಗಳಿಲ್ಲದ ವೃಕ್ಷವೇ ಸೈ. ಇದು ಅತ್ಯಂತ ಸ್ಪಷ್ಟವಾಗಿದೆ. ಋಗ್ವೇದದ ರಚನೆಯಕಾಲಕ್ಕೆ ಕೂಡ ಆದರ ಋಕ್ಕುಗಳಿಗೆ ಗುಹ್ಯಾರ್ಥವಿದ್ದಿತು; ಎಲ್ಲರಿಗೂ ಅದು ತಿಳಿಯಬಾರದೆಂದು ಭಾವಿಸಲಾಗಿದ್ದಿತು. ಗುಹ್ಯ ಮತ್ತು ಆಧ್ಯಾತ್ಮಿಕ ಜ್ಞಾನವು ಪವಿತ್ರ ವೇದಮಂತ್ರಗಳಲ್ಲಿ ಹುದುಗಿಕೊಂಡಿದೆ. ಇದನ್ನು ಅರಿತವನೇ ಸತ್ಯಜ್ಞಾನವನ್ನು ಹೊಂದಿ ಉಚ್ಚಪದವಿಯನ್ನು ಸಂಪಾದಿಸ ಬಲ್ಲನು. ಈ ವಿಶ್ವಾಸವು ಇತ್ತೀಚಿನದಲ್ಲ, ಪ್ರಾಚೀನ ಋಷಿ ಮುನಿಗಳು ಕೂಡ ಇದೇ ಭಾವನೆ ತಾಳಿದ್ದರೆಂದು ಹೇಳಬಹುದು. ಅತಿ ಶ್ರೇಷ್ಠರಾದ ದೀರ್ಘತಮಸ್ ಮತ್ತು ವಾಮದೇವ ಋಷಿಗಳಲ್ಲಿಯೂ ಇದೇ ನಂಬಿಗೆಯಿದ್ದಿತು.

ಈ ಪರಂಪರೆಯು ವೇದಕಾಲದ ನಂತರವೂ ಮುಂದುವರಿಯಿತು. ವೇದಾರ್ಥ ವನ್ನು ಹೇಳುವ ಬೇರೆ ಬೇರೆ ಪಂಗಡಗಳಿದ್ದವೆಂದು ಯಾಸ್ಕರು ಹೇಳುವರು. ವೇದವು ಕರ್ಮಕಾಂಡ ಮತ್ತು ಜ್ಞಾನಕಾಂಡ ಎರಡನ್ನೂ ಬೋಧಿಸುವದೆಂದು ಕೆಲವರು ಹೇಳಿದರೆ ಹಲವರು ಆದಕ್ಕೆ ಐತಿಹಾಸಿಕ ಮತ್ತು ಪೌರಾಣಿಕ ಅರ್ಥವನ್ನು ಮಾಡು ವರು. ವೇದದಲ್ಲಿ ತ್ರಿವಿಧಜ್ಞಾನವಿದೆಯೆಂದು ಯಾಸ್ಕರು ಹೇಳುವರು. ವೇದಋಕ್ಕು ಗಳಿಗೆ ತ್ರಿವಿಧ ಅರ್ಥವೆಂದು ಅವರ ಅಭಿಪ್ರಾಯ. ಕರ್ಮ ಅಥವಾ ಯಜ್ಞಕಾಂಡದ ಜ್ಞಾನ, ದೇವತೆಗಳ ಸಂಬಂಧದ ಜ್ಞಾನ ಮತ್ತು ಕೊನೆಯದಾಗಿ ಆಧ್ಯಾತ್ಮಿಕಜ್ಞಾನ. ಇದು ಯಾಸ್ಕರ ಮತ. ಆದರೆ ಕೊನೆಯದೇ ವೇದದ ನಿಜಾರ್ಥವಿದ್ದು ಅದನ್ನು ತಿಳಿದುಕೊಂಡವರಿಗೆ ಉಳಿದ ಅರ್ಥ ತಾನಾಗಿಯೆ ಹಾರಿಹೋಗುವುದು. ಈ ಆಧ್ಯಾತ್ಮಿಕ ಅರ್ಥವೇ ತಾರಕವಾಗಿದ್ದು, ಉಳಿದುದೆಲ್ಲ ಬಾಹ್ಯ ಮತ್ತು ಗೌಣ ಅರ್ಥವು. ಋಷಿಗಳು ಈ ನಿಜವನ್ನು ಕಂಡುಹಿಡಿದರು. ಅಂತರ್ದೃಷ್ಟಿಯಿಂದ ಸತ್ಯ ಸಂಗತಿಗಳನ್ನು ತಿಳಿದರು ಎಂದು ಯಾಸ್ಕರು ಹೇಳುವರು. ಆದರೆ ಅನಂತರ ಜ್ಞಾನವು ಮತ್ತು ವೇದದ ಗುಹ್ಯಾರ್ಥವು ನಶಿಸಿ ಹೋದಂತಾಯಿತು. ಈ ನಿಜಾರ್ಥ ಜ್ಞಾನವಿದ್ದ ಹಲಕೆಲವು ಋಷಿಗಳು ತಮ್ಮ ಶಿಷ್ಯರಿಗೆ ಪರಂಪರೆಯಾಗಿ ಅದನ್ನು ಹೇಳುತ್ತ ಬಂದರು. ಆದರೆ ಈ ಗುಹ್ಯಾರ್ಥವು ಮಾಯವಾದಂತಾಗಿ ಬಾಹ್ಯಾರ್ಥ ವನ್ನೆ ಮಾಡುವ ಕಾಲವೂ ಬಂದಿತು. ಆಗ ನಿರುಕ್ತ ಮತ್ತು ಉಳಿದ ವೇದಾಂಗ ಗಳ ಮೂಲಕ ಅವುಗಳ ಸಹಾಯದಿಂದ ವೇದಮಂತ್ರಗಳಿಗೆ ಅರ್ಥ ಹೇಳುವ ಕ್ರಮವು ಪ್ರಾರಂಭವಾಯಿತು. ನಿರುಕ್ತ ಮೊದಲಾದ ಸಾಧನಗಳಿದ್ದರೂ ವೇದದ ನಿಜವಾದ ಅರ್ಥ ತಿಳಿಯಬೇಕಾದರೆ ಧ್ಯಾನ ಮತ್ತು ತಪಸ್ಸು ಅವಶ್ಯವೆಂದು ಯಾಸ್ಕರು ಸ್ಪಷ್ಟಪಡಿಸುತ್ತಾರೆ. ಧ್ಯಾನ ಮತ್ತು ತಪಸ್ಸಿನ ಸಾಧನೆಯಿಂದ ವೇದಾರ್ಥವನ್ನು ತಿಳಿಯಲಿಚ್ಛಿಸುವವರಿಗೆ ನಿರುಕ್ತ ಮತ್ತು ಉಳಿದ ವೇದಾಂಗಗಳ ಸಹಾಯವು

ಅನವಶ್ಯವೆಂದು ಯಾಸ್ಕರ ಮತ. ಇದು ಅತ್ಯಂತ ಸ್ಪಷ್ಟ ಮತ್ತು ಖಂಡಿತವಾಗಿದೆ.

## ವೇದವೇ ಭಾರತೀಯ ನಾಗರಿಕತೆಯ ಬುನಾದಿ

ಭಾರತೀಯ ನಾಗರಿಕತೆ, ಧರ್ಮ, ವೇದಾಂತ ಸಂಸ್ಕೃತಿಗಳಿಗೆ ವೇದದಲ್ಲಿಯ ಆಧ್ಯಾತ್ಮಿಕತೆಯೇ ಉಗಮಸ್ಥಾನವಾಗಿದೆಯೆಂಬುದು ಐತಿಹಾಸಿಕ ಸಂಗತಿಯಾಗಿದೆ. ಯುರೋಪಿಯನ್‌ರು ಈ ಮಾತನ್ನು ಕಂಡುಹಿಡಿದರೆಂದರೇನಲ್ಲ; ಮಾನವ ಜನಾಂಗವು ತೀರ ಕಾಡು ಸ್ಥಿತಿಯಿಂದ, ಮೂಢ ಶ್ರದ್ಧೆಯ ಸಾಮಾಜಿಕ ಜೀವನದಿಂದ ಮತ್ತು ಧರ್ಮದಿಂದ ಅಭಿವೃದ್ಧಿ ಹೊಂದುತಿದೆಯೆಂದು ೧೯ ನೇ ಶತಮಾನದ ಯುರೋಪಿಯನ್ ವಿದ್ವಾಂಸರು, ಆಧಿಭೌತಿಕ ವಿಚಾರಸರಣಿಯ ಯುಗದಲ್ಲಿ ಬರೆದದ್ದುಂಟು. ಅವರ ಬುದ್ಧಿ ಮತ್ತು ವಿಚಾರ ಶಕ್ತಿ, ಕಲೆ ಮತ್ತು ತತ್ತ್ವಜ್ಞಾನ ಮತ್ತು ಶಾಸ್ತ್ರೀಯ ವಿಷಯಗಳ ಜ್ಞಾನ ಅವರಲ್ಲಿ ಹೆಚ್ಚುತ್ತ ಹೋದಂತೆ ಬಾಹ್ಯ ನಾಗರಿಕತೆ, ಸಂಘ ಸಂಸ್ಥೆಗಳು, ರೀತಿನೀತಿಗಳು, ಆಚಾರವಿಚಾರಗಳು ಬೆಳೆದು ಬಂದವೆಂದು ಅವರ ಅಭಿಪ್ರಾಯ. ವೇದದ ಬಗ್ಗೆ ಇದ್ದ ಪ್ರಾಚೀನ ವಿಚಾರವು ಇದಕ್ಕೆ ಸರಿಹೋಗಲಿಲ್ಲ. ಅದೂ ಒಂದು ಬಗೆಯ ಹಳೆಯ ಮೂಢ ನಂಬಿಕೆಯ ಕಾಡು ಜನರ ದೋಷದ ಅಂಗವೆಂದು ತಿಳಿಯಲಾಯಿತು. ಆದರೀಗ ಜನಾಂಗದ ಅಭಿವೃದ್ಧಿಯ ಸುಸ್ಪಷ್ಟ ಕಲ್ಪನೆ ನಮಗೆ ಬರಬಹುದಾಗಿದೆ. ಹಿಂದೆ ಹೆಚ್ಚು ಕಾಡುಸ್ಥಿತಿಯಲ್ಲಿದ್ದ ನಾಗರಿಕತೆಯಲ್ಲಿ ಭಾವೀ ಅಭಿವೃದ್ಧಿಯ ಬೀಜಗಳಿದ್ದವು. ಆದರೆ ಅವರಿಗಿಂತ ಹಿಂದೆ ಇದ್ದ ವಿದ್ವಾಂಸರು, ಶಾಸ್ತ್ರಜ್ಞರು ಇಲ್ಲವೆ ತತ್ತ್ವಜ್ಞಾನಿಗಳು ಅಥವಾ ಹೆಚ್ಚು ಬೌದ್ಧಿಕ ವಿಚಾರಗಳುಳ್ಳವರು ಆಗಿರಲಿಲ್ಲ. ಅವರು ಆಧ್ಯಾತ್ಮಿಕವಾದಿಗಳಾಗಿದ್ದರು. ಧರ್ಮದ ಸತ್ಯವನ್ನು ಕಂಡು ಹಿಡಿಯುವವರು ಅವರಾಗಿದ್ದರು. ಬಾಹ್ಯ ಜ್ಞಾನಕ್ಕೆ ಮಹತ್ವಕೊಡದೆ, ನಿಗೂಢವಾದ ಪರಮ ಸತ್ಯದ ಸಂಶೋಧಕರು ಅವರಾಗಿದ್ದರು. ಶಾಸ್ತ್ರಜ್ಞರು ಮತ್ತು ತತ್ತ್ವಜ್ಞಾನಿಗಳು ಅನಂತರ ಬಂದರು. ಅವರ ತರುವಾಯದಲ್ಲಿ ಅನುಭಾವಿಗಳು ಉದಯ ಹೊಂದಿದರು. ಹಲವು ಸಲ ಪೆಥೆಗೊರಸ್ ಮತ್ತು ಪ್ಲೇಟೊರಂಥವರು ಕೆಲಮಟ್ಟಿಗೆ ಅನುಭಾವಿಗಳಾಗಿದ್ದರು. ಮತ್ತು ಅವರಿಂದಲೇ ಅನೇಕ ವಿಚಾರಗಳನ್ನು ಎರವಲು ತೆಗೆದುಕೊಂಡರು. ಭಾರತದಲ್ಲಿ ತತ್ತ್ವಜ್ಞಾನವು ಈ ಅನುಭಾವಿಗಳ ಅನ್ವೇಷಣದ ಮೂಲಕ ಅಭಿವೃದ್ಧಿ ಹೊಂದಿತು. ಅವರು ಮುಂದೆ ಪ್ರಸಾರ ಹೊಂದಿದ ಭಾರತೀಯ ಆಧ್ಯಾತ್ಮಿಕ ಶಿಸ್ತು ಮತ್ತು ಯೋಗಪದ್ಧತಿಯಲ್ಲಿ ತಮ್ಮ ಆಧ್ಯಾತ್ಮಿಕ ಉನ್ನತಿಯನ್ನು ಪಡೆದರು. ವೇದದಲ್ಲಿಯ ಈ ಆಧ್ಯಾತ್ಮಿಕತೆಯು ಐತಿಹಾಸಿಕ ಸತ್ಯಕ್ಕೆ ಸಂಪೂರ್ಣವಾಗಿ ಸುಸಂಗತವಾಗಿದೆ. ಭಾರತೀಯ ಸಾಂಸ್ಕೃತಿಕ ಇತಿಹಾಸದಲ್ಲಿಯೂ ಅದು ತನ್ನ ಸ್ಥಾನವನ್ನು ಪಡೆದಿದೆ. ಭಾರತೀಯ ನಾಗರಿಕತೆಯ ಬುನಾದಿಯು ವೇದವೇ ಎಂಬ ಪರಂಪರೆ ಇತಿಹಾಸಕ್ಕೆ ಸುಸಂಗತವಾಗಿದೆ. ಅದು ಕೇವಲ ಕಾಡು ಜನಾಂಗದ ಯಜ್ಞ ಯಾಗಾದಿಗಳನ್ನು ಮಾಡುವ ವಿಧಾನ ಎಂಬುದಕ್ಕೆ ತಳಬುಡವೇನೂ ಇಲ್ಲ.

# ವೇದವು ಅನುಭಾವಿಗಳ ಪವಿತ್ರ ಗ್ರಂಥ

'ವೇದಮಂತ್ರಗಳಲ್ಲಿ ಕೆಲವು ಮಾತ್ರ ಆಧ್ಯಾತ್ಮಿಕ ವಿಚಾರಗಳುಳ್ಳವು, ತತ್ತ್ವ ಜ್ಞಾನಕ್ಕೆ ಸಂಬಂಧಿಸಿದವು. ಉಳಿದುವುಗಳು ಕೇವಲ ಮಾನವನ ಭೌತಿಕ ಬೇಡಿಕೆಗಳನ್ನು ಪೂರಯಿಸುತಿವೆಯೆಂದು ಭಾವಿಸಬಹುದು. ಯಜ್ಞಯಾಗಾದಿಗಳ ವಿಧಾನ, ಯಜ್ಞಯಾಗಾದಿಗಳಿಂದ ಸಂತುಷ್ಟರಾಗಿ ಭೌತಿಕ ಸುಖ ಸಮೃದ್ಧಿಗಳನ್ನು ದಯ-ಪಾಲಿಸಿರೆಂದು ದೇವತೆಗಳನ್ನು ಪ್ರಾರ್ಥಿಸುವದು, ಗೋಸಂಪತ್ತು, ಗೃಹ, ಯೋಧರು, ಆಹಾರ, ಸರ್ವವಿಧ ಸಂಪತ್ತು, ರಕ್ಷಣೆ, ಯುದ್ಧದಲ್ಲಿ ವಿಜಯ, ಮಳೆ ಕರೆಸುವದು, ಕತ್ತಲೆಯ ನಂತರ ಸೂರ್ಯಪ್ರಕಾಶವನ್ನು ಕೊಡುವದು, ಸಪ್ತ ನದಿಗಳು ಅನಿರ್ಬಂಧವಾಗಿ ಹರಿಯುವಂತೆ ಮಾಡುವದು, ದಸ್ಯುಗಳು ದೋಚಿಕೊಂಡು ಹೋದ ದನಗಳನ್ನು ಮರಳಿ ಕೊಡಿಸುವದು ಇವೇ ಮೊದಲಾದ ಭೌತಿಕ ಬೇಡಿಕೆಗಳೇ ಈ ವೇದಮಂತ್ರಗಳಲ್ಲಿ ಹೆಚ್ಚಿಗೆ ಇದ್ದು, ಯಜ್ಞಯಾಗಾದಿಗಳ ಉದ್ದೇಶವೂ ಈ ಭೌತಿಕ ಸುಖವೇ ಆಗಿರುವದೆ'ಂದು ಭಾವಿಸುವರು. ಹಾಗಾದರೆ ಋಷಿಗಳಲ್ಲಿ ಕೆಲವುಟ್ಟಿಗೆ ಮಾತ್ರ ಆಧ್ಯಾತ್ಮಿಕ ಮತ್ತು ರಹಸ್ಯ ಜ್ಞಾನವಿದ್ದು ಬಹ್ವಂಶದಲ್ಲಿ ಅವರಲ್ಲಿಯೂ ಅವರ ಕಾಲಕ್ಕುಚಿತವಾದ ಭೌತಿಕ ವಿಚಾರಗಳಿದ್ದವೆಂದು ಹೇಳಬೇಕಾಗುವದು. ಅವರು ತಮ್ಮ ಈ ಇಬ್ಬಗೆಯ ವಿಚಾರಗಳನ್ನು ಮಂತ್ರಗಳಲ್ಲಿ ಕಲಸು ಮೇಲೋಗರವಾಗಿ ಮಿಶ್ರ ಮಾಡಿರಬಹುದು. ಇದರಿಂದ ಏನೂ ತಿಳಿಯದ ಪರಿಸ್ಥಿತಿಯುಂಟಾಗಬಹುದು. ಆದರೆ ತದ್ವಿರುದ್ಧವಾಗಿ ವೇದಮಂತ್ರಗಳಲ್ಲಿ ಬಹು ಭಾಗ ಈ ಆಧ್ಯಾತ್ಮಿಕ ಜ್ಞಾನ, ಉಚ್ಚ ವಿಚಾರಗಳು ಇದ್ದುದಾದರೆ ಮತ್ತು ಅವುಗಳ ಬಾಹ್ಯ ಯಜ್ಞಯಾಗಾದಿಗಳ ಅರ್ಥವು ಕೇವಲ ಲಾಕ್ಷಣಿಕವಾಗಿದ್ದರೆ ಎಲ್ಲವೂ ಬದಲಾವಣೆ ಹೊಂದುತ್ತದೆ. ವೇದಮಂತ್ರಗಳಿಗೆ ಈ ಬಗೆಯ ಲಾಕ್ಷಣಿಕ ಅರ್ಥವಿದ್ದು, ಅನುಭಾವಿಗಳು ಅನೇಕ ಸಲ ಅವುಗಳ ಉಪಯೋಗವನ್ನು ಅಂತು ಮಾಡಿಕೊಂಡದ್ದು ಕಂಡುಬರುತ್ತದೆ. ಈ ರೀತಿಯಾಗಿ ಅನುಭಾವಿಗಳ ಗುಹ್ಯಾರ್ಥ ಮತ್ತು ಬಾಹ್ಯಾರ್ಥ ಹೀಗೆ ದ್ವಿವಿಧ ಮಹತ್ವವುಳ್ಳ ಶ್ರೇಷ್ಠ ಸಂಹಿತೆ ವೇದವೆಂದು ಹೇಳಬೇಕಾಗುವದು. ಅವುಗಳಲ್ಲಿ ಕೆಲವು ಕೇವಲ ಬಾಹ್ಯಾರ್ಥದ್ಯೋತಕವಾಗಿದ್ದರೆ, ಕೆಲವು ಅತ್ಯಂತ ನಿಗೂಢವಾದ ತತ್ತ್ವಗಳನ್ನು ಮತ್ತು ಜ್ಞಾನವನ್ನು ಬೋಧಿಸುತಿವೆ. ಋಗ್ವೇದದಲ್ಲಿ ಕೆಲ ಮಂತ್ರಗಳನ್ನು ಬಿಟ್ಟರೆ ಉಳಿದದ್ದೆಲ್ಲ ಈ ಬಗೆಯ ಗುಹ್ಯಾರ್ಥವನ್ನು ಪ್ರತಿಪಾದಿಸುತಿದೆ. ವೇದಮಂತ್ರಗಳು ಕೇವಲ ಅಂತರ್ಜ್ಞಾನಬೋಧಕವಾಗಿರದೆ ಬಾಹ್ಯ ವಸ್ತುಗಳನ್ನು ಪ್ರತಿಪಾದಿಸುವ ಶಕ್ತಿಸಂಪನ್ನ ವಚನಗಳಾಗಿವೆ. ಕೇವಲ ಆಧ್ಯಾತ್ಮಿಕ ಮಂತ್ರಕ್ಕೆ ಕೇವಲ ಆಧ್ಯಾತ್ಮಿಕ ಮಹತ್ವವೇ ಇದೆ. ಆದರೆ ಪ್ರಾಚೀನ ಅನು-ಭಾವಿಗಳು ಅಂತಃಸಾಧನೆಯಿಂದ ಕೇವಲ ಅಂತಃಪರಿಣಾಮುವಲ್ಲದೆ ಬಾಹ್ಯ ಪರಿಣಾಮವೂ ಆಗಬಲ್ಲುದೆಂದು ಭಾವಿಸುವ ರಹಸ್ಯವಾದಿಗಳಾಗಿರುವರು. ವೇದ

ಮಂತ್ರೋಚ್ಚಾರದಿಂದ ಮಾನವೀ ಮತ್ತು ದೈವೀ ಸಂಪತ್ತನ್ನು ಪಡೆಯಬಹುದೆಂದು ಅವರು ಬಗೆಯುತಿದ್ದರು.

## ವೇದದ ಶಬ್ದಗಳಲ್ಲಿ, ಸಂಕೇತಗಳಲ್ಲಿ, ದಂತಕಥೆಗಳಲ್ಲಿ ಮೂರ್ತಿಗಳಲ್ಲಿ ಅಡಗಿದ ಗೂಢಾರ್ಥ

ಆದರೆ ವೇದದಲ್ಲಿ ಈ ಬಗೆಯ ನಿಗೂಢಾರ್ಥವೆಲ್ಲಿದೆ? ಋಷಿಗಳು ಉಪಯೋಗಿಸಿದ ಶಬ್ದಗಳಿಗೆ ವ್ಯತ್ಯಯವಿಲ್ಲದ ಮತ್ತು ನೇರವಾದ ಅರ್ಥವನ್ನು ಮಾಡಿದರೆ, ವಿಶೇಷತಃ ಅವರು ಉಪಯೋಗಿಸಿದ ಅತಿ ಮಹತ್ವದ ಶಬ್ದಗಳಿಗೆ ಮತ್ತು ಸೂತ್ರಗಳಿಗೆ ಆ ರೀತಿ ಅರ್ಥ ಮಾಡಿದರೆ, ಅವರ ಇಡಿ ತತ್ತ್ವಜ್ಞಾನದ ಅರ್ಥವಾಗಬಹುದು, ಇಂಥ ಮಹತ್ವದ ಶಬ್ದಗಳಲ್ಲಿ 'ಋತಂ' 'ಸತ್ಯಂ' ಎಂಬುದೊಂದಾಗಿದೆ. ಈ ಸತ್ಯಾನ್ವೇಷಣವೇ ಅನುಭಾವಿಗಳ ಮುಖ್ಯ ಧ್ಯೇಯವು; ಆಧ್ಯಾತ್ಮಿಕಸತ್ಯ, ಅಂತಃಸತ್ಯ, ಜಗತ್ತು ದೇವತೆಗಳು ಮತ್ತು ಮಾನವರು ಇದೆಲ್ಲದರ ಸತ್ಯ ಮತ್ತು ತಮ್ಮ ಮುಂದಿರುವ ಎಲ್ಲ ವಸ್ತುಗಳು ಮತ್ತು ತಾವು ಇದೆಲ್ಲದರ ಸತ್ಯವನ್ನು ಕಂಡು ಹಿಡಿಯುವದೇ ಅವರ ಧ್ಯೇಯವಾಗಿತ್ತು. ಯಜ್ಞಯಾಗಾದಿಗಳ ಸಂಬಂಧದಲ್ಲಿ ಈ ಶಬ್ದಕ್ಕೆ ಆರ್ಯ ಜನರ ಒಲವು ನಿಲವುಗಳಿಗನುಗುಣವಾಗಿ ಮನಸ್ಸಿಗೆ ತೋಚಿದ ಅರ್ಥವನ್ನು ಮಾಡಿದ್ದಾಗಿದೆ. ಸತ್ಯ, ಯಜ್ಞ, ಜಲ, ಹೊರಟು ಹೋದವನು ಎಂದು ಈ ಶಬ್ದಕ್ಕೆ ಅರ್ಥ ಮಾಡಲಾಗಿದೆಯಲ್ಲದೆ ಆಹಾರವೆಂದೂ ಅರ್ಥ ಮಾಡಲಾಗಿದೆ. ಅಲ್ಲದೆ ಇನ್ನೂ ಅನೇಕ ರೀತಿಯಾಗಿ 'ಋತಂ' ಶಬ್ದಕ್ಕೆ ಅರ್ಥ ಮಾಡಲಾಗಿದೆ. ಹಾಗೆ ಅರ್ಥಮಾಡುತ್ತ ನಡೆದರೆ, ವೇದದ ಬಗ್ಗೆ ನಮ್ಮಲ್ಲಿ ನಿಶ್ಚಿತಾತ್ಮಕ ಭಾವನೆ ಬರಲಾರದು. ಆ ಬಗೆಯ ಅರ್ಥ ಅದಕ್ಕೆ ಮಾಡಿದರೆ ವಿಚಿತ್ರವಾದರೂ ಸ್ಪಷ್ಟ ಪರಿಣಾಮವು ಹೊರಹೊಮ್ಮುವುದು. ವೇದದ ಎಲ್ಲ ಶಬ್ದಗಳಿಗೆ ನಾವು ಇದೇ ಬಗೆಯಾಗಿ ಅರ್ಥ ಮಾಡುತ್ತ ಹೋದರೆ ಅಗ್ನಿಯು 'ಕ್ರತುರ್‌ಹೃದಿ' ಎಂದು ವೇದವು ವರ್ಣಿಸುವಾಗ ಅದೇ ಉಚಿತವಾದ ಅರ್ಥವನ್ನು ಮಾಡಿದರೆ ಈ ಪರಿಣಾಮವು ಹೆಚ್ಚು ಸ್ಪಷ್ಟ ಮತ್ತು ವ್ಯಾಪಕವಾಗಿ ಕಾಣಬಹುದು. ಋಷಿಗಳು ಕೆಲ ಸಂದರ್ಭಗಳಲ್ಲಿ ತಮ್ಮ ಶಬ್ದಗಳಿಗೆ ಇರುವ ಗುಹ್ಯಾರ್ಥವನ್ನು ಲಾಕ್ಷಣಿಕವಾಗಿ ತಿಳಿಸಿದ್ದುಂಟು. ವೃತ್ರಾಸುರನೊಡನೆ ಯುದ್ಧ, ಪಂಚಭೂತಗಳ ಸಂಶೋಧನೆ ಮೊದಲಾದವುಗಳ ಬಗ್ಗೆಯೂ ವೇದದಲ್ಲಿ ಉಲ್ಲೇಖವಿದೆ; ಅವುಗಳಿಗೆಲ್ಲ ಗುಹ್ಯ ಮತ್ತು ಆಧ್ಯಾತ್ಮಿಕ ಅರ್ಥವಿದೆ. ಪ್ರಾಚೀನಕಾಲದಲ್ಲಿ ಯಾವದೇ ದೇಶದ ಅನುಭಾವಿಗಳು ಈ ಬಗೆಯ ಗುಹ್ಯ ವಿದ್ಯೆಯನ್ನು ಬೋಧಿಸಿದ್ದುಂಟು. ನಮ್ಮ ಭಾರತದಲ್ಲಿ ಮಾತ್ರ ವೇದದಲ್ಲಿಯೇ ಇದೆಲ್ಲ ನಿಗೂಢ ತತ್ತ್ವಜ್ಞಾನವು ಹುದುಗಿದೆ. ಬೇಕೆಂತಲೆ ಅದನ್ನು ಪಡದೆಯ ಹಿಂದೆ ಬಚ್ಚಿಡಲಾಗಿದೆ. ಆದರೆ ನಾವು ತಿಳಿಯದಷ್ಟು ಆ ಪಡದೆಯು ದಪ್ಪವಾಗಿರುವುದಿಲ್ಲ. ನಾವು ಕಣ್ಣುತೆರೆದು ನೋಡಿದರೆ ಆ

ಪಡದೆಯು ಮಾಯವಾಗುವುದು. ನಮಗೆ ಸತ್ಯಜ್ಞಾನವಾಗುವುದು.

ಅನೇಕ ವೇದಮಂತ್ರಗಳಿಗೆ ಆಪಾತತಃ ಅರ್ಥವನ್ನು ಹೇಳಬಹುದಾಗಿದೆ; ಆದರೆ ಅವುಗಳ ನಿಗೂಢ ಅರ್ಥವು ಬೇರೆಯೇ ಇರುವದು 'ಅಗ್ನಿಯು ಜ್ಯೋತಿರ್ಮಯ ಸತ್ಯರಕ್ಷಕನಾಗಿದ್ದು, ತನ್ನ ಮನೆಯಲ್ಲಿಯೆ ಪ್ರಕಾಶಿಸುತ್ತಾನೆ'ಂದು ದ್ರಷ್ಟಾರನು ಹೇಳಿದಾಗ ಅಥವಾ 'ಮಿತ್ರಾವರುಣರು ಹಾಗು ಇನ್ನುಳಿದ ದೇವತೆಗಳಾಗಿದ್ದು ಸತ್ಯದ ಅಭಿವೃದ್ಧಿಯನ್ನು ಮಾಡುವರು ಅಥವಾ ಸತ್ಯದಲ್ಲಿಯೇ ಸೃಷ್ಟರು' ಎಂದು ಹೇಳಿದಾಗ ಈ ವಚನಗಳು ರಹಸ್ಯವಾದಿ ಕವಿಯವೆಂದು ಭಾವಿಸಬೇಕು. ಈ ರಹಸ್ಯವಾದಿಗಳಾದರೊ ಹುದುಗಿಕೊಂಡಿರುವ ಸತ್ಯವನ್ನು ಕಂಡುಹಿಡಿದರು. ಪ್ರಾಚೀನ ಕಾಲದ ಋಷಿ ಮುನಿಗಳು ಈ ಸತ್ಯದ್ರಷ್ಟಾರರೆಂದು ತಿಳಿಯಬೇಕು. ಯಜ್ಞಯಾಗಾದಿಗಳಲ್ಲಿಯ ಅಗ್ನಿಯ ಬಗ್ಗೆಯಾಗಲಿ ಪಂಚಭೂತಗಳಲ್ಲಿ ಒಂದಾಗಿರುವ ಅಗ್ನಿಯ ಬಗ್ಗೆಯಾಗಲಿ ಆ ದ್ರಷ್ಟಾರನು ವಿಚಾರಮಾಡುವುದಿಲ್ಲ. 'ಸತ್ಯಪ್ರೇರಕಳು ಸರಸ್ವತಿಯು; ಅವಳು ನಮ್ಮಲ್ಲಿ ಸದ್ವಿಚಾರಗಳನ್ನು ಪ್ರೇರಿಸುವಳು, ಅಪಾರ ಸಾಗರದ ಬಗ್ಗೆ ನಮ್ಮಲ್ಲಿ ಜಾಗ್ರತಿಯನ್ನುಂಟು ಮಾಡಿ ನಮ್ಮ ಬುದ್ಧಿಶಕ್ತಿಯನ್ನು ಪ್ರಚೋದಿಸುತ್ತಾಳೆ.' ದ್ರಷ್ಟಾರನು ಹೀಗೆಲ್ಲ ವರ್ಣಿಸುವಾಗ ಸರಸ್ವತಿ ನದಿಯಬಗ್ಗೆ ವಿಚಾರ ಮಾಡುವುದಿಲ್ಲ; ಆದರೆ ಆ ಪ್ರಚಂಡ ಶಕ್ತಿ, ಸ್ಫೂರ್ತಿಯ ಸೆಲೆ ಸತ್ಯವೆಂದು ಅವನು ತಿಳಿಯುತ್ತಾನೆ. ಈ ಸತ್ಯವೇ ನಮ್ಮ ಬುದ್ಧಿಶಕ್ತಿಗೆ ಚಾಲನೆ ಕೊಟ್ಟು ನಮ್ಮಲ್ಲಿ ಸತ್ಯಜ್ಞಾನವನ್ನು ಮಾಡಿಕೊಡುವುದು. ದೇವತೆಗಳು ಸದಾ ತಮ್ಮ ಮನೋವೈಜ್ಞಾನಿಕ ಕಾರ್ಯಗಳನ್ನು ಮಾಡುತಿರುವರು. ಯಜ್ಞವು ಅಂತಃಕಾರ್ಯದ ಬಾಹ್ಯ ಲಕ್ಷಣ ಮಾತ್ರ. ಮಾನವ ಮತ್ತು ದೇವತೆಗಳಲ್ಲಿಯ ಅಂತರ್ವಿನಿಮಯ. ಮನುಷ್ಯನು ತನ್ನಲ್ಲಿದ್ದುದನ್ನು ಕೊಟ್ಟು ಬದಲಿಗೆ ದೇವತೆಗಳಿಂದ ಅಶ್ವಶಕ್ತಿಯನ್ನು, ಜ್ಯೋತಿಯನ್ನು, ಬಲಿಷ್ಠ ವೀರರನ್ನು ತನ್ನ ಸಹಾಯಕ್ಕೆ ತೆಗೆದುಕೊಳ್ಳುವನು. ತಮಸ್ಸು, ವೃತ್ರಾಸುರ, ದಸ್ಯುಗಳು, ಪಣಿಗಳು ಇವರನ್ನು ಗೆಲ್ಲುವುದಾಗಿ ದೇವತೆಗಳು ಮಾನವನಿಗೆ ಇವೆಲ್ಲವನ್ನು ಪ್ರತಿಯಾಗಿ ದಯಪಾಲಿಸುವರು. 'ಮಾನವಾತೀತವಾದ ಯುದ್ಧಾಶ್ವ ಅಥವಾ ಶಕ್ತಿಯ ವಚನದ ಬಗ್ಗೆ ನಾವು ಜಾಗ್ರತರಾಗುವಾ' ಎಂದು ಋಷಿಯು ನುಡಿದಾಗ ಅವನ ನುಡಿಗಳಿಗೆ ಗುಹ್ಯಾರ್ಥವಿದೆಯೆನ್ನಬೇಕು ಇಲ್ಲವೆ ಬೇರೆ ಸಮಂಜಸ ಅರ್ಥವೇ ಇಲ್ಲವೆಂದು ಹೇಳಬೇಕಾಗುವದು. ನಾವು ಅನುವಾದಿಸಿದ ಈ ಪುಸ್ತಕದಲ್ಲಿಯ ಅನೇಕ ಮಂತ್ರಗಳಿಗೆ ನಿಗೂಢ ಅರ್ಥವಿದೆ. ಅದೆಷ್ಟೆ ನಿಗೂಢವಾಗಿದ್ದರೂ ಅದನ್ನು ಮರೆಮಾಡಿದ ಪಡದೆಯನ್ನು ತೆಗೆದು ವೇದದ ನಿಜಾರ್ಥವು ತಿಳಿಯುವಂತೆ ಮಾಡಲಾಗಿದೆ. 'ಧೀ (ಬುದ್ಧಿಯು) ಯು ಬೃಹತ್ಸ್ವರ್ಗಗಳಲ್ಲಿ ಅಮೃತರಲ್ಲಿಯ ಮಾನವೀ ವಸ್ತುಗಳನ್ನು ಕೊಟ್ಟಿದೆ. ಧೇನುವು ತಾನಾಗಿಯೇ ಬಗೆಬಗೆಯ ಸಂಪತ್ತನ್ನು ನಮಗೆ ಕೊಡುತ್ತದೆ; ಗೋ ಅಶ್ವ ಮೊದಲಾದ್ದನ್ನು ಯಜಮಾನನು ಯಜ್ಞದಲ್ಲಿ ಬೇಡಿದ್ದನ್ನೆಲ್ಲ ಕೊಡುತ್ತದೆ.' ಎಂದು ಋಷಿಯು ಘೋಷಿಸುತ್ತಾನೆ. ಈ ಸಂದರ್ಭದಲ್ಲಿ ಅವನು ಭೌತಿಕ ಸಂಪತ್ತನ್ನು

ಬೇಡುವದಿಲ್ಲ ಎಂಬುದು ನಿಶ್ಚಿತ. ಮಂತ್ರದಲ್ಲಿ ಹೇಳಿದ ಧೀ ದಯಪಾಲಿಸುವದು ಬೇರೆಯೇ ಇದೆ. ಬೃಹದ್ದಿವಗಳಲ್ಲಿ ಅಮೃತರಲ್ಲಿಯು ಮಾನವ ವಸ್ತುಗಳನ್ನು ದಯ-ಪಾಲಿಸುವದು ಆ ಧೀ. ಯಜ್ಞದಿಂದ ದೇವತೆಗಳನ್ನು ವಶಪಡಿಸಿಕೊಂಡು ಸ್ವರ್ಗದಿಂದ ಸಂಪತ್ತನ್ನು ತರುವುದು. ಮತ್ತು ಸ್ವರ್ಗೀಕರಣದ ಈ ವಿಧಾನವು ಈ ಮಂತ್ರಗಳಲ್ಲಿ ಗುಹ್ಯಾರ್ಥದಲ್ಲಿ ಹೇಳಲಾಗಿದ್ದರೂ ಈ ನಿಗೂಢವಚನಗಳ " ನಿಣ್ಯೇ ವಚಾಂಸಿ " ಅರ್ಥವನ್ನು ಹೇಗೆ ಮಾಡಬೇಕೆಂಬುದನ್ನು ತಿಳಿದವರಿಗೆ ಅವು ಸಾಕಷ್ಟು ಸ್ಪಷ್ಟ ತೋರುವವು. ಅದೇ ರೀತಿಯಾಗಿ ರಾತ್ರಿ ಮತ್ತು ದಿನಗಳು ಶಾಶ್ವತ ಭಗಿನಿಯರು ನಮ್ಮ ಯಜ್ಞರೂಪ ಕಾರ್ಯಗಳನ್ನು ಹೊಕ್ಕು ಹಾಸಾಗಿ ಮಾಡಿ ನೇಯುವ ಉತ್ಸಾಹೀ ಭಗಿನಿಯರಂತೆ ಉಂಟು. ಗುಹ್ಯ ಸ್ವರೂಪ ಮತ್ತು ಅರ್ಥವುಳ್ಳ ಶಬ್ದಗಳಿದ್ದರೂ ಯಜ್ಞದ ಮನೋವೈಜ್ಞಾನಿಕ ಗುಣವಿಶೇಷದ ಬಗ್ಗೆ ಇದಕ್ಕಿಂತ ಹೆಚ್ಚು ನಿಶ್ಚಿತವಾದ ನಿರೂಪಣೆಯನ್ನು ಮಾಡಲು ಸಾಧ್ಯವಿಲ್ಲ. 'ಗೋ'ದ ನಿಜವಾದ ಅರ್ಥವನ್ನು, ಬೇಡಿದ ಸಂಪತ್ತು ಮತ್ತು 'ಮಹಾನಿಧಿ'ಯ ಸಮೃದ್ಧಿಗಳ ನಿಜವಾದ ಅರ್ಥವನ್ನು ಇದಕ್ಕೂ ಹೆಚ್ಚು ಸ್ಪಷ್ಟಪಡಿಸಲಾಗದು.

ವೇದಗಳ ರಹಸ್ಯವನ್ನು ಬಹಿರಂಗಪಡಿಸಬಾರದೆಂದು ಬೇಕೆಂತಲೇ ಋಷಿಗಳು ಎರಡು ಅರ್ಥವುಳ್ಳ ಲಾಕ್ಷಣಿಕ ಶಬ್ದಗಳನ್ನು ಉಪಯೋಗಿಸಿದರು. ಸಂಸ್ಕೃತ ಸಾಹಿತ್ಯದಲ್ಲಿ ಇಂಥ ಶಬ್ದಗಳಿಗೇನು ಕೊರತೆಯಿಲ್ಲ, ಬೇಕಾದಷ್ಟು ಸಿಕ್ಕುವವು. ಇದರಿಂದ ಋಷಿಗಳಿಗೆ ಹಾಗೆ ಮಾಡಲು ಸುಲಭವಾಯಿತು. ಆದರೆ ಇಂಗ್ಲಿಷಿನಲ್ಲಿ ಆ ಶಬ್ದಗಳ ಅನುವಾದಮಾಡುವದು ಮಾತ್ರ ಸುಲಭವಲ್ಲ, ಹಲ ಸಂದರ್ಭಗಳಲ್ಲಿ ಅದು ಅಶಕ್ಯವೇ ಆಗುವದು. ಗೋ ( ಆಕಳು ) ಎಂದರೆ ಜ್ಯೋತಿ ಅಥವಾ ಜ್ಯೋತಿ ಕಿರಣವೆಂದೂ ಅರ್ಥವಾಗುವದು. ಗೋತಮ ಎಂದರೆ ಹೆಚ್ಚು ಉಜ್ವಲ, ಗವಿಷ್ಠಿರ ಎಂದರೆ ನಿಶ್ಚಲಜ್ಯೋತಿ ಎಂಬ ಅರ್ಥವು ಆ ಋಷಿಗಳ ಹೆಸರಿನಲ್ಲಿ ಕಂಡುಬರುವದು. ಗ್ರೀಕ ದಂತಕಥೆಯಲ್ಲಿ ಅಥವಾ ತತ್ತ್ವಜ್ಞಾನದಲ್ಲಿ ಪರಿಚಿತವಿರುವಂತೆ ವೇದದಲ್ಲಿಯು ಗೋಗಳೆಂದರೆ ಆದಿತ್ಯಗಣ, ಸತ್ಯ ಜ್ಯೋತಿ ಮತ್ತು ಜ್ಞಾನ ಸೂರ್ಯನ ಕಿರಣಗಳು. ಕೆಲ ಋಕ್ಕುಗಳಲ್ಲಿ ಈ ಬಗೆಯ ಅರ್ಥವಾಗುತಿರುವದರಿಂದ ಉಳಿದ ಕಡೆಗೂ ಹೀಗೆಯೇ ಅರ್ಥಮಾಡಬಹುದಾಗಿದೆ. 'ಘೃತ' ಶಬ್ದದ ಅರ್ಥ ತುಪ್ಪವೆಂದಾಗುತ್ತದೆ. ಯಜ್ಞದಲ್ಲಿಯ ಮುಖ್ಯ ವಸ್ತುವದು. ಆದರೆ ಘೃತವೆಂದರೆ 'ಜ್ಯೋತಿ' ಎಂದೂ ಅರ್ಥವಾಗುವದು. ಘೃ ಎಂಬ ಧಾತು ಪ್ರಕಾಶಿಸು ಎಂಬ ಅರ್ಥವನ್ನು ಕೊಡುತ್ತದೆ. ಅದರಿಂದ ಹೊರಟ ಘೃತ ಶಬ್ದದ ಅರ್ಥ ಜ್ಯೋತಿ ಎಂದಾಗುತ್ತದೆ. ಅನೇಕ ಋಕ್ಕುಗಳಲ್ಲಿ ಇದೇ ಅರ್ಥದಲ್ಲಿ ಆ ಶಬ್ದವನ್ನು ಉಪಯೋಗಿಸಲಾಗಿದೆ. ಸ್ವರ್ಗಾಧಿಪತಿಯಾದ ಇಂದ್ರನ ಅಶ್ವಗಳು ಘೃತಸ್ನು ಎಂದರೆ ಪ್ರಕಾಶದಿಂದ ಹೊಳೆಯುತಿವೆ; ಅವುಗಳ ಮೈಯೊಳಗಿಂದ ತುಪ್ಪವು ಸೋರುತಿದೆಯೆಂದು ನಿಶ್ಚಯವಾಗಿ

ಇದರ ಅರ್ಥವಾಗುವದಿಲ್ಲ. * ಇಂದ್ರನ ಕುದುರೆಗಳು ಯಜ್ಞಶಾಲೆಗೆ ಆಮಂತ್ರಿಸಲ್ಪಟ್ಟಾಗ ಅವುಗಳಿಗೆ ಕೊಡುವ ಧಾನ್ಯದ ಸಂಬಂಧದಲ್ಲಿ ಆ ಶಬ್ದಕ್ಕೆ ಇದೇ ಅರ್ಥವಾಗಬಹುದಾದರೂ ಮೇಲೆ ಹೇಳಿದಂತೆಯೇ ಇದರ ಅರ್ಥವಿರುವದು— ಯಜ್ಞದ ಸಂಬಂಧದಲ್ಲಿ ಉಪಯೋಗಿಸಿದಾಗ ಇದರ ಅರ್ಥ ದ್ವಿಗುಣಿತವಾಗುತ್ತದೆಂಬುದು ಸ್ಪಷ್ಟ. ಧೀ ಇಲ್ಲವೆ ಧೀ ಯನ್ನು ಸೂಚಿಸುವ ಶಬ್ದವನ್ನು ಶುದ್ಧ ಘೃತ ಶಬ್ದ-ದೊಡನೆ ತುಲನೆ ಮಾಡಿದ್ದಾಗಿದೆ. "ಧಿಯಂ ಘೃತಾಸಿಂ" ಹೊಳೆಯುವ ಧೀ ಇಲ್ಲವೆ ಜ್ಞಾನ ಎಂಬ ಶಬ್ದಸಮುಚ್ಚಯು ವೇದದಲ್ಲಿ ಮೇಲಿಂದ ಮೇಲೆ ಬರುತ್ತದೆ. ಅಗ್ನಿಯನ್ನು ಯಜ್ಞದಲ್ಲಿಯ ಅಧ್ವರ್ಯು ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ಅಂಥದೊಂದು ವಿಚಿತ್ರ ಋಕ್ಕನ್ನು ಈ ಪುಸ್ತಕದಲ್ಲಿ ಅನುವಾದಿಸಲಾಗಿದೆ. "ಘೃತಪ್ರುಷಾ ಮನಸಾ" ಮೂರು ಲೋಕಗಳು ಮತ್ತು ದೇವತೆಗಳ ಆವಿರ್ಭಾವ ( ಸಾಯಣಾಚಾರ್ಯರ ಅನುವಾದವಿದು ). ಆದರೆ ಘೃತಪ್ರುಷಾ ಎಂದರೇನು ಮತ್ತು ಹೋತೃ ಅಗ್ನಿಯಲ್ಲಿ ತುಪ್ಪವನ್ನು ಹೋಮಮಾಡಿ ದೇವರನ್ನು ಪ್ರತ್ಯಕ್ಷೀಕರಿಸಿಕೊಂಡು ಹೇಗೆ ತ್ರಿವಿಧ ಸ್ವರ್ಗವನ್ನು ಪಡೆಯುವನು ? ಇದರ ಗುಹ್ಯಾರ್ಥವನ್ನು ಸ್ವೀಕರಿಸಿದರೆ ಇದೆಲ್ಲ ಸ್ಪಷ್ಟವಾಗುವದು. ಅಗ್ನಿಯಲ್ಲಿ ಘೃತವನ್ನು ಹೋಮ ಮಾಡುವದೆಂದರೆ, ಆ ಹೋತಾ ಸಾಮಾನ್ಯ ಮನುಷ್ಯನಲ್ಲ, ಆ ಯಜ್ಞದ ಅಗ್ನಿದೇವತೆಯೂ ಸಾಮಾನ್ಯವಾದ ಅಗ್ನಿಯಲ್ಲ, ಅದು ಅಂತರ್ಜ್ಯೋತಿ ಕವಿಕ್ರತು. ಈ ಮಾರ್ಗದಿಂದ ಅವನು ದೇವರನ್ನು ಸಾಕ್ಷಾತ್ಕರಿಸಿಕೊಂಡು ಸ್ವರ್ಗವನ್ನು ಪಡೆ-ಯುವನು ಎಂದು ಋಷಿಯ ಅಭಿಪ್ರಾಯ. ಋಷಿಗಳು ದ್ರಷ್ಟಾರರಾಗಿದ್ದಲ್ಲದೆ ಮುನಿಗಳೂ ಆಗಿದ್ದರು. ಧ್ಯಾನಾಸಕ್ತರಾದಾಗ ಅವರು ಪ್ರತ್ಯಕ್ಷ ಮೂರ್ತಿಗಳನ್ನೂ ಕಾಣುತಿದ್ದರು, ಅವುಗಳ ಮುಖಾಂತರ ವಿವಿಧ ವಸ್ತುಗಳನ್ನು ನೋಡುತಿದ್ದರು. ಇದರಿಂದ ಒಂದು ಬಗೆಯ ಅನುಭವ ಅವರಿಗೆ ಬರುತಿದ್ದಿತು. ಅವರು ಅದಕ್ಕೊಂದು ಬಗೆಯ ಮೂರ್ತಸ್ವರೂಪ ಕೊಟ್ಟು ಇದು ಹೀಗೆಯೇ ಎಂದು ನಿರ್ಧಾರವಾಗಿ ಹೇಳುತಿದ್ದರು. ಅದಕ್ಕೆ ಗುಹ್ಯ ಶರೀರಾದಿಗಳನ್ನು ಕೊಡುತಿದ್ದರು. ಇದರಿಂದ ಅವರಿಗೆ ಒಂದು ಬಗೆಯ ಅನುಭವ ಬಂದು ಜ್ಯೋತಿರ್ದರ್ಶನವಾಗುತಿದ್ದಿತು. ಈ ಆತ್ಮಾಹುತಿಯಿಂದ ಅವರಿಗೆ ವಿಶಿಷ್ಟ ಅನುಭವ ಬರುತಿದ್ದಿತು. ಪಾಶ್ಚಾತ್ಯಬುದ್ಧಿಗೆ ಇದೆಲ್ಲ ವಿಚಿತ್ರವೆನಿಸಬಹುದು. ಆದರೆ ಭಾರತೀಯ ಪರಂಪರೆಯನ್ನು ಬಲ್ಲವರಿಗೆ,

* ಸಾಯಣಾಚಾರ್ಯರು ಅನೇಕ ಋಕ್ಕುಗಳಲ್ಲಿ ಘೃತವೆಂದರೆ ಜ್ಯೋತಿ ಎಂದು ಅರ್ಥ ಮಾಡಿದ್ದರೂ ಈ ಸಂದರ್ಭದಲ್ಲಿ ಅದಕ್ಕೆ ನೀರು ಎಂದು ಅರ್ಥ ಮಾಡಿದ್ದಾರೆ. ಕುದುರೆಗಳು ಬಹಳ ದಣಿದದ್ದರಿಂದ ಬೆವರಿ ಅವುಗಳ ಮೈಯೊಳಗಿಂದ ನೀರು ಇಳಿಯುತಿದ್ದಿ-ತೆಂದು ಅವರು ಹೇಳುತ್ತಾರೆ. ಇಂದ್ರನು ಸ್ವರ್ಗಾಧಿಪತಿಯಾದ್ದರಿಂದ ಅವನ ಕುದುರೆಗಳ ಬೆವರಿನ ಹನಿಗಳೆ ಮಳೆಯಾಗಿ ಭೂಮಿಯಲ್ಲಿ ಬೀಳುತಿದೆಯೆಂದೂ ಇದರಿಂದ ಕೆಲವರು ಅರ್ಥ ಮಾಡಿಕೊಳ್ಳಬಹುದು.

ಅಥವಾ ಧ್ಯಾನದ ಮಹತ್ವವನ್ನು ತಿಳಿದವರಿಗೆ ಮತ್ತು ಹೃದಯಾಂತರಾಳದಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬಲ್ಲವರಿಗೆ ಇದೆಲ್ಲದರ ಪೂರ್ಣ ಅರ್ಥ ವಾಗುವದು. ಈ ಅನುಭಾವಿಗಳು ಪ್ರತೀಕಾತ್ಮರಾಗಿದ್ದು, ಬಾಹ್ಯಶಾರೀರಕ ವಸ್ತು, ಘಟನೆಗಳೆಲ್ಲ ಅಂತಃಸತ್ಯವೆಂದು ಅವರು ಭಾವಿಸುತಿದ್ದರು. ತಮ್ಮ ಬಾಹ್ಯಶರೀರ ಮತ್ತು ಜೀವನದಲ್ಲಿಯ ಘಟನೆಗಳು ಮತ್ತು ಸುತ್ತಲಿನ ಘಟನೆಗಳು ಮತ್ತು ಪದಾರ್ಥಗಳು ಕೂಡ ಅಂತಃಸತ್ಯದ ಚಿಹ್ನಗಳೆಂದು ಅವರು ಬಗೆಯುತಿದ್ದರು. ಇದರಿಂದ ಅವರಿಗೆ ಆಯಾ ವಸ್ತುಗಳ ಇತ್ಯರ್ಥವಾಗುತಿದ್ದಿತು. ಅವುಗಳ ಲಕ್ಷಣ ಮೊದಲಾದವುಗಳ ಪರಿಚಯುವೂ ಆಗುತಿದ್ದಿತು.

ವೇದದಲ್ಲಿಯ ಉಳಿದ ಸ್ಥಿರ ಶಬ್ದಗಳಿಗೆ ಮತ್ತು ಸಂಕೇತಗಳಿಗೆ ಕೂಡ ಇದೇ ಬಗೆಯ ಅರ್ಥ ಮಾಡಬೇಕು. ವೇದದಲ್ಲಿಯ 'ಗೋ' ಜ್ಯೋತಿಯ ಸಂಕೇತವಾಗಿರು ವಂತೆ ಅದರಲ್ಲಿಯ 'ಅಶ್ವ' ಶಕ್ತಿಯ, ಆಧ್ಯಾತ್ಮಿಕ ಶಕ್ತಿಯ, ತಪಃಶಕ್ತಿಯ ಸಂಕೇತ ವಾಗಿದೆ. 'ಕೆಲವು ಅಶ್ವಗಳನ್ನು ಮತ್ತು ಅವುಗಳ ಮುಂದೆ ಹೋಗುವ ಗೋ ಗಳನ್ನು ದಯಪಾಲಿಸು' ಎಂದು ಋಷಿಯು ಅಗ್ನಿಯನ್ನು ಪ್ರಾರ್ಥಿಸುವಾಗ ಅವನು ಕೇವಲ ಅಶ್ವ ಮತ್ತು ಗೋಗಳನ್ನು ಕೇಳದೆ ಪರಮ ಜ್ಯೋತಿಯ ಪ್ರಕಾಶದಲ್ಲಿ ಕಾರ್ಯ ಮಾಡುವ ಶ್ರೇಷ್ಠ ಆಧ್ಯಾತ್ಮಿಕ ಶಕ್ತಿಯನ್ನು ದಯಪಾಲಿಸು ಎಂದು ಅವನು ಪ್ರಾರ್ಥಿಸು ವನು. ಋಷಿಯ ಒಂದು ಮಂತ್ರದಲ್ಲಿ ಪಣಿಗಳಿಂದ ಗೋಸಮೂಹವನ್ನು 'ಗವ್ಯಂ' ಮುಕ್ತ ಮಾಡಿದ್ದನ್ನು ವರ್ಣಿಸಲಾಗಿದ್ದರೆ ಮತ್ತೊಂದರಲ್ಲಿ ಅಶ್ವ ಶಕ್ತಿಯನ್ನು 'ಅಶ್ವಂ' ದಯಪಾಲಿಸೆಂದು ಋಷಿಯು ಅಗ್ನಿಯನ್ನು ಬೇಡಿಕೊಳ್ಳುವನು. ಕೆಲ ಸಲ ಅಶ್ವ ಗಳಿಗಾಗಿ ಹಲ ಸಲ ಶೂರ ಸೈನಿಕರಿಗಾಗಿ ಋಷಿಯು ಅಗ್ನಿಯನ್ನು ಪ್ರಾರ್ಥಿಸಿದರೆ ಮತ್ತೆ ಕೆಲ ಸಂದರ್ಭಗಳಲ್ಲಿ ಹೆಚ್ಚು ಸಾಂಕೇತಿಕವಾದ ಭಾಷೆಯಲ್ಲಿ ವೀರಸೈನಿಕರನ್ನು 'ಸುವೀರ್ಯಂ' ದಯಪಾಲಿಸೆಂದು ಬಿನ್ನವಿಸಿಕೊಳ್ಳುವನು. ಮತ್ತೆ ಕೆಲ ಸಲ ಅವನು ಸಂಕೇತವನ್ನು ಮತ್ತು ವಸ್ತುವನ್ನು ಮಿಶ್ರಮಾಡಿ ಬಿಡುತ್ತಾನೆ. ಅದರಂತೆ ಅವನು ಮಗನನ್ನು ಅಥವಾ ಮಕ್ಕಳನ್ನು 'ಅಪತ್ಯಂ' ದಯಪಾಲಿಸೆಂದು ಪ್ರಾರ್ಥಿಸುವನು. ಅಪತ್ಯವೆಂದರೆ ಶ್ರೀಮಂತಿಕೆಯ ಲಕ್ಷಣವೆಂದು ಅವನು ಭಾವಿಸುವನು. ಆದರೆ ಇಲ್ಲಿಯೂ ನಾವು ಗುಹ್ಯಾರ್ಥವನ್ನು ಕಾಣಬಹುದಾಗಿದೆ. ಏಕೆಂದರೆ ಕೆಲ ಋಕ್ಕುಗಳಲ್ಲಿ ಜನಿಸಿದ ಮಗನೆಂದರೆ ಅಂತರ್ಜನನದ ಪ್ರತೀಕವೆಂದು ವರ್ಣಿಸಲಾಗಿದೆ. ಅಗ್ನಿಯೇ ನಮ್ಮ ಮಗನು, ನಮ್ಮ ಕೆಲಸ ಕಾರ್ಯಗ ಮಗು, ವಿಶ್ವಾಗ್ನಿಯು ಪಿತೃಪಿತಾಮಹನು. ಒಳ್ಳೆ ವಸ್ತುಗಳ ಮಾರ್ಗದಲ್ಲಿ ಶ್ರಮಿಸಿದರೆ ಶ್ರೇಷ್ಠ ಸತ್ಯಲೋಕವನ್ನು ನಾವು ಕಂಡು ಹಿಡಿಯಬಲ್ಲೆವು ಎಂದು ವರ್ಣಿಸಲಾಗಿದೆ. ವೇದದಲ್ಲಿ 'ಜಲಂ' ನೀರು ಎಂಬುದನ್ನು ಸಂಕೇತಾರ್ಥದಲ್ಲಿ ಉಪಯೋಗಿಸಲಾಗಿದೆ. 'ಸಲಿಲಂ ಅಪ್ರಕೇತಂ' ಅಂದರೆ ಅಚಿತ್ ಸಾಗರವೆಂದು ವರ್ಣಿಸಲಾಗಿದೆ. ಇದರಲ್ಲಿ ದೇವಾಂಶವಿದ್ದು ತನ್ನ ದೈವದ ಮೂಲಕ ಅವನು ಅದರಿಂದ ಜನಿಸುತ್ತಾನೆಂದೂ ವರ್ಣಿಸಲಾಗಿದೆ. 'ಮಹೋಅರ್ಣಸ್'

ಮಹಾಸಾಗರವನ್ನು ವೇದವು ವರ್ಣಿಸುತ್ತದೆ. ಈ ಸಾಗರದಲ್ಲಿಯ ನೀರುಗಳ ಬಗ್ಗೆ ಸರಸ್ವತಿಯು ನಮ್ಮನ್ನು ಜಾಗ್ರತಗೊಳಿಸುತ್ತಾಳೆ. 'ಕೇತುನಾ ಪ್ರಚೋದಯತಿ' ಎಂದು ಮತ್ತೊಂದು ಮಂತ್ರದಲ್ಲಿ ವರ್ಣಿಸಲಾಗಿದೆ. ಸಪ್ತನದಿಗಳೆಂದರೆ ಉತ್ತರ ಹಿಂದುಸ್ತಾನದಲ್ಲಿಯ ನದಿಗಳೆಂದು ತೋರುತ್ತದೆ. ಆದರೆ ವೇದದಲ್ಲಿ ಸ್ವರ್ಗದಿಂದ ಕೆಳಗೆ ಪ್ರವಹಿಸುತ್ತಿರುವ ಮಹಾನದಿಗಳೆಂದು ವರ್ಣಿಸಲಾಗಿದೆ. ಆ ನದಿಗಳು ಋತಜ್ಞ ಅಂದರೆ ಸತ್ಯಜ್ಞಾನವಿದ್ದವರನ್ನು ತಿಳಿದಿವೆ. ಅವು ಮುಕ್ತವಾದ ಕೂಡಲೆ ನಮಗೆ ಶ್ರೇಷ್ಠ ಸ್ವರ್ಗದ್ವಾರವನ್ನು ತೋರಿಸಿಕೊಡುತಿವೆ. ಸಲಿಲಗೃಹದಲ್ಲಿ ಜ್ಞಾನ ಮತ್ತು ವಿಶ್ವಮಯ ಜೀವನವಿದೆಯೆಂದು ಪರಾಶರರು ವರ್ಣಿಸುತ್ತಾರೆ. ವೃತ್ರಾಸುರ ನನ್ನು ಕೊಂದ ಇಂದ್ರನು ಮಳೆಯನ್ನು ಕರೆಯುತ್ತಾನೆ. ಆದರೆ ಈ ಮಳೆಯು ಸ್ವರ್ಗದ ಮಳೆಯಾಗಿದ್ದು ನದಿಗಳ ಪ್ರವಾಹಕ್ಕೆ ಚಾಲನೆ ಕೊಡುತ್ತಿದೆ. ಆದುದರಿಂದ ವೇದದಲ್ಲಿ ಬಹಳಮಟ್ಟಿಗೆ ವರ್ಣಿತವಾದ ಜಲಪ್ರವಾಹದ ಕತೆಗೆ ಸಾಂಕೇತಿಕ ಅರ್ಥ ವಿದೆ. ಪರ್ವತದಲ್ಲಿ ಅಂಧಕಾರಮಯವಾದ ಗುಹೆಯೊಳಗಿಂದ ಸೂರ್ಯನು ಸೂರ್ಯಗಣ ಇಲ್ಲವೆ ಸ್ವರ್ ಮೊದಲಾದವುಗಳನ್ನು ದೇವತೆಗಳು ಮತ್ತು ಅಂಗಿರಸ್ ಋಷಿಗಳು ಸಂಶೋಧಿಸಿ ಮುಕ್ತ ಮಾಡಿದರೆಂಬ ಸಾಂಕೇತಿಕ ದಂತಕಥೆಯಿದೆ. ಸೂರ್ಯನ ಸಂಕೇತವು ಶ್ರೇಷ್ಠಜ್ಯೋತಿ ಮತ್ತು ಸತ್ಯದೊಡನೆ ಸದಾ ಕೂಡಿಕೊಂಡಿದೆ. ಕನಿಷ್ಠ ಸತ್ಯದಿಂದ ಮುಚ್ಚಲ್ಪಟ್ಟ ಸತ್ಯದಲ್ಲಿ ಸೂರ್ಯಾಶ್ವಗಳು ಮುಕ್ತವಾಗುತಿವೆ. ಗಾಯತ್ರಿ ಮಂತ್ರವು ಪರಮಜ್ಯೋತಿರ್ಮಯ ಸೂರ್ಯನನ್ನೇ ನಮ್ಮ 'ಧೀ'ಯನ್ನು ಪ್ರಚೋದಿಸು ಎಂದು ಪ್ರಾರ್ಥಿಸಲಾಗುತ್ತದೆ. ವೇದದ್ವೇಷಿಗಳನ್ನು 'ದಸ್ಯು' ಎಂದು ಕರೆಯ ಲಾಗಿದೆ. ಇವರು ಗೋಗಳನ್ನು ಕದಿಯುತ್ತಾರೆ. ವೃತ್ರರೆಂದೂ ಇವರನ್ನು ಕರೆಯ ಲಾಗಿದೆ. ಸಾಮಾನ್ಯಾರ್ಥದಲ್ಲಿ ಇವರನ್ನು ಮಾನವದ್ವೇಷಿಗಳೆಂದು ಕರೆಯಲಾಗಿದೆ. ಆದರೆ ವೃತ್ರನು ದೈತ್ಯನಾಗಿದ್ದು, ನಮ್ಮಿಂದ ಜ್ಯೋತಿಯನ್ನು ಮರೆಮಾಡಿ ಅದು ದೊರೆಯದಂತೆ ಮಾಡುವನು; ವೃತ್ರರು ಅವನ ಸೈನಿಕರಾಗಿದ್ದು ಈ ಕಾರ್ಯದಲ್ಲಿ ಅವನಿಗೆ ಸಹಾಯ ಮಾಡುವರು. ದಸ್ಯುಗಳು ಕಳ್ಳರಾಗಿರುವದಲ್ಲದೆ ವಿನಾಶಕರೂ ಆಗಿರುವರು. ತಮಸ್ಸಿನ ಶಕ್ತಿ ಅವರು. ಜ್ಯೋತಿಯ ಬೆನ್ನುಹತ್ತಿದವರ ಶತ್ರುಗಳು ಮತ್ತು ಸತ್ಯದ್ರಷ್ಟಾರರ ದ್ವೇಷಿಗಳು. ಬಾಹ್ಯದಿಂದ ಅಂತರ್ಜ್ಞಾನ ಪಡೆಯುವು- ದಕ್ಕಾಗಿ ಅನೇಕ ಸಂಕೇತಗಳು ವೇದದಲ್ಲಿ ನಮಗೆ ಕಾಣಸಿಗುತ್ತವೆ.

ಸೂರ್ಯನ ಸಂಕೇತದ ಸಂಬಂಧದಲ್ಲಿ ಪಂಚಮಮಂಡಲದಲ್ಲಿ ಒಂದು ಮಹತ್ವದ ಮಂತ್ರವಿರುವದು. ವೇದಋಷಿಗಳ ಗುಹ್ಯ ಸಂಕೇತವನ್ನು ಅದು ತಿಳಿಸುವದಲ್ಲದೆ ಉಪನಿಷತ್ಕಾರರು ವೇದವನ್ನು ಎಂತು ತಿಳಿದುಕೊಂಡರೆಂಬುದನ್ನು ಸೂಚಿಸುತ್ತದೆ. ತಮ್ಮ ಹಿಂದೆ ಇದ್ದ ಋಷಿಮುನಿಗಳ ಸ್ಫೂರ್ತಿಪ್ರದ ಜ್ಞಾನದ ಬಗ್ಗೆ ಅವರಲ್ಲಿದ್ದ ವಿಶ್ವಾಸವನ್ನು ಅದು ವ್ಯಕ್ತಪಡಿಸುತ್ತದೆ. 'ಸತ್ಯದಿಂದ ಆಚ್ಛಾದಿತವಾದ ಸತ್ಯ ವಿದೆ, ಅಲ್ಲಿ ಸೂರ್ಯನ ಅಶ್ವಗಳನ್ನು ಮುಕ್ತಮಾಡುವರು, ಹತ್ತು ಸಾವಿರ ಒಟ್ಟಾರೆ

ನಿಂತವು, ಅದುವೇ ಆ ಸತ್ಯವು. ದೇವತೆಗಳಲ್ಲಿ ಅತ್ಯಂತ ಶ್ರೇಷ್ಠನಾದವನನ್ನು ನಾನು ನೋಡಿದೆನು' ಎಂಬುದು ವೇದಮಂತ್ರದ ಸಾರವು. ಉಪನಿಷತ್ಕಾರರು ವೇದದಲ್ಲಿಯ ಈ ನಿಗೂಢ ತತ್ತ್ವವನ್ನು ಯಾವ ರೀತಿ ತಿಳಿದುಕೊಂಡರು, ಅನುಭವ ಪಡೆದರು ಮತ್ತು ಉಪನಿಷತ್ತಿನಲ್ಲಿ ಎಂತು ವರ್ಣಿಸಿದರೆಂಬುದನ್ನು ನೋಡುವಾ. ಸೂರ್ಯನ ಈ ಸಂಕೇತವನ್ನಿಟ್ಟುಕೊಂಡು ಉಪನಿಷತ್ಕಾರರು ರಹಸ್ಯವನ್ನು ಬಿಚ್ಚಿ ಹೇಳುವರು. 'ಸತ್ಯವು ಸುವರ್ಣ ಪಾತ್ರೆಯಿಂದ ಮುಚ್ಚಲ್ಪಟ್ಟದೆ, ಪೂಷಣನೇ, ಅದರಿಂದ ನಮಗೆ ಸತ್ಯದರ್ಶನವಾಗದಂತಾಗಿದೆ. ಏಕಮೇವ ದ್ರಷ್ಟಾರನಾದ ಆ ಪೂಷಣನೆ, ಯಮನೆ, ಸೂರ್ಯನ ಕಿರಣಗಳನ್ನು ಒಗ್ಗೂಡಿಸು. ನಿನ್ನ ಆ ಸುಪ್ರಕಾಶವು ನನಗೆ ಕಾಣಹತ್ತಿದೆ. ಆ ಪುರುಷನಾರು? ನಾನೇ ಅವನು' ಸುವರ್ಣ ಪಾತ್ರೆಯೆಂದರೆ ವೇದದಲ್ಲಿ ಹೇಳಿದ ಆ ಕನಿಷ್ಠ ಋತವು. ದೇವರ ಶರೀರದಲ್ಲಿ ಶ್ರೇಷ್ಠವಾದುದು ಎಂದರೆ ಸೂರ್ಯನ ಶ್ರೇಷ್ಠ ಸ್ವರೂಪವು. ಬಾಹ್ಯ ಪ್ರಕಾಶಕ್ಕಿಂತ ಶ್ರೇಷ್ಠವಾದುದು ಆ ಪರಮ ಜ್ಯೋತಿಯು. ಉಪನಿಷತ್ತಿನ ಆ ಮಹತ್ತತ್ತ್ವವಾದ ಅವನೇ ನಾನು ಎಂಬುದು ಋಗ್ವೇದದಲ್ಲಿಯ 'ತದೇಕಂ' ಎಂಬುದರ ಸಾರವು. ಸುಸ್ಥಿರ ಹತ್ತುನೂರು (ಸೂರ್ಯನ ಕಿರಣಗಳು ಎಂದು ಸಾಯಣರು ಹೇಳುವರು, ಅದುವೆ ಅದರ ನಿಜವಾದ ಅರ್ಥ) ಕಿರಣಗಳನ್ನು ಒಗ್ಗೂಡಿಸಿ ಆ ಪರಮ ಸ್ವರೂಪವು ನನಗೆ ದೃಗ್ಗೋಚರವಾಗುವಂತೆ ಮಾಡು' ಎಂದು ಅದರ ಅರ್ಥವಾಗುವದು. ಇವೆರಡೂ ಶ್ಲೋಕಗಳಲ್ಲಿಯ ಸೂರ್ಯನೆಂದರೆ ಆ ಪರಮ ಸತ್ಯದ, ಪರಮ ಜ್ಯೋತಿಯ ಅಂಶವಾಗಿದೆ ಮತ್ತು ಅವನ ಕಿರಣಗಳೆಂದರೆ ಆ ಪರಮ ಸತ್ಯದ ಮತ್ತು ಜ್ಞಾನದಿಂದ ಹೊರಹೊಮ್ಮುವ ಜ್ಯೋತಿಯು. ವೇದದಲ್ಲಿ ಸದಾ ಮತ್ತು ಉಪನಿಷತ್ತಿನಲ್ಲಿ ಆಗಾಗ ಈ ರೀತಿ ವರ್ಣಿಸಲಾಗುತ್ತದೆ. ಇದನ್ನೆಲ್ಲ ನೋಡಿದರೆ ವೇದದ ಅರ್ಥವು ಉಪನಿಷತ್ಕಾರರಿಗೆ ಹೆಚ್ಚಾಗಿ ಆಗುತಿದ್ದಿತೆಂದೂ ಅನಂತರದ ಪಂಡಿತರಿಗೆ ಅಷ್ಟೊಂದು ಹೊಳೆಯುತಿರಲಿಲ್ಲೆಂದೂ ಸ್ಪಷ್ಟವಾಗುವದು. ಯುರೋಪಿಯನ್ ವಿದ್ವಾಂಸರ ಮನೋಭೂಮಿಕೆಯೇ ಬೇರೆ ಇರುವದರಿಂದ ವೇದದ ಅರ್ಥವು ಅವರಿಗೆ ಎಷ್ಟರ ಮಟ್ಟಿಗೆ ತಿಳಿಯುತಿದ್ದಿತೆಂಬುದನ್ನು ಬೇರೆ ಹೇಳಬೇಕಾಗಿಲ್ಲ.

ವೇದದಲ್ಲಿ ಕೆಲ ಮನೋವೈಜ್ಞಾನಿಕ ಶಬ್ದಗಳಿದ್ದು ಅವುಗಳನ್ನು ಉಚಿತವಾದ ರೀತಿಯಲ್ಲಿ ಗ್ರಹಿಸಬೇಕು. ಅಂದರೆ ಮಾತ್ರ ಅವುಗಳ ಗೂಢಾರ್ಥವು ಗೊತ್ತಾಗುವದು. 'ಋತಂ' ಶಬ್ದವನ್ನು ಸತ್ಯವೆಂದು ತಿಳಿದುಕೊಳ್ಳುವುದಲ್ಲದೆ ಧೀ ಎಂಬ ಶಬ್ದವನ್ನು 'ವಿಚಾರ' ಎಂಬ ಅರ್ಥದಲ್ಲಿ ತಿಳಿಯಬೇಕು. ವೇದಮಂತ್ರಗಳಲ್ಲಿ ಮೇಲಿಂದ ಮೇಲೆ ಈ ಶಬ್ದ ಬರುತ್ತದೆ. ಅದಕ್ಕೆ ಧೀ ಎಂಬ ಸ್ವಾಭಾವಿಕ ಅರ್ಥವು ಮುಂದೆ ಉಪಯೋಗಿಸಲಾದ ಬುದ್ಧಿ ಶಬ್ದಕ್ಕೆ ಅನುಗುಣವಾಗಿದೆ. ಧೀ ಎಂದರೆ ವಿಚಾರ, ತಿಳಿವಳಿಕೆ, ಬುದ್ಧಿ. ಬಹುವಚನದಲ್ಲಿ ಧಿಯಃ ಎಂದಾಗುವದು. ಸಾಮಾನ್ಯವಾಗಿ ಇದಕ್ಕೆ ಎಲ್ಲ ಬಗೆಯ ಅರ್ಥವನ್ನು ಕೊಡಲಾಗುತಿದೆ. ಜಲಕಾರ್ಯ, ಯಜ್ಞ,

ಆಹಾರ ಮೊದಲಾದ ಅರ್ಥಗಳನ್ನಲ್ಲದೆ ಬುದ್ಧಿಯೆಂಬರ್ಥದಲ್ಲಿಯೂ ಇದನ್ನು ಉಪ ಯೋಗಿಸಲಾಗುತ್ತದೆ. ಆದರೆ ಅದರ ಸ್ವಾಭಾವಿಕ ಅರ್ಥವಾವುದೆಂಬುದನ್ನು ನಾವು ಕಂಡುಹಿಡಿದು ಅದರ ಪರಿಣಾಮವೇನೆಂಬುದನ್ನು ನೋಡಬೇಕು. 'ಕೇತು' ಶಬ್ದದ ಸಾಮಾನ್ಯ ಅರ್ಥವು ಕಿರಣ ಎಂದಾಗುತ್ತದೆ; ಆದರೆ ಬುದ್ಧಿ, ತೀರ್ಪು, ಮಾನಸಿಕ ಚಿಚ್ಛಕ್ತಿ ಎಂದೂ ಅದರ ಅರ್ಥವಾಗುವದು. ವೇದದಲ್ಲಿ ಬರುವ ಕೇತು ಶಬ್ದದ ಅರ್ಥ ವನ್ನು ನೋಡಿದರೆ ಚಿಚ್ಛಕ್ತಿಯು ಕಿರಣ, ಅಥವಾ ಅಂತಜ್ಞಾನವೆಂದಾಗುತ್ತದೆ. ಉದಾ ಹರಣಾರ್ಥವಾಗಿ ಈ ಚಿಚ್ಛಕ್ತಿಯ ಅಂತಜ್ಞಾನದಿಂದ, ಕೇತುನಾ, ಸರಸ್ವತಿಯು ನಮ್ಮಲ್ಲಿ ಪ್ರಚಂಡ ಜಲದ ಭಾವನೆಯನ್ನು ಉಂಟುಮಾಡುತ್ತಾಳೆ. ಮೇಲಿನಿಂದ ಹೊರಹೊಮ್ಮಿ ಕೆಳಗೆ ಪ್ರಸಾರವಾಗುವ ಕಿರಣಗಳು ಎಂದು ಬಹುಶಃ ಅದರ ಅರ್ಥ ವಾಗುವದು. ಸತ್ಯ ಮತ್ತು ಜ್ಯೋತಿ ಸೂರ್ಯನ ಕಿರಣಗಳಂತೆ ಇದ್ದು ಜ್ಞಾನದ ಚಿಚ್ಛಕ್ತಿಯಾಗಿದೆ. 'ಕ್ರತು' ಇದರ ಸಾಮಾನ್ಯ ಅರ್ಥವು ಕಾರ್ಯ, ಯಜ್ಞ ಎಂದಾ ಗುವದು, ಆದರೆ ಆದರ ಅರ್ಥವು ಬುದ್ಧಿ, ಶಕ್ತಿ, ನಿರ್ಣಯ, ಎಂದಾಗುವದು. ವಿಶೇಷ ವಾಗಿ ಕಾರ್ಯನಿರ್ಣಾಯಕ ಶಕ್ತಿ ಅರ್ಥಾತ್ ಮನಸ್ಸು ಎಂದಾಗುತ್ತದೆ. ವೇದದ ಗುಹ್ಯಾರ್ಥವನ್ನು ನಾವು ಹೇಳಬೇಕಾದರೆ ಈ ಕೊನೆಯ ಅರ್ಥವನ್ನೆ ಗ್ರಹಿಸಬೇಕಾ ಗುತ್ತದೆ. ಅಗ್ನಿಯು ಕವಿಕ್ರತು, ಕ್ರತುಹೃದಿ– ಕೊನೆಯದಾಗಿ ವೇದದಲ್ಲಿ ಮೇಲಿಂದ ಮೇಲೆ ಬರುವ 'ಶ್ರಾವಸ್' ಇದರ ಅರ್ಥವು ಕೀರ್ತಿ ಎಂದಾಗುತ್ತದೆ. ಆದರೆ ವೇದಕ್ಕೆ ಟೀಕೆ ಬರೆದವರು ಈ ಶಬ್ದವನ್ನು ಆಹಾರ ಎಂಬ ಅರ್ಥದಲ್ಲಿಯೆ ಗ್ರಹಿಸಿದ್ದಾರೆ. ಆದರೆ ಎಲ್ಲ ಸಂದರ್ಭಗಳಲ್ಲಿ ಈ ಅರ್ಥವು ಸರಿಹೋಗಲಾರದು. ಶ್ರಾವಸ್ ಎಂಬುದು ಶ್ರು ಎಂದರೆ ಕೇಳು ಎಂಬ ಧಾತುವಿನಿಂದ ಹುಟ್ಟಿದೆ; ಮತ್ತು ಕಿವಿ ಎಂಬ ಅರ್ಥದಲ್ಲಿ ಉಪಯೋಗಿಸಲಾಗುತ್ತದೆ. ಮಂತ್ರ, ಪ್ರಾರ್ಥನೆ ಎಂಬ ಅರ್ಥವನ್ನೂ ಈ ಶಬ್ದಕ್ಕೆ ಮಾಡಲಾಗುತ್ತದೆ. ಸಾಯಣರು ಈ ಅರ್ಥವನ್ನು ಒಪ್ಪುತ್ತಾರೆ. ಅದರಂತೆ ಕೇಳಿದ್ದು ಎಂದೂ ಇದರ ಅರ್ಥವಾಗುತ್ತದೆ. ಕೇಳುವದರಿಂದ ಉಂಟಾದ ಜ್ಞಾನವೆಂದೂ ಈ ಶಬ್ದಕ್ಕೆ ಅರ್ಥ ಮಾಡಬಹುದು. ತಾವು ಸತ್ಯಶ್ರುತರು ಎಂದು ಋಷಿಗಳು ಹೇಳಿ ಕೊಳ್ಳುವರು. ಸತ್ಯವನ್ನು ಕೇಳಿದವರು ಎಂದು ಇದರ ಅರ್ಥ. ಈ ಜ್ಞಾನವೆ ಶ್ರುತಿ ಎಂದು ಪ್ರಸಿದ್ಧಿಯನ್ನು ಪಡೆದಿದೆ. ಈ ಬಗೆಯ ಅಂತಃಪ್ರೇರಿತ ಜ್ಞಾನವು ವೇದದ ಗುಹ್ಯಾರ್ಥವೆಂದು ನಾವು ಗ್ರಹಿಸುತ್ತೇವೆ. ಈ ಅರ್ಥವು ಪೂರ್ಣವಾಗಿ ಸುಸಂಗತ ವಾಗಿದೆಯೆಂದೂ ನಮಗೆ ತಿಳಿದುಬರುತ್ತದೆ. 'ಶ್ರವಾಂಸಿ' ಎಂದು ಋಷಿಗಳು ಹೇಳು ವಾಗ ಮೇಲಿನಿಂದ ಮತ್ತು ಕೆಳಗಿನಿಂದ ತರಲ್ಪಟ್ಟವೆಂದು ಅರ್ಥವಾಗುವುದಲ್ಲದೆ ಆಹಾರವೆಂದಾಗಲಿ ಕೀರ್ತಿಯೆಂದಾಗಲಿ ಅದರ ಅರ್ಥವಾಗಲಾರದು. ಅಸತ್ಯದ ಆಚೆ ಗಿರುವ ಸತ್ಯದ ವರೆಗೆ ಹೋಗಿ ನಮಗೆ ಸತ್ಯವನ್ನು ದಯಪಾಲಿಸುವ ಅಂತಃಸ್ಫೂರ್ತಿ ಯೆಂದೆ ಋಷಿಗಳ ಅಭಿಪ್ರಾಯವೆಂದು ಇಲ್ಲಿ ಗ್ರಹಿಸಿದರೆ ಪೂರ್ಣ ಸುಸಂಗತವೆನಿಸು ವದು. ಪ್ರತಿಯೊಂದು ಕಡೆಗೂ ನಾವು ಇದೇ ರೀತಿ ಅರ್ಥಮಾಡಬೇಕು. ಹೆಚ್ಚು ವಿವ

ರಣೆ ಮಾಡಲಾರೆ. ಕೆಲ ಲಕ್ಷಣಗಳನ್ನು ಮಾತ್ರ ಹೇಳಿರುವೆನು. ಇದರಿಂದ ವೇದದ ಗುಹ್ಯಾರ್ಥವನ್ನು ಎಂತು ತಿಳಿದುಕೊಳ್ಳಬೇಕೆಂಬುದನ್ನು ವಾಚಕರು ತಿಳಿದುಕೊಂಡಿರಲು ಸಾಕು.

## ಶೋಧನೆಯ ಫಲಿತಾಂಶ: ಗೂಢಾರ್ಥದ ಸಾರ

ಆದರೆ ಈ ರೀತಿ ವೇದಾರ್ಥವನ್ನು ನಿರ್ಣಯಿಸುತ್ತ ಹೋದರೆ ಅದರ ಗೂಢಾರ್ಥವೇನು? ಅದರ ರಹಸ್ಯವೇನು? ಪ್ರತಿಯೊಂದು ಕಡೆ ಅನುಭಾವಿಗಳು ನಡೆಸಿದ ಅನ್ವೇಷಣದಿಂದ ಅದನ್ನು ತಿಳಿದುಕೊಳ್ಳಬಹುದು. ಭಾರತೀಯ ಸಂಸ್ಕೃತಿಯು ಯಾವ ರೀತಿ ಅಭಿವೃದ್ಧಿ ಹೊಂದುತ್ತ ನಡೆಯಿತೆಂಬುದರ ಮೇಲಿಂದಲೆ ಇದನ್ನು ತಿಳಿಯಬಹುದು. ಪ್ರಾಚೀನ ಆಧ್ಯಾತ್ಮಿಕ ಸತ್ಯದ ಸ್ವರೂಪವು ಉಪನಿಷತ್ತುಗಳಲ್ಲಿ ಪರ್ಯವಸಾನ ಹೊಂದಿತು. ವೇದದ ಗುಹ್ಯಾರ್ಥವು ಬೀಜವಾಗಿ ಪರಿಣಮಿಸಿ ಮುಂದೆ ಮಹಾವೃಕ್ಷವಾಗಿ ಪ್ರಸಾರ ಹೊಂದಿತು. ಸತ್ಯ, ಜ್ಯೋತಿ, ಅಮರತ್ವಗಳನ್ನು ಪಡೆಯುವುದಕ್ಕಾಗಿ ಈ ವೇದಾಂತದ ಸುತ್ತಲೂ ವಿಚಾರ ಕಿರಣಗಳು ಪ್ರಸರಿಸಿವೆ. ಆಪಾತತಃ ತೋರುವ ಸತ್ಯಕ್ಕಿಂತ ಆಳವಾದ ಪರಮ ಸತ್ಯವೊಂದಿದೆ. ಮಾನವರಿಗೆ ಗೋಚರವಾದ ಜ್ಯೋತಿಗಿಂತ ಶ್ರೇಷ್ಠವಾದ ಪರಮಜ್ಯೋತಿಯೊಂದಿದೆ. ಧ್ಯಾನ, ತಪಸ್ಸಿನಿಂದ ಮಾತ್ರ ಅದನ್ನು ನೋಡಬಹುದು. ಮಾನವನ ಅಂತಿಮ ಧ್ಯೇಯವು ಅಮರತ್ವವನ್ನು ಪಡೆಯುವದಾಗಿದೆ. 'ಸಸ್ನುತಾ ಋತಂ ಅಮೃತಂ' ಪಡೆಯುವ ಮಾರ್ಗವನ್ನು ನಾವು ಕಂಡುಕೊಳ್ಳಬೇಕು. ಸತ್ಯದಲ್ಲಿಯೇ ಜನಿಸಿ, ಅಭಿವೃದ್ಧಿ ಹೊಂದಿ ಸತ್ಯಲೋಕವನ್ನು ಮುಟ್ಟಿ ಅಲ್ಲಿಯೆ ವಾಸಮಾಡುವದಕ್ಕಾಗಿ ನಾವು ಪ್ರಯತ್ನಿಸಬೇಕಾಗಿದೆ. ಹಾಗೆ ಮಾಡಬೇಕಾದರೆ ನಾವು ಪರಮಾತ್ಮನೊಡನೆ ತಾದಾತ್ಮ್ಯ ಹೊಂದಿ ಮೃತತತ್ವದಿಂದ ಅಮೃತತತ್ವವನ್ನು ಪಡೆಯಬೇಕು. ವೇದಪುರುಷನ ಉಪದೇಶದ ಮುಖ್ಯ ಸಾರವಿದು. ಪ್ರಾಚೀನ ಅನುಭಾವಿಗಳ ತತ್ತ್ವಗಳಿಂದ ತಮ್ಮ ಸಿದ್ಧಾಂತಗಳನ್ನು ಸಮರ್ಥಿಸಿಕೊಂಡು ಪ್ಲೇಟೋನ ಅನುಯಾಯಿಗಳು ತಾವು ದ್ವಿಜಗತ್ತಿಗೆ ಸಂಬಂಧಿಸಿದವರೆಂದು ಹೇಳುತ್ತಾರೆ. ಒಂದು ಆಧ್ಯಾತ್ಮಿಕ ಜಗತ್ತು ಪರಮ ಸತ್ಯದ ಜಗತ್ತಿದು ; ಎರಡನೆಯದು ಕನಿಷ್ಠ ಸತ್ಯಕ್ಕಿಳಿದ ಚೇತನಾ ಜಗತ್ತು. ವೇದವಾದಿಗಳಿಗೆ ಈ ದ್ವಿಜಗತ್ತಿನ ಅನುಭವವಿದ್ದುದರಿಂದ ಅವರು ಈ ತತ್ತ್ವವನ್ನು ಹೆಚ್ಚು ಸ್ಪಷ್ಟವಾಗಿ ಮತ್ತು ಲೌಕಿಕ ರೀತಿಯಲ್ಲಿ ತಿಳಿದುಕೊಂಡರು. ಭೂರಿ ಅನೃತಮಯ ಈ ಜಗತ್ತಿನಲ್ಲಿ ಕನಿಷ್ಠಸತ್ಯವಿದೆ. ಸತ್ಯದ ಧಾಮವು, ಸತ್ಯದ ಸದನವು ಬೇರೆಯಿದೆ. 'ಸತ್ಯಂ ಋತಂ ಬೃಹತ್' ಜಗತ್ತಿನಲ್ಲಿ ಎಲ್ಲವೂ 'ಋತ್ ಚಿತ್' ಇರುವದು. ತ್ರಿಸ್ವರ್ಗ ಮತ್ತು ಅವುಗಳ ಜ್ಯೋತಿಗಳ ನಡುವೆ ಅನೇಕ ಜಗತ್ತು ಇರುವವು. ಆದರೆ ಇದು ಪರಮಜ್ಯೋತಿಯ ಜಗತ್ತು, ಸ್ವರ್ಜಗತ್ತು. ಈ ಶ್ರೇಷ್ಠ ಸ್ವರ್ಗಕ್ಕೆ ಮಾರ್ಗವನ್ನು ಹುಡುಕಬೇಕು. ಈ ಋತದ ಪಥವನ್ನು ಕಂಡುಕೊಳ್ಳಬೇಕು. ದೇವತೆಗಳ ಮಾರ್ಗವಿದು ಎಂದು ಕೆಲ ಸಲ ಇದನ್ನು ಕರೆಯಲಾಗುತ್ತದೆ.

ಇದು ಎರಡನೇ ಗುಹ್ಯತತ್ತ್ವವು. ಸತ್ಯ ಮತ್ತು ಜ್ಯೋತಿಗಳ ನಡುವಿನ ಹೋರಾಟವೆ ನಮ್ಮ ಜೀವನವು. ಅಮರರಾದ ದೇವತೆಗಳು ಮತ್ತು ತಮಃಶಕ್ತಿಗಳ ನಡುವಿನ ಹೋರಾಟವೆ ಮೂರನೇ ತತ್ತ್ವವು. ಬೇರೆ ಬೇರೆ ಹೆಸರಿನಲ್ಲಿ ಇದನ್ನು ಕರೆಯುಲಾಗಿದೆ. ವೃತ್ರ, ವೃತ್ರರು, ವಲ ಮತ್ತು ಪಣಿ, ದಸ್ಯು ಮತ್ತು ಅವರ, ಅಸರ ಎಂದು ಇವರನ್ನು ಕರೆಯಲಾಗಿದೆ. ಜ್ಯೋತಿಯನ್ನು ಮರೆಮಾಡುವ ತಮಃಶಕ್ತಿಯೊಡನೆ ಹೋರಾಡಿ ಅದನ್ನು ನಾಶಪಡಿಸುವುದಕ್ಕಾಗಿ ನಾವು ದೇವತೆಗಳ ಸಹಾಯವನ್ನು ಪಡೆಯಬೇಕಾಗಿದೆ. ಋತದ ಧಾರೆಯನ್ನು ನಿಲ್ಲಿಸಿಬಿಟ್ಟು, ಉಚ್ಚಸ್ಥಾನಕ್ಕೆ ಹೋಗುವ ಜೀವನ ಮಾರ್ಗವನ್ನು ತಡೆಯುವ ಈ ತಮಃಶಕ್ತಿಯನ್ನು ನಾಶ ಮಾಡಬೇಕಾಗಿದೆ. ಅಂತರ್ಯಜ್ಞದ ಮೂಲಕ ದೇವರನ್ನು ಪ್ರಾರ್ಥಿಸಿ, ಯಜ್ಞಯಾಗಾದಿಗಳ ದೇವತೆಗಳನ್ನು ಸಂತೃಪ್ತಿಪಡಿಸಿ ಧ್ಯೇಯವನ್ನು ಸಾಧಿಸಿಕೊಳ್ಳುವಾ. ವೇದದಲ್ಲಿ ಯಜ್ಞಯಾಗಾದಿಗಳನ್ನು ವರ್ಣಿಸಿದ್ದು, ಅದರ ಗುಹ್ಯಾರ್ಥ ಆತ್ಮಾರ್ಪಣವಾಗಿದೆ. ಆತ್ಮಯಜ್ಞವಿದು. ನಮ್ಮಲ್ಲಿದ್ದುದನ್ನೆಲ್ಲ ಕೊಡುವಾ, ಆತ್ಮಾರ್ಪಣಮಾಡುವಾ. ಇದರಿಂದ ದೈವೀಸತ್ಯವು ಮತ್ತು ಜ್ಯೋತಿಯು ಹರಿದು ಬಂದು ಅಂತಃಸತ್ಯವು ನಮ್ಮಲ್ಲಿ ಮನೆಮಾಡಲಿ. ಸದ್ವಿಚಾರ, ಸತ್‌ಜ್ಞಾನ, ಸದಾಚಾರಗಳು ನಮ್ಮಲ್ಲಿ ಬೆಳೆದುಕೊಂಡು ಬರಲಿ, ಇದೇ ಋತಸ್ಯ ಪ್ರೇಷಾ, ಋತಸ್ಯ ಧೀತಿ. ಆ ಪರಮ ಸತ್ಯದಲ್ಲಿಯೆ ನಾವು ಆತ್ಮೋದ್ಧಾರಮಾಡಿಕೊಳ್ಳುವಾ. ನಮ್ಮ ಯಜ್ಞವು ಒಂದು ಯಾತ್ರೆ, ಮಾರ್ಗಕ್ರಮಣ, ಯುದ್ಧ. ದೇವರತ್ತ ನಮ್ಮ ಪ್ರಯಾಣವಾಗಿದೆ; ನಾವು ನಮ್ಮ ಅಂತಃಸ್ಥ ಮಾರ್ಗದರ್ಶನದಿಂದ ಮತ್ತು ಧುರೀಣನಾಗಿರುವ ಅಗ್ನಿಯ ಸಹಾಯದಿಂದ ಈ ಪ್ರವಾಸವನ್ನು ಸಾಗಿಸುವಾ. ಈ ಆಧ್ಯಾತ್ಮಿಕ ಜ್ಯೋತಿಯಿಂದ ನಮ್ಮಲ್ಲಿಯ ಮಾನವತ್ವವು ನಾಶವಾಗಿ ನಾವು ಅಮರರಾಗುವೆವು. ದೈವೀ ಸಂಪತ್ತನ್ನು ಪಡೆಯುವೆವು. ಋಗ್ವೇದದ ತತ್ತ್ವಜ್ಞಾನವು ವೇದಾಂತದ ಸಾರ ಸರ್ವಸ್ವವಾಗಿದೆ. ಅನಂತರ ರೂಢಿಯಲ್ಲಿ ಬಂದ ಯೋಗ ಮತ್ತು ಅದರಲ್ಲಿಯ ನಿಯಮ ನಿಬಂಧನೆಗಳಿಗೂ ವೇದದಲ್ಲಿಯ ನಿಗೂಢವಾದ ಆಚಾರ ಮತ್ತು ಶಿಸ್ತು ಕಾರಣವೆಂದು ಹೇಳಬಹುದು. ಕೊನೆಯದಾಗಿ 'ಏಕಂ ಸತ್' ಅಥವಾ 'ತದೇಕಂ' ಎಂಬ ಗೂಢವಾದ ಸತ್ಯವು ವೇದಪುರುಷನ ಉಪದೇಶದ ಬೀಜಮಂತ್ರವೆನಿಸುವದು. ಉಪನಿಷತ್ತುಗಳ ಮುಖ್ಯ ಬಿಂದುವೂ ಇದೇ ಆಗಿರುವದು. ದೇವರು, ಜ್ಯೋತಿ ಮತ್ತು ಸತ್ಯ ಶಕ್ತಿಗಳು ಒಬ್ಬನ ಶಕ್ತಿ ಸ್ವರೂಪವೆ ಆಗಿದ್ದು ಅವನ ಹೆಸರೇ ಆಗಿವೆ. ಪ್ರತಿಯೊಬ್ಬ ದೇವನು ವಿಶ್ವೇದೇವನಾಗಿದ್ದುದೆ ಆ ಸತ್ಯವಾಗಿದೆ; ತತ್ಸತ್ಯಂ. ಇದನ್ನೆ ನಾವು ಪಡೆಯಬೇಕಾಗಿದೆ. ಆದರೆ ವೇದದಲ್ಲಿ ಇದೆಲ್ಲ ಕೇವಲ ಪಡದೆಯ ಹಿಂದಿನ ಅರ್ಥವು. ಇದಕ್ಕೂ ಹೆಚ್ಚು ಹೆಚ್ಚು ಬೇಕಾದಷ್ಟು ಇದ್ದು, ಇದು ಅದರ ಸಾರ ಸರ್ವಸ್ವವೆಂದು ಮಾತ್ರ ಹೇಳಬಹುದಾಗಿದೆ.

— ಹ. ರಾ. ಪುರೋಹಿತ, ಹುಬ್ಬಳ್ಳಿ.

# ಉಪನಿಷತ್ತುಗಳು

## ‘ The Foundations of Indian Culture ’

### ಎಂಬ ಗ್ರಂಥದಲ್ಲಿಯ ೧೧ ನೆಯ ಪ್ರಕರಣ

ಶ್ರೀ ಅರವಿಂದರು

## ಉಪನಿಷತ್ತುಗಳ ಸಾಮಾನ್ಯ ಲಕ್ಷಣ

ಉಪನಿಷತ್ತುಗಳೆಂದರೆ ಭಾರತೀಯರ ವಿಚಾರಸೃಷ್ಟಿಯಲ್ಲಿಯ ಪರಮ ಶ್ರೇಷ್ಠ ಕೃತಿಗಳು. ಏಕೆಂದರೆ ಭಾರತದ ಪ್ರತಿಭೆಯು ತನ್ನ ಉಚ್ಚ ಉದಾತ್ತ ಅಂಶಗಳನ್ನೆಲ್ಲ ಈ ಉಪನಿಷದ್-ವಾಙ್ಮಯದಲ್ಲಿ ಪ್ರಕಟಗೊಳಿಸಿದೆ. ಭಾರತದ ಮಹೋನ್ನತ ಕಾವ್ಯ ಶಕ್ತಿ ಆವಿಷ್ಕೃತವಾದುದು ಇಲ್ಲಿಯೇ. ಇಲ್ಲಿ ವ್ಯಕ್ತವಾದ ವಾಗರ್ಥಗಳು ಸಾಮಾನ್ಯ ರೀತಿಯ ಒಂದು ಅತ್ಯುತ್ತಮ ಕಾವ್ಯದಂಥ ಸಾಹಿತ್ಯಪ್ರಕಾರದಲ್ಲಿ ಒಡಮೂಡಿ ಬಂದಿರದೆ, ಆತ್ಮಲೋಕದಿಂದ ಆವಿಷ್ಕಾರಗೊಂಡ ಮಂತ್ರದೃಷ್ಟಿಯ ಒಂದು ಮಹಾ ಪೂರವೇ ಪ್ರತ್ಯಕ್ಷವಾಗಿ ಗಂಭೀರವಾಗಿ ತುಂಬಿ ತುಂಬಿ ಹೊರಸೂಸಿ ಹರಿದಿದೆ ಯೆಂಬುದು ರಹಸ್ಯಪೂರ್ಣವಾದ ಸಂಗತಿಯಾಗಿದೆ. ಅಪರೂಪವೂ ಅಪೂರ್ವವೂ ಆದಂತಹ ಅದೊಂದು ಆಧ್ಯಾತ್ಮಿಕ ಮನೋವೃತ್ತಿಗೆ ಈ ಉಪನಿಷದ್-ವಾಙ್ಮಯವು ಸಾಕ್ಷಿಯಾಗಿ ನಿಂತಿದೆ. ಈ ಉಪನಿಷತ್ತುಗಳೆಂದರೆ ಅಪಾರವಾದ ಜ್ಯೋತಿ-ಪ್ರಭಾವ-ವೈಶಾಲ್ಯಗಳೊಂದಿಗೆ ಮಂತ್ರದ್ರಷ್ಟಾರರು ಅಂತಜ್ಞಾನದಿಂದ ಉಸುರಿದ ತತ್ತ್ವ ಜ್ಞಾನದ ಆಲೇಖಗಳಾಗಿವೆ. ಪದ್ಯದಲ್ಲಿಯೇ ಇರಲಿ ತಾಲಬದ್ಧ ಗದ್ಯದಲ್ಲಿಯೇ ಇರಲಿ, ಸಂತತವಾದ ಕೇವಲ ಪ್ರೇರಣೆಯಿಂದ ಉದ್ಭವಿಸಿದ ಆಧ್ಯಾತ್ಮಿಕ ಕವನಗಳು ಇವಾಗಿವೆ. ಪದಮೈತ್ರಿಯು ತಾನೆ ತಾನಾಗಿ ಇಲ್ಲಿ ಚೆಲ್ವರಿದಿದೆ; ಅಪೂರ್ವ ಛಂದ ಗಳಲ್ಲಿ ಅದ್ಭುತವಾದ ನಾದಮಾಧುರ್ಯವು ಇಲ್ಲಿ ಅಭಿವ್ಯಕ್ತವಾಗಿದೆ. ತತ್ತ್ವ ಜ್ಞಾನವೂ ಧರ್ಮವೂ ಕಾವ್ಯವೂ ಇಲ್ಲಿ ಮುಪ್ಪುರಿಗೊಂಡು ಹೊಸೆದು ಬಂದಿವೆ. ಏಕೆಂದರೆ ಇಲ್ಲಿಯ ಧರ್ಮವು ಕೇವಲ ಒಂದು ಪಂಥವಾಗಿ ವಿರಮಿಸಿಲ್ಲ ; ಧರ್ಮ ಬುದ್ಧಿಯ ಒಂದು ನೈತಿಕ ಆಕಾಂಕ್ಷೆಯಾಗಿ ಅದು ನಿಂತುಬಿಟ್ಟಿಲ್ಲ. ಪರಮಾತ್ಮನಿ ಗಾಗಿ, ಆತ್ಮತತ್ತ್ವಕ್ಕಾಗಿ, ನಮ್ಮಲ್ಲಿಯ ಸಮಗ್ರ ಪರಮ ಚೈತನ್ಯಕ್ಕಾಗಿ ಅನಂತ ಶೋಧ ನಡೆಯಬೇಕೆಂದು ಉಪನಿಷದ್ಧರ್ಮವು ಉದ್ಘೋಷಿಸುತ್ತದೆ. ಜ್ಯೋತಿರ್ಮಯ ಜ್ಞಾನದ ಆನಂದದ ಉದ್ಘೋಷವು ಈ ಧರ್ಮದಲ್ಲಿದೆ ; ಅಂತರಂಗದಲ್ಲಿ ತರಂಗತರಂಗವಾಗಿ ಉದಯಿಸುತ್ತ ಸಿದ್ಧಿಗೊಂಡ ಅನುಭವದ ಉದ್ಘೋಷವು ಈ

ಧರ್ಮದಲ್ಲಿದೆ. ಇಲ್ಲಿರುವ ತತ್ತ್ವಜ್ಞಾನವೆಂಬುದು ಸತ್ಯದ ಬಗ್ಗೆ ಬುದ್ಧಿಯು ನಡೆಸುವ ಅಸ್ಪಷ್ಟ ಊಹಾಪೋಹವಾಗಲಿ ಯುಕ್ತಿಯುಕ್ತ ತರ್ಕಜಾಲವಾಗಲಿ ಅಲ್ಲವೇ ಅಲ್ಲ; ಇಲ್ಲಿ ನಿರೂಪಿತವಾದ ಸತ್ಯವೆಂದರೆ ಅಂತಃಸ್ಥವಾದ ಮನವೂ ಆತ್ಮವೂ ಖಚಿತ ಶೋಧದಿಂದ ಪಡೆದ ಸಿದ್ಧಿಯು ಆನಂದದ ಉದ್ಗಾರವಾಗಿದೆ. ಇಲ್ಲಿರುವ ಕಾವ್ಯವೆಂದರೆ ಸಾಮಾನ್ಯ ಕ್ಷೇತ್ರದಲ್ಲಿ ವಿಹರಿಸುವ ಮನದ ವಾಡಿಕೆಯ ಫಲವಾಗಿರದೆ ಊರ್ಧ್ವಮುಖವಾಗಿರುವ ರಸಾಭಿಜ್ಞ ಮನದ ವಿಶೇಷ ಫಲವಾಗಿದೆ. ಅಪರೂಪ ವಾದ ಆಧ್ಯಾತ್ಮಿಕ ದರ್ಶನ ಹಾಗು ಆತ್ಮ-ಪರಮಾತ್ಮ-ವಿಶ್ವಸಂಬಂಧೀಯ ಮಹೋನ್ನತ ಪ್ರಬುದ್ಧ ಸತ್ಯ ಇವೆರಡರ ಅಗಾಧತೆ-ರಮಣೀಯತೆಗಳನ್ನು ಆ ರಸಾಭಿಜ್ಞ ಮನವೇ ವ್ಯಕ್ತಗೊಳಿಸಬಲ್ಲದು. ಇಲ್ಲಿ ವೈದಿಕ ಋಷಿಗಳು ಕೇವಲ ಸಹಜಸ್ಫೂರ್ತಿಯಿಂದಾಗಲಿ ಸುಪರಿಚಿತ ಮಾನಸಿಕ ಅನುಭೂತಿಯಿಂದಾಗಲಿ ಒಡ ನುಡಿದಿರುವದಿಲ್ಲ; ಅವರ ಅನುಭವವು ಆತ್ಮಸಾಕ್ಷಾತ್ಕಾರದ ತುರೀಯ ಅನುಭವ ವಾಗಿ ಪರಿಣಮಿಸಿದೆ. ಕಠೋಪನಿಷತ್ತಿನಲ್ಲಿ ಹೇಳಿರುವಂತೆ, ಆತ್ಮತತ್ತ್ವವು ತನ್ನದೇ ಆದ ಶರೀರವನ್ನು ತಾನಾಗಿ ಪ್ರಕಟಗೊಳಿಸುತ್ತ ತನ್ನ ಆವಿಷ್ಕರಣಕ್ಕೆ ತಕ್ಕುದಾದ ಮಂತ್ರವೊಂದನ್ನು ಕಂಡುಕೊಂಡು ಆ ಮಂತ್ರದ ಛಂದಗಳ ಸ್ಪಂದನವನ್ನು ಮನದ ನಿದರ್ಶನಕ್ಕೆ ತಂದುಕೊಡುತ್ತದೆ. ಈ ಛಂದಗಳೇ ಆಧ್ಯಾತ್ಮಿಕ ಶ್ರುತಿಯಾಗಿ ನಿನದಿಸುತ್ತ ಜೀವಾತ್ಮನನ್ನು ಜಾಗ್ರತಗೊಳಿಸಿ ಆತ್ಮಜ್ಞಾನದ ಪರಮಾನಂದ ಶಿಖರ ದಲ್ಲಿ ಅವನನ್ನು ಸಂತುಷ್ಟನನ್ನಾಗಿ ಇರಿಸಿ ಸಮಗ್ರತೆಯ ಸೌಧವನ್ನು ರಚಿಸಿ ತೋರಿಸುತ್ತವೆ.

## ತತ್ತ್ವಪ್ರಪಂಚದಲ್ಲಿ ಉಪನಿಷತ್ತುಗಳ ಪ್ರಭಾವ

ಉಪನಿಷತ್ತುಗಳ ಮೇಲಣ ಲಕ್ಷಣವನ್ನು ನಾವು ಎತ್ತಿ ತೋರಿಸುತ್ತ ಅದನ್ನು ಒತ್ತಿ ಹೇಳಬೇಕಾಗಿದೆ; ಏಕೆಂದರೆ ಈ ಮಾತನ್ನು ವಿದೇಶೀಯ ಅನುವಾದಕರು ಕಡೆಗಣಿಸಿಬಿಟ್ಟಿದ್ದಾರೆ. ಅವರ ದೃಷ್ಟಿ ಕೇವಲ ಬೌದ್ಧಿಕ ದೃಷ್ಟಿ. ಆತ್ಮಾನಂದ ಪರವಶರಾದ ಆ ಮಂತ್ರದ್ರಷ್ಟಾರ ಋಷಿಗಳ ಅಂತರ್ದೃಷ್ಟಿಯ ಪರಿಚಯವೇ ಈ ವಿದೇಶೀಯ ವಿದ್ವಾಂಸರಿಗೆ ಇಲ್ಲ. ನಮ್ಮ ಪ್ರಾಚೀನ ಕಾವ್ಯದ ಸತ್ತ್ವದ ಲಕ್ಷಣವೇ ಬೇರೆಯಾಗಿದೆ. ಅದು ವ್ಯವಸಾಯಾತ್ಮಕವಾದ ಬುದ್ಧಿಯ ಕ್ಷೇತ್ರವನ್ನು ಮೀರಿದ ಅಂತರ್ಜ್ಞಾನದ ಕ್ಷೇತ್ರಕ್ಕೆ ಸಂಬಂಧಿಸಿದುದಾಗಿದೆ. ಇಂಥ ಆರ್ಷ ಕಾವ್ಯದ ಮೂಲ-ಭೂತ ರಹಸ್ಯವನ್ನು ಅರಿಯಲು ಹವಣಿಸುವ ಇಂದಿನವರಿಗೂ ಆ ಆತ್ಮತತ್ತ್ವದ ಅರಿವು ಉಂಟಾಗದೆ ಉಳಿಯಲಾರದು. ಅಂತೆಯೇ ಈ ಉಪನಿಷತ್ ಮಂತ್ರಗಳು ತಾರ್ಕಿಕಬುದ್ಧಿಯ ಫಲಶ್ರುತಿಯಾಗಿರದೆ ಅಂತರ್‌ಜ್ಞಾನದ ಪರಮ ಶ್ರುತಿಗಳಾಗಿವೆ. ಇವು ಅಪೌರುಷೇಯ ಶ್ರುತಿವಾಕ್ಯಗಳೆಂದು ಪೂಜ್ಯವೆನಿಸಿವೆ. ಈ ಉಪನಿಷತ್ತುಗಳ ತಿರುಳಿನ ಬೆಲೆಯನ್ನು ಇಂದಿಗೂ ಇದಕ್ಕಿಂತ ಹೆಚ್ಚು ಬೆಳಿಸಿ ಹೇಳಬೇಕಾಗಿಲ್ಲ.

ಏಕೆಂದರೆ ಅತಿ ಸಮರ್ಥರೆನಿಸಿಕೊಳ್ಳುವ ಮನೀಷಿಗಳೂ ಇವುಗಳ ಬೆಲೆಯನ್ನು ಅರಿಯಲು ಅಸಮರ್ಥರಾದರೆಂದು ಒಂದು ವೇಳೆ ಭಾವಿಸಿದರೂ ವೇದಾಂತಶಾಸ್ತ್ರದ ಸಮಗ್ರ ಇತಿಹಾಸವೆ ಈ ವಿಷಯದಲ್ಲಿ ಮುಂದೆ ಬಂದು ಸಾಕ್ಷಿ ನುಡಿಯಲು ಸಮರ್ಥವಿದೆ. ಹಿಮಾಲಯದಲ್ಲಿ ಹುಟ್ಟಿ ಹರಿಯುವ ವಿಶಾಲವಾದ ನದಿನದಗಳಂತೆ ಈ ಉಪನಿಷತ್ತುಗಳ ಉಗಮಸ್ಥಾನದಿಂದಲೆ ನಾನಾ ವಿಧವಾದ ದರ್ಶನಗಳೂ ಧರ್ಮಪಂಥಗಳೂ ಸ್ಫೂರ್ತಿಗೊಂಡು ಹೊರಟಿವೆ. ಈ ಮಾತನ್ನು ಎಲ್ಲ ವಿವೇಕಿಗಳು ಒಪ್ಪಿಕೊಂಡಿದ್ದಾರೆ. ಈ ಪುರಾತನ ರಾಷ್ಟ್ರದಲ್ಲಿ ಕಾಲಕಾಲಕ್ಕೆ ಹುಟ್ಟಿದ ಹೊಸ ಹೊಸ ಜ್ಞಾನವಾಹಿನಿಗಳು ಭಾರತೀಯರ ಚಿತ್ತವನ್ನು ಫಲವತ್ತಾಗಿ ಮಾಡುತ್ತ ಬಂದಿವೆ. ಹೀಗೆ ಶತಕಾನುಶತಕಗಳ ದೀರ್ಘ ಕಾಲದಿಂದಲೂ ಉಪನಿಷತ್ತುಗಳಿಂದಲೇ ನವೋನವ ಜ್ಞಾನ–ಸ್ಫೂರ್ತಿಯು ಭಾರತೀಯ ಜನಜೀವನಕ್ಕೆ ದೊರೆತಿದೆ. ಇಂತು ಅನಂತಕಾಲದಿಂದಲೂ ಉಪನಿಷತ್ ಪ್ರೇರಣೆಯು ಸಂತತ ಧಾರೆಯಾಗಿ ಹರಿಯುತ್ತ ಬಂದಿದೆ. ಬೌದ್ಧಧರ್ಮವು ಬಹುಶಾಖೆಯಾಗಿ ಬೆಳೆದು ಹಬ್ಬಿದ್ದರೂ ಅದು ಉಪನಿಷದನುಭವದ ವಿವೇಕಪ್ರಧಾನವಾದ ಒಂದು ದೃಷ್ಟಿಕೋನವೇ ಹೊರತು ಬೇರೊಂದಲ್ಲ. ಸನಾತನ ಸತ್ಯದ ಒಂದಂಶವು ಯುಕ್ತಿವಾದಗಳಿಂದ ಕೂಡಿಕೊಂಡು ಖಚಿತ ಬೌದ್ಧಿಕ ವ್ಯಾಖ್ಯೆಯೊಂದಿಗೆ ಬೇರೊಂದು ರೂಪವನ್ನು ತಾಳಿತೇ ಹೊರತು ಅಂತಃಸತ್ತ್ವವೇನೂ ಬೇರೆಯಾಗಲಿಲ್ಲ. ಈ ಬೌದ್ಧ ಜ್ಞಾನವು ಅಖಂಡ ಏಶಿಯದಲ್ಲಿ ಪ್ರಸರಿಸಿತಲ್ಲದೆ ಪಶ್ಚಿಮ ದಿಕ್ಕಿನಿಂದ ಯುರೋಪವನ್ನೂ ಪ್ರವೇಶಿಸಿತು. ಪೈಥೆಗೊರಾಸ್ ಮತ್ತು ಪ್ಲೇಟೋ ಇವರ ವಿಚಾರಪ್ರಣಾಲಿಯಲ್ಲಿ ಉಪನಿಷತ್ತುಗಳೊಳಗಿನ ಕಲ್ಪನೆಗಳೇ ನವ ಸ್ವರೂಪವನ್ನು ತಾಳಿ ಬಂದಿವೆ. ಪಶ್ಚಿಮಗೋಲಾರ್ಧದ ತತ್ತ್ವಶಾಸ್ತ್ರದ ಮೇಲೆ ಪರಿಣಾಮಕಾರಿಯಾದ ಪ್ರಭಾವವನ್ನು ಬೀರಿದ ನವಪ್ಲೇಟೋವಾದದ ವಿಚಾರ ಕಾಂಡದಲ್ಲಿಯೂ ಆದಿಕ್ರೈಸ್ತರಲ್ಲಿಯ ಆಧ್ಯಾತ್ಮರಹಸ್ಯ–ಜ್ಞಾನವಾದದಲ್ಲಿಯೂ ಉಪನಿಷತ್ತುಗಳ ವರ್ಚಸ್ಸು ಅಚ್ಚೊತ್ತಿ ಮೂಡಿಬಂದಿದೆ. ಸೂಫೀತತ್ತ್ವಜ್ಞಾನವೆಂಬುದು ಉಪನಿಷದ್ವಿಚಾರಗಳನ್ನೇ ಹೊಸದೊಂದು ಧಾರ್ಮಿಕ ಭಾಷೆಯಲ್ಲಿ ಪುನರುಚ್ಚರಿಸಿದಂತಿದೆ. ಜರ್ಮನ್ ತತ್ತ್ವಶಾಸ್ತ್ರವಾದರೂ ಉಪನಿಷತ್ತುಗಳಿಗಿಂತ ಹೆಚ್ಚಿನ ಸತ್ತ್ವವನ್ನೇನೂ ತಾಳಿರದೆ ಮೂಲಭೂತ ತತ್ತ್ವಗಳನ್ನು ಬುದ್ಧಿ-ಪ್ರಧಾನವಾಗಿ ವಿಂಗಡಿಸಿ ವಿವೇಚಿಸಿದ್ದಾಗಿದೆ; ಆದರೆ ಅವೇ ಮೂಲಭೂತ ತತ್ತ್ವಗಳನ್ನು ಈ ಪ್ರಾಚೀನ ರಾಷ್ಟ್ರದ ಬೋಧೆಯಲ್ಲಿ ಹೆಚ್ಚು ಆಧ್ಯಾತ್ಮಿಕವಾಗಿ ಕಂಡು ಗುರುತಿಸಿದ್ದಾಗಿದೆ. ಆಧುನಿಕ ಜಗತ್ತು ಅಂದಿನ ಆ ಮೂಲಭೂತ ತತ್ತ್ವವಿಚಾರಗಳನ್ನು ದಿನದಿನವೂ ಹೆಚ್ಚು ಹೆಚ್ಚಾಗಿ ಜೀವಂತವಾಗಿಯೂ ಸೂಕ್ಷ್ಮವಾಗಿಯೂ ಗ್ರಹಿಸುತ್ತ ಅಳವಡಿಸಿಕೊಳ್ಳುತ್ತಿದೆ. ಇದರಿಂದ ಜಾಗತಿಕ ವೇದಾಂತ ದೃಷ್ಟಿಯಲ್ಲಿಯೂ ಧಾರ್ಮಿಕ ದೃಷ್ಟಿಯಲ್ಲಿಯೂ ಕ್ರಾಂತಿಯೊಂದು ನಿಶ್ಚಿತವಾಗಿ ಘಟಿಸೀತೆಂಬ ಲಕ್ಷಣಗಳು ಒಡೆದುಕಾಣುತ್ತಿವೆ. ಕೆಲವೆಡೆಗೆ ಅವು ಅಪ್ರತ್ಯಕ್ಷವಾಗಿ ಅನೇಕ

ಮಾರ್ಗಗಳಿಂದ ಜೀವನದಲ್ಲಿ ಇಳಿದು ಇಂಗತೊಡಗಿವೆ; ಇನ್ನು ಕೆಲವೆಡೆಗೆ ಪ್ರತ್ಯಕ್ಷ ಮತ್ತು ಪ್ರಸ್ಫುಟ ಮಾರ್ಗಗಳಿಂದ ನಿಧಾನವಾಗಿ ಪ್ರಭಾವ ಬೀರತೊಡಗಿವೆ. ತತ್ತ್ವಶಾಸ್ತ್ರದ ಯಾವುದೇ ಮುಖ್ಯವಿಚಾರವನ್ನು ತೆಗೆದುಕೊಂಡರೂ ಅದಕ್ಕೆ ಈ ಪ್ರಾಚೀನ ಗ್ರಂಥಗಳಲ್ಲಿ ಪ್ರಮಾಣವುಂಟು, ಬೀಜರೂಪವಾದ ಆಧಾರವುಂಟು; ಕೊನೆಗೆ ನಿರ್ದೇಶಕವಾದ ಸೂಚನೆಯಾದರೂ ದೊರೆಯುವದುಂಟು. ಇಂಥ ಆ ಪ್ರಾಚೀನ ವಿಚಾರಗಳಿಗೆ ಕೆಲವರು ಅಸಂಸ್ಕೃತರಿಗೆ ಸಹಜವಾದ ಅಪಕ್ವ ವಿಚಾರಗಳೆಂದೂ ಜಡಪ್ರಕೃತಿಗೆ ಚೇತನವನ್ನು ಆರೋಪಿಸುವ ಅಜ್ಞಾನಿಗಳ ಅವಿಚಾರಗಳೆಂದೂ ಕರೆದರು. ಆದರೆ ಇಂದಿನ ವಿಜ್ಞಾನವು ಕಂಡುಹಿಡಿದ ಬಹುಸಂಖ್ಯಾಕ ಸಿದ್ಧಾಂತಗಳು ಭಾರತೀಯ ಋಷಿಗಳು ತಮ್ಮ ಆಧ್ಯಾತ್ಮಿಕ ಸತ್ಯಜ್ಞಾನದೃಷ್ಟಿಯಿಂದ ವಿಶಾಲಾರ್ಥದಲ್ಲಿ ಕಂಡುಹಿಡಿದ ಜಡಪ್ರಕೃತಿವಿಷಯಕವಾದ ಆ ಸೂತ್ರಗಳಿಗೆ ಸರಿಯಾಗಿ ಸಮನ್ವಯಿಸುತ್ತವೆಯೆಂಬ ಮಾತು ಇಂದಿನ ಲೋಕಕ್ಕೆ ಸತತವಾಗಿ ತಿಳಿಯುತೊಡಗಿದೆ.

## ಉಪನಿಷತ್ತುಗಳೆಂದರೆ ಜ್ಞಾನನಿಧಿ

ಹೀಗಿದ್ದರೂ ಈ ಕೃತಿಗಳು ತತ್ತ್ವಜ್ಞಾನದ ಕೇವಲ ಬೌದ್ಧಿಕ ಊಹಾ-ಪೋಹಗಳಾಗಿಲ್ಲ. ಇಲ್ಲಿ ಕೇವಲ ತತ್ತ್ವಶಾಸ್ತ್ರದ ಪೃಥಕ್ಕರಣೆಯೂ ಕಂಡುಬರುವದಿಲ್ಲ; ಹಾಗಿದ್ದರೆ ಆ ಪೃಥಕ್ಕರಣೆ, ಕಲ್ಪನೆಗಳ ವ್ಯಾಖ್ಯೆಯನ್ನು ಕೊಡುವದಕ್ಕೂ ನಿಜವಾದ ಕಲ್ಪನೆಗಳಿಂದ ಅನ್ಯೈಜವಾದವುಗಳನ್ನು ಬೇರ್ಪಡಿಸುವದಕ್ಕೂ ಸತ್ಯವನ್ನು ತರ್ಕಬದ್ಧವಾಗಿ ವಾದಿಸುವದಕ್ಕೂ ಅಥವಾ ಯುಕ್ತಿವಾದಗಳಿಂದ ಮನಸ್ಸನ್ನು ಅದರ ಬೌದ್ಧಿಕ ಪ್ರಾಶಸ್ತ್ಯಗಳಿಗಾಗಿ ಸಮರ್ಥಿಸುವದಕ್ಕೂ ಪ್ರಯಾಸಪಡುತ್ತಿತ್ತು. ಹೀಗೆ ಪ್ರಯಾಸಪಡುತ್ತ ಆ ತಾತ್ತ್ವಿಕ ಪೃಥಕ್ಕರಣೆ ಆ ಈ ಬೌದ್ಧಿಕ ಕಲ್ಪನೆಗಳ ಬೆಳಕಿನಲ್ಲಿ ಅಸ್ತಿತ್ವಕ್ಕೆ ಏಕಮಾತ್ರ ಸಮಸ್ಯಾಪರಿಹಾರವನ್ನು ಮುಂದೊಡ್ಡಿ ಎಲ್ಲ ಸಂಗತಿಗಳನ್ನೂ ಅದೇ ದೃಷ್ಟಿಕೋನದಿಂದಲೂ ಅದೇ ನಿರ್ಣಾಯಕ ಯಥಾದರ್ಶನದಿಂದಲೂ ಚಿತ್ರಿಸಿಬಿಡಬಹುದಾಗಿತ್ತು. ಉಪನಿಷತ್ತುಗಳು ಈ ಬಗೆಯ ಗ್ರಂಥಗಳಾಗಿದ್ದರೆ ಅವು-ಗಳಲ್ಲಿ ಇಷ್ಟೊಂದು ಅಮರ ಸತ್ತ್ವವು ಹುದುಗಿಕೊಂಡಿರುತ್ತಿದ್ದಿಲ್ಲ, ಇಷ್ಟೊಂದು ಯಶಸ್ವಿಯಾದ ಪ್ರಭಾವವನ್ನು ಅವು ಬೀರುತ್ತಿದ್ದಿಲ್ಲ. ಇಂಥ ಪರಿಣಾಮಗಳನ್ನು ಅವು ಉಂಟುಮಾಡುತ್ತಿದ್ದಿಲ್ಲ, ಅಥವಾ ಅವುಗಳಲ್ಲಿ ಪ್ರತಿಪಾದಿತವಾದ ಸಿದ್ಧಾಂತಗಳು ಶೋಧದ ಇತರ ಕ್ಷೇತ್ರಗಳಲ್ಲಿ ಸ್ವತಂತ್ರವಾಗಿಯೂ ತದ್ವಿರುದ್ಧವಾದ ಪದ್ಧತಿಗಳಿಂದಲೂ ನಡಿಸಿದ ಪ್ರಯೋಗಗಳ ಮೂಲಕ ಪ್ರಮಾಣೀಭೂತವಾಗುತ್ತಿದ್ದಿಲ್ಲ. ಋಷಿಗಳು ಸತ್ಯವನ್ನು ಕೇವಲ ಚಿಂತಿಸದೆ ಅದನ್ನು ಅವರು ಕಂಡುಕೊಂಡರು, ಮಂತ್ರದ ಸಮರ್ಥ ಕವಚವನ್ನು ಅದಕ್ಕೆ ತೊಡಿಸಿ ಕಂಡ ರೂಪವನ್ನು ಪ್ರಕಟಪಡಿಸಿದರು;— ಆ ಕವಚವೋ ಅನಂತತೆಯನ್ನು ಆರಪಾರವಾಗಿ ಕಾಣಿಸಿಕೊಡು-

ವಂತಹದು; ಮತ್ತೇನೆಂದರೆ, ಅವರು ಆತ್ಮದ ಅಸ್ತಿತ್ವದ ಪ್ರಕಾಶದಲ್ಲಿ ಸಕಲ ಸಂಗತಿಗಳ ಆಳವನ್ನೂ ಹೊಕ್ಕು ನೋಡಿದರು, ಅನಂತತೆಯ ದಿವ್ಯ ಚಕ್ಷುಸ್ಸಿನಿಂದ ಅವೆಲ್ಲವನ್ನೂ ಕಂಡುಕೊಂಡರು.— ಅಂತೆಯೇ ಅವರ ವಾಣಿ ತ್ರಿಕಾಲಕ್ಕೂ ಸಜೀವ ವಾಗಿ ಅಮರವಾಗಿದೆ. ಆ ವಾಣಿಗೆ ಗರ್ಭಿತವಾದ ಅಪಾರ ಅರ್ಥವೊಂದುಂಟು; ಅನಿವಾರ್ಯ ವಾದ ಸಪ್ರಮಾಣತೆಯು ಅದಕ್ಕುಂಟು. ಸತ್ಯದ ಅನಾದಿತ್ವವೂ ಅನಂತತ್ವವೂ ಈ ವಾಣಿಯಲ್ಲಿ ಜೊತೆಯಾಗಿ ಉಂಟು. ನಮ್ಮೆಲ್ಲ ಶೋಧಮಾರ್ಗಗಳ ಕ್ರಮಣವು ಕೊನೆಗೊಂಡಾಗ ಈ ಸತ್ಯಕ್ಕೆಯೆ ನಾವು ಪುನಃ ಬಂದು ತಲುಪುತ್ತೇವೆ. ಮಾನವ ಕುಲವು ಮಹೋನ್ನತ ದರ್ಶನಗಳನ್ನು ಕಂಡ ಈ ಸಹಸ್ರಮನ್ವಂತರಗಳ ಕಾಲಾ ವಧಿಯಲ್ಲಿ ತನ್ನ ಸಹಸ್ರ ಮನಗಳ ಮುಖಾಂತರವಾಗಿ ಇದೇ ಸತ್ಯವನ್ನು ಸತತ ಕಾಣು ತ್ತಿದೆ. ಉಪನಿಷತ್ತುಗಳು ವೇದಗಳಿಗಿಂತಲೂ ಒಂದಿಷ್ಟು ಉನ್ನತತರವಾದ ತಿಳಿ ವಳಿಕೆಯ ತವರಾಗಿವೆ. ಈ ತಿಳಿವಳಿಕೆಗೆ ವೇದಾಂತವೆಂದು ಹೆಸರಿದ್ದು ಭಾರತೀಯರು ಪ್ರೌಢ ಅರ್ಥದಲ್ಲಿ ಬಳಸುವ 'ಜ್ಞಾನ'ವೆಂಬ ಪದವು ಇದಕ್ಕೆಯೆ ಅನ್ವಯಿಸುತ್ತದೆ. ಈ ಜ್ಞಾನವೆಂದರೆ ಕೇವಲ ಮನನವಲ್ಲ, ಕೇವಲ ಚಿಂತನವಲ್ಲ, ಪ್ರಬುದ್ಧ ಮನವು ಬೆಂಬತ್ತಿ ಗ್ರಹಿಸುವ ಸತ್ಯದ ಕೇವಲ ನಿದಿಧ್ಯಾಸವೂ ಅಲ್ಲ; ಆದರೆ ಆತ್ಮಶಕ್ತಿಯಿಂದಲೆ ಸತ್ಯವನ್ನು ಕಂಡುಕೊಂಡು, ಅಂತಃಸತ್ತ್ವದ ಪ್ರಭಾವದಿಂದ ಅದರಲ್ಲಿ ಸಮಗ್ರವಾಗಿ ಇದ್ದುಬಿಟ್ಟು, ಜ್ಞೇಯದೊಡನೆ ಒಂದು ಬಗೆಯ ತಾದಾತ್ಮ್ಯ ಹೊಂದಿ, ಆಧ್ಯಾತ್ಮಿಕ ರೀತಿಯಿಂದ ಅದನ್ನು ವಶಪಡಿಸಿಕೊಳ್ಳುವದೇ ಆ 'ಜ್ಞಾನ' ವೆಂದೆನಿಸಿದೆ. ಆತ್ಮದ ಸಮಗ್ರಜ್ಞಾನದಿಂದಲೆ ಈ ಬಗೆಯ ಸಾಕ್ಷಾತ್‌ಜ್ಞಾನವು ಸಂಪೂರ್ಣವಾಗಬಲ್ಲದು. ವೇದಾಂತದ ಋಷಿಗಳು ಅರಿತುಕೊಂಡುದು ಆತ್ಮವನ್ನೆ, ಇದ್ದುಬಿಟ್ಟುದು ಆತ್ಮ ದಲ್ಲಿಯೆ, ತಾದಾತ್ಮ್ಯದಿಂದ ಸಮರಸವಾದುದೂ ಆತ್ಮದೊಡನೆಯೆ. ಈ ಬಗೆಯ ಸಾಧನೆಯಿಂದಲೆ ಅವರು ಸುಲಭವಾಗಿ ಒಂದು ಮಾತನ್ನು ಅರಿತುಕೊಂಡರು; ಅದಾವುದೆಂದರೆ ನಮ್ಮಲ್ಲಿಯ ಅಂತರಾತ್ಮನೂ ವಿಶ್ವಾಂತರಂಗದಲ್ಲಿಯ ವಿಶ್ವಾತ್ಮನೂ ಆ ವಿಶ್ವಾತೀತ ಬ್ರಹ್ಮತತ್ತ್ವದಲ್ಲಿಯ ಪರಮಾತ್ಮನೂ ಎಲ್ಲವೂ ಒಂದೇ ಎಂಬುದು. ಈ ಏಕತ್ವದ ಒಂದು ಸಮಗ್ರ ದರ್ಶನದಲ್ಲಿ ಅವರು ಎಲ್ಲವನ್ನು ಕಂಡುಕೊಂಡರು, ಎಲ್ಲವನ್ನು ಅನುಭವಿಸಿದರು, ವಿಶ್ವದಲ್ಲಿಯ ಸಕಲ ವಸ್ತುಗಳ ಅಂತಃಸತ್ಯದಲ್ಲಿ ಇದ್ದು ನೋಡಿದರು. ಸಮಷ್ಟಿಯಲ್ಲಿಯೂ ವ್ಯಷ್ಟಿಯ ಅಂತರಂಗ ಬಹಿರಂಗಗಳಲ್ಲಿಯೂ ಇದ್ದ ಸತ್ಯವನ್ನು ಯೋಗಬಲದಿಂದ ಅರಿತರು.

ಉಪನಿಷತ್ತುಗಳೆಂದರೆ ಆತ್ಮಜ್ಞಾನದ, ವಿಶ್ವಜ್ಞಾನದ, ಪರಮಾತ್ಮಜ್ಞಾನದ ಮಹಾಸೂಕ್ತಗಳಾಗಿವೆ. ಇವುಗಳಲ್ಲಿ ಸಮೃದ್ಧವಾಗಿರುವ ವೇದಾಂತದ ಮಹಾಸೂತ್ರ ಗಳೆಂದರೆ ಕೇವಲ ಬೌದ್ಧಿಕ ಅಮೂರ್ತ ಸಿದ್ಧಾಂತಗಳಲ್ಲ; ಇಂಥ ಸಿದ್ಧಾಂತಗಳು ಮನವನ್ನು ಒಂದಿಷ್ಟು ಬೆಳಗಿಸಿದರೂ ಆತ್ಮನನ್ನು ಜಾಗೃತಗೊಳಿಸಿ ಊರ್ಧ್ವಮುಖಿ ಯನ್ನಾಗಿ ಮಾಡಲಾರವು. ಮಹಾಸೂತ್ರಗಳಾದರೋ ಅಂತರ್ಜ್ಞಾನದ ಶ್ರುತಿ

ಪ್ರಮಾಣವಾದ ಭಾವೋತ್ಸಾಹಗಳೂ ಜ್ಯೋತಿಗಳೂ ಆಗಿವೆ. 'ಏಕಂ ಸತ್' ಎಂಬುದನ್ನು ಮುಟ್ಟಿ, ಕಂಡು ನುಡಿದ ಒಡನುಡಿಗಳಾಗಿವೆ. ವಿಶ್ವಾತೀತನೂ ಪರಮಾತ್ಮನೂ ವಿಶ್ವಾತ್ಮನೂ ಆಗಿರುವ ಪುರುಷೋತ್ತಮನ ಸಂಬಂಧವು ಈ ಪ್ರಕಟ ವಿಶ್ವದಲ್ಲಿಯ ವಸ್ತುಪ್ರಾಣಿಗಳೊಡನೆ ಹೇಗಿರುವದೆಂಬದನ್ನು ಇಲ್ಲಿ ಉಚ್ಚರಿಸಲಾಗಿದೆ. ಇವು ಶ್ರುತಿಘೋಷಗಳಾಗಿದ್ದು ಎಲ್ಲ ಸೂಕ್ತಗಳಂತೆ ಇವು ಧಾರ್ಮಿಕ ಅಭೀಪ್ಸೆಯನ್ನೂ ಆನಂದದ ಭಾವಸಮಾಧಿಯನ್ನೂ ವ್ಯಕ್ತಮಾಡಿ ತೋರಿಸುತ್ತವೆ. ಇವು ಕೆಳ ಮಟ್ಟದ ಧರ್ಮಪಂಥದ ಸಂಕುಚಿತ ನಿಕಟ ಭಾವೋದ್ಗಾರಗಳಲ್ಲ. ಇವು ಅತ್ಯುನ್ನತವಾಗಿದ್ದು ಭಕ್ತಿಯ ಎಲ್ಲ ವಿಶಿಷ್ಟ ರೂಪಗಳನ್ನು ಮಿಕ್ಕಿ ನಿಂತ ವಿಶ್ವಸಾಮಾನ್ಯವಾದ ಭಗವದಾನಂದವನ್ನು ಉಸುರುತ್ತವೆ. ಈ ಆನಂದವು ಸ್ವಯಂಭು ವಿಶ್ವಾತ್ಮನ ಸಾಮೀಪ್ಯ–ತಾದಾತ್ಮ್ಯಗಳಿಂದ ನಮಗೆ ಲಭಿಸುವದು. ಮುಖ್ಯವಾಗಿ ಅಂತರ್-ದೃಷ್ಟಿಗೆ ಈ ಮಂತ್ರಸಿದ್ಧಾಂತಗಳು ಸಂಬಂಧಿಸಿದ್ದು ಮಾನವನ ಬಾಹ್ಯ ಕೃತಿಗಳಿಗೆ ಇವುಗಳ ಸಂಬಂಧವಿರದಿದ್ದರೂ ಬೌದ್ಧಧರ್ಮದ ಹಾಗೂ ತರುವಾಯದ ಹಿಂದೂ ಧರ್ಮದ ಅತ್ಯುಚ್ಚ ನೀತಿಧರ್ಮವೆಲ್ಲ ಉಪನಿಷತ್ತುಗಳು ಘೋಷಿಸಿದ ಸತ್ಯದ ಸತ್ತ್ವವೇ ಆಗಿದೆ. ಪರಮಾತ್ಮನೊಡನೆಯೂ ಸರ್ವ ಜೀವರಾಶಿಯೊಡನೆಯೂ ಉಪನಿಷತ್ತುಗಳು ತಾದಾತ್ಮ್ಯಹೊಂದಿ ಆ ತಾದಾತ್ಮ್ಯವನ್ನವಲಂಬಿಸಿದ ಆಧ್ಯಾತ್ಮಿಕ ಕ್ರಿಯೆಯನ್ನು ಅವು ಸಾರುವವು; ಇಂಥ ಕ್ರಿಯೆಯು ಯಾವ ನೀತಿಬೋಧೆಗೂ ಮನೋನಿಯತ ಶೀಲಕ್ಕೂ ಮಿಗಿಲು. ಆದ್ದರಿಂದ ವೈದಿಕ ದೇವತೆಗಳ ಯುಗಧರ್ಮವು ಹಳೆಮಾತಾದ ಮೇಲೆಯೂ ಉಪನಿಷತ್ತುಗಳ ಪ್ರಾತಿಭ ವರ್ಚಸ್ಸು ಜೀವಂತವಾಗಿ ಉಳಿದು ತರುವಾಯದ ಭಕ್ತಿಪಂಥಗಳಿಗೆ ಪ್ರೇರಣೆಯನ್ನಿತ್ತಿತು. ಮತ್ತು ಭಾರತವು ಅಂದಿನಿಂದ ಇಂದಿನವರೆಗೂ ಧರ್ಮದ ಯಾವ ಕಲ್ಪನೆಯನ್ನು ಸತತವಾಗಿ ಎತ್ತಿ ಹಿಡಿದಿದೆಯೋ ಅದಕ್ಕೆಲ್ಲ ಉಪನಿಷತ್ತುಗಳೇ ಉಗಮಸ್ಥಾನ.

## ಉಪನಿಷತ್ತುಗಳ ರಚನಾವೈಶಿಷ್ಟ್ಯ

ಉಪನಿಷತ್ತುಗಳೆಂದರೆ ಅಂತರ್ಜ್ಞಾನದ ಮತ್ತು ಅಂತರ್ದೃಷ್ಟಿಯ ಕೃತಿಗಳು. ಇದು ಅವುಗಳ ಮುಖ್ಯ ಲಕ್ಷಣವು. ಅವುಗಳ ಸಾರ, ಬಂಧ, ಛಂದ, ರೂಪಕತೆ, ಗತಿ ಇವೆಲ್ಲವೂ ಈ ಮುಖ್ಯ ಲಕ್ಷಣದ ಫಲಗಳಾಗಿವೆ. ಇಲ್ಲಿರುವ ಸತ್ಯಗಳು ಸರ್ವಗ್ರಾಹಿಯಾದ ಪರಮ ಸತ್ಯಗಳು; ಇಲ್ಲಿರುವ ದರ್ಶನಗಳು ಏಕತ್ವದ, ಆತ್ಮತತ್ತ್ವದ ವಿಶ್ವಾತ್ಮನೂ ಪರಮಾತ್ಮನೂ ಆದ ಬ್ರಹ್ಮತತ್ತ್ವದ ದರ್ಶನಗಳು; ಈ ದರ್ಶನಗಳು ಸಂಕ್ಷಿಪ್ತ ಅದ್ಭುತ ವಾಕ್ಯಗಳಲ್ಲಿ ಮೂಡಿ ಬಂದಿವೆ. ಈ ವಾಕ್ಯಗಳು ಆ ಸತ್ಯದರ್ಶನಗಳನ್ನು ಆತ್ಮಚಕ್ಷುಸ್ಸಿನ ಮುಂದೆ ಒಮ್ಮೆಲೆ ಎದ್ದು ನಿಲ್ಲಿಸುತ್ತ ಆತ್ಮದ ಅಭೀಪ್ಸೆ-ಅನುಭವಗಳಿಗೆ ಅವು ನಿಜವೆಂದು ಪ್ರಭುವಾಣಿಯಿಂದ ತಿಳಿಸುವವು. ಋಷಿಗಳು ತಮ್ಮ ಮಂತ್ರಗಳಲ್ಲಿಯೆ ಕಾವ್ಯಶಕ್ತಿಯನ್ನು ತುಂಬಿದ್ದು ಅವುಗಳಲ್ಲಿ ದಾರ್ಶನಿಕ ಶಕ್ತಿಯೂ

ಚಿತ್ತದ ವರ್ಣವನ್ನೇ ಚಿತ್ರಿಸುವ ಧ್ವನಿಶಕ್ತಿಯೂ ವಿಪುಲವಾಗಿವೆ. ಅಂತೆಯೇ ಸಾಂತ ವಾದ ರೂಪಕವೊಂದರಲ್ಲಿ ಅನಂತವನ್ನು ಪ್ರಕಟಿಸುವ ಸಾಮರ್ಥ್ಯವು ಈ ಮಂತ್ರ ಗಳಲ್ಲಿ ಉಂಟು. ಏಕತ್ವವು ಇಲ್ಲಿ ಪ್ರಕಟಗೊಂಡಿದೆ; ಅದರ ಅನೇಕ ಪಾರ್ಶ್ವಗಳೂ ಕಣ್ಣಮುಂದೆ ಬಂದು ನಿಲ್ಲುತ್ತವೆ. ಪ್ರತಿಪಾರ್ಶ್ವಕ್ಕೂ ಸಮಗ್ರವಾದ ರಹಸ್ಯಾರ್ಥ ವನ್ನು ಸಮೃದ್ಧ ಪದಪ್ರಯೋಗದಿಂದ ಕಲ್ಪಿಸಿಕೊಡಲಾಗಿದೆ. ಪ್ರತಿ ಪದವೂ ಸಮಸ್ತ ವಾಕ್ಯವೂ ಬೆಳಕು ಬೀರುತ್ತ ಔಚಿತ್ಯದಿಂದ ಅರ್ಥ ಪೂರ್ಣವಾಗಿದೆ. ಹೀಗಿರುವದ ರಿಂದ ಪ್ರತಿಯೊಂದು ಪಾರ್ಶ್ವಕ್ಕೆ ಇರುವ ಸ್ಥಾನವೂ ಉಳಿದವುಗಳೊಡನೆ ಅದಕ್ಕಿದ್ದ ಸಂಬಂಧವೂ ಸಹಜ ಶೋಧವೋ ಎಂಬಂತೆ ತಿಳಿದು ಬರುವವು. ತತ್ತ್ವಶಾಸ್ತ್ರದ ವಿಶಾ ಲತಮವಾದ ಸತ್ಯಗಳನ್ನೂ ಗುಹ್ಯಾದ್ಗುಹ್ಯತರವಾದ ಸೂಕ್ಷ್ಮತಮ ಯೋಗಾನುಭವ ಗಳನ್ನೂ ಪ್ರೇರಣೆಯ ಗತಿಯಲ್ಲಿಯೇ ಧಾರಣಮಾಡಿ ಅವುಗಳನ್ನು ವ್ಯಕ್ತಗೊಳಿಸಲಾ ಗಿದೆ. ಅವುಗಳ ಅಭಿವ್ಯಕ್ತಿಯಲ್ಲಿ ಆ ಸತ್ಯಗಳನ್ನೂ ಆ ಅನುಭವಗಳನ್ನೂ ನೋಡುವ ಮನಕ್ಕೆ ತಕ್ಕಂತೆ ಹವಣಾಗಿ ಮಾಡಲಾಗಿದೆ; ಹಾಗೂ ಶೋಧಿಸುವ ಆತ್ಮಕ್ಕೆ ತಕ್ಕಂತೆ ಅನಂತವಾದ ಸೂಚ್ಯಾರ್ಥವನ್ನು ಅಲ್ಲಿ ಹುದುಗಿಸಲಾಗಿದೆ. ಇಲ್ಲಿ ಪ್ರತ್ಯೇಕವೆನಿಸುವ ಪದಸಮುಚ್ಚಯಗಳಿವೆ, ಸ್ವತಂತ್ರವೆನಿಸುವ ದ್ವಿಪದಿಗಳಿವೆ, ಸಂಕ್ಷಿಪ್ತವೆನಿಸುವ ಅವ ತರಣಿಕೆಗಳಿವೆ. ಇವೆಲ್ಲವುಗಳನ್ನು ಒಂದೊಂದಾಗಿ ತೆಗೆದುಕೊಂಡರೂ ಪ್ರತಿಯೊಂದ ರಲ್ಲಿ ಅಪಾರ ತತ್ತ್ವಜ್ಞಾನದ ಸಾರವು ಅಡಕವಾಗಿದೆ. ಹೀಗಿದ್ದರೂ ಪ್ರತಿಯೊಂದನ್ನು ಅನಂತ ಆತ್ಮಜ್ಞಾನದ ಒಂದು ಪಾರ್ಶ್ವವೋ, ಒಂದು ಮುಖವೋ, ಒಂದು ಭಾಗವೋ ಎಂಬಂತೆ ಚೆಲ್ಲಿ ಎಸೆಯಲಾಗಿದೆ. ಇಲ್ಲಿರುವ ಸಮಸ್ತವೂ ಪೂರ್ಣವಾಗಿ ತುಂಬಿ ತುಂಬಿ ಹೇಳಲಾದ ಅಪಾರ ತತ್ತ್ವದಂತೆ ಇದ್ದರೂ ಅಷ್ಟೇ ಸುಲಭವಾಗಿ ಸಂಕ್ಷಿಪ್ತವಾಗಿ ಹೇಳಿದ ಸಾರಭೂತವಾದ ಬೀಜದಂತೆಯೂ ಇದೆ. ಹೀಗಿದ್ದರೂ ಅಪ್ರಮೇಯವಾದ ಪರಿಪೂರ್ಣತೆಯು ಇಲ್ಲಿ ಸದಾಕಾಲದಲ್ಲಿಯೂ ಶೋಭಿಸುತ್ತಿದೆ. ಈ ಪ್ರಕಾರದ ಕಲ್ಪ ನೆಯು ಸಾವಧಾನದಿಂದಲೂ ದಕ್ಷತೆಯಿಂದಲೂ ವಿಸ್ತಾರಗೊಳ್ಳುತ್ತ ಸಾಗುವ ತರ್ಕ ಬದ್ಧ ಯುಕ್ತಿವಾದವನ್ನು ಅನುಸರಿಸಲಾರದು. ಇಲ್ಲಿರುವ ಪ್ರತಿಯೊಂದು ಅವತರಣಿಕೆ, ವಾಕ್ಯ, ದ್ವಿಪದಿ, ಚರಣ, ಚರಣಾರ್ಧ ಸಹ– ಮುಗಿದು ಹೊಸದೊಂದು ಪ್ರಾರಂಭ ವಾಗುವ ಮುನ್ನ, ನಡುವೆ ಒಂದಿಷ್ಟು ಯತಿಸ್ಥಾನವು ಬಂದು ವ್ಯಕ್ತವಾಗದ ಒಂದು ಕಲ್ಪನೆಯನ್ನು ಗರ್ಭೀಕರಿಸಿಕೊಂಡು ಇರುವದುಂಟು. ಇವೆರಡರ ನಡುವೆ ಮೌನವು ಪ್ರತಿಧ್ವನಿಗೊಳ್ಳುವದುಂಟು. ಆ ಕಲ್ಪನೆಯು ಸಮಗ್ರವಾಗಿ ಸೂಚಿತವಾಗುತ್ತಲೆ ಮುಂದುವರಿಸಲ್ಪಟ್ಟರೂ ಆ ಹೆಜ್ಜೆಯಲ್ಲಿಯೆ ಅದು ಅಡಕವಾಗಿರುವದುಂಟು. ಆದರೆ ಮನಕ್ಕೂ ಒಂದಿಷ್ಟು ಮಧ್ಯಂತರದಲ್ಲಿ ಮನನಕ್ಕೆ ಸ್ವಲ್ಪ ಅವಕಾಶ ದೊರೆಯುವದ ರಿಂದ ಆ ಮನಕ್ಕೆ ಅದು ಲಾಭವೇ ಸರಿ. ಇಂಥ ಮಧ್ಯಂತರದ ಅರ್ಥಗರ್ಭಿತ ಯತಿಸ್ಥಾನಗಳು ವಿಶಾಲ ಅವಧಿಯವೂ ಉಂಟು. ಕಲ್ಪನೆಯು ಇಂಥ ಒಂದೊಂದು ಹೆಜ್ಜೆಯೂ, ಒಂದು ಬಂಡೆಗಲ್ಲಿನಿಂದ ಇನ್ನೊಂದು ಬಂಡೆಗಲ್ಲಿಗೆ ಜೀವುಗಾಲನ್ನಿ

ಡುತ್ತ ಅನಂತಸಾಗರವನ್ನು ದಾಟುವ ದೈತ್ಯನೊಬ್ಬನ ಅತಿ ದೊಡ್ಡ ಹೆಜ್ಜೆಯನ್ನು ಹೋಲುವದು. ಪ್ರತಿಯೊಂದು ಉಪನಿಷತ್ತು ಪೂರ್ಣ ಕಲಾಕೃತಿಯಾಗಿದ್ದು ಅದರ ರಚನೆಯು ಸರ್ವಾಂಗಸುಂದರವಾಗಿದೆ; ಕೃತಿಯ ಅಂಗಾಂಗಗಳಲ್ಲಿ ಸರ್ವವ್ಯಾಪಕ ವಾದ ಸಮರಸತೆಯು ಸಂಬಂಧವಿದೆ. ಇಂಥ ಕೃತಿಯನ್ನು ರಚಿಸಿದ ಮನವೋ ಸತ್ಯದ ಮೊತ್ತಗಳನ್ನು ಒಮ್ಮೆಲೆ ಕಂಡುಕೊಂಡು ಮುಂದೆ ಸ್ವಲ್ಪ ತಡೆದು ನಿಂತು ಅಭಿವ್ಯಕ್ತಿ ಗಾಗಿ ಅರ್ಥಗರ್ಭಿತ ಮೌನದೊಳಗಿಂದ ಹಿತಮಿತವಾದಂಥ ಮಾಂತ್ರಿಕ ಪದಗಳ-ನ್ನಾಯ್ದುಕೊಳ್ಳುವ ಹವಣನ್ನರಿತ ಮನವು ಅದಾಗಿದೆ. ಪದ್ಯವೆ ಆಗಲಿ ತಾಲಬದ್ಧ ಗದ್ಯವೆ ಆಗಲಿ ಅದರ ಛಂದೋಬಂಧವು ಅಲ್ಲಿಯ ಕಲ್ಪನೆಗಳ ಮತ್ತು ಪದಗಳ ಶಿಲ್ಪಕ್ಕೆ ಅನುಗುಣವಾಗಿರುತ್ತದೆ. ಉಪನಿಷತ್ತುಗಳ ಪ್ರತಿಯೊಂದು ಛಂದದಲ್ಲಿ ಸಮ ವಾಗಿ ಕೊರೆದ ನಾಲ್ಕು ಚರಣಾರ್ಧಗಳಿರುತ್ತವೆ. ಎಲ್ಲ ಚರಣಗಳು ಬಹುಶಃ ಸ್ವಯಂ-ಪೂರ್ಣವಾಗಿದ್ದು ಪ್ರತಿಯೋಂದರಲ್ಲಿ ಅರ್ಥವು ಅಷ್ಟಷ್ಟಕ್ಕೆ ಪೂರ್ಣವಾಗಿರುವದುಂಟು. ಚರಣಾರ್ಧಕ್ಕೆ ಒಂದು ಕಲ್ಪನೆಯಂತೆ ಒಂದು ಚರಣದಲ್ಲಿ ಎರಡು ಕಲ್ಪನೆಗಳಾಗಲಿ ಒಂದೇ ಕಲ್ಪನೆಯ ಎರಡು ಸ್ಪಷ್ಟ ಭಾಗಗಳಾಗಲಿ ಇರುವದುಂಟು. ಈ ಎರಡೆರಡು ಕಲ್ಪನೆಗಳಲ್ಲಿಯೂ ಕಲ್ಪನಾಭಾಗಗಳಲ್ಲಿಯೂ ಅವಿಭಾಜ್ಯ ಸಂಬಂಧವಿದ್ದು ಅವು ಪರ ಸ್ಪರ ಪೂರಕವಾಗಿರುತ್ತವೆ. ನಾದದ ಗತಿಯು ಯಥೋಚಿತ ತತ್ತ್ವವೊಂದಕ್ಕೆ ಅನು ಗುಣವಾಗಿದ್ದು ಪ್ರತಿ ಹೆಜ್ಜೆಯೂ ಕಿರಿದೆ ಆಗಿದ್ದು ಸ್ಪಷ್ಟ ಯತಿಸ್ಥಾನದಿಂದ ಕೂಡಿ ರುವದುಂಟು. ಈ ಯತಿಸ್ಥಾನಗಳ ವಿರಾಮಸ್ಥಳದಲ್ಲಿ ಪ್ರತಿಧ್ವನಿಗೊಳ್ಳುವ ತಾಲ ಗಳಿದ್ದು ಅವು ಅಂತರಂಗದಲ್ಲಿ ನಾದತರಂಗಗಳನ್ನು ದೀರ್ಘಕಾಲದ ವರೆಗೆ ಎಬ್ಬಿಸು ವವು. ಈ ನಾದದ ಪ್ರತಿ ತರಂಗವೂ ಮಹಾಸಾಗರದ ಸಮಗ್ರ ಧ್ವನಿ-ಪ್ರತಿಧ್ವನಿ ಗಳನ್ನು ಕರೆದೊಯ್ಯುವ ಅನಂತತೆಯ ತರಂಗವೆಂಬಂತೆ ಕೇಳಿಬರುತ್ತದೆ. ಇಂಥ ಕಾವ್ಯವನ್ನು, ಇಂಥ ಮಂತ್ರವನ್ನು, ಇಂಥ ಆತ್ಮಸ್ಪಂದನವನ್ನು ಹಿಂದೆ ಯಾರೂ ಬರೆಯಲಿಲ್ಲ, ಮುಂದೆ ಯಾರೂ ಬರೆಯಲಿಕ್ಕಿಲ್ಲ.

## ಉಪನಿಷತ್ತುಗಳ ರೂಪಕತೆ

ಉಪನಿಷತ್ತುಗಳ ರೂಪಕತೆಯು ಬಹುಮಟ್ಟಿಗೆ ವೇದದ ರೂಪಕತೆಯ ಪ್ರಕಾರ ದಿಂದಲೆ ಬೆಳೆದು ಬಂದಿರುತ್ತದೆ. ನೇರವಾಗಿ ಜ್ಞಾನಪ್ರಕಾಶವನ್ನು ಬೀರುವ ಅಸಂದಿಗ್ಧ ಸ್ಪಷ್ಟರೂಪಕವನ್ನು ಸಾಮಾನ್ಯವಾಗಿ ಉಪನಿಷತ್ತುಗಳು ಮೆಚ್ಚುವವಾ-ದರೂ ಅವು ಹಿಂದಿನ ಸಂಕೇತಗಳನ್ನೆ ಇದ್ದಕಿದ್ದಂತೆ ಬಳಸುವದುಂಟು. ಈ ಸಂಕೇತ ಗಳು ಭಾವದಲ್ಲಿಯೂ ಅಷ್ಟೊಂದು ತಾಂತ್ರಿಕವಲ್ಲದ ಪದ್ಧತಿಯಲ್ಲಿಯೂ ವೇದಗಳ ಮೂಲ ಸಂಕೇತಗಳನ್ನೆ ಪೂರ್ಣವಾಗಿ ಹೋಲುತ್ತವೆ. ಈ ಅಂಶವೇ ನಮ್ಮ ಇಂದಿನ ವಿಚಾರಪದ್ಧತಿಗೆ ಅರ್ಥವಾಗದ ಮಾತಾಗಿದ್ದು ಪಶ್ಚಿಮದ ಕೆಲವು ವಿದ್ವಾಂಸರನ್ನು ದಿಗಿಲುಗೊಳಿಸಿದೆ. ಅಂತೆಯೆ ಅವರು 'ಈ ವೇದೋಪನಿಷತ್ತು

ಗಳಲ್ಲಿ ವೇದಾಂತದ ಉಚ್ಚತಮ ಊಹಾಪೋಹಗಳ ಜೊತೆಗೆ ಮಾನವಕುಲದ ಶಿಶುಮನದ ಅಚಾತುರ್ಯದ ಉಕ್ತಿಗಳೂ ಬೆರೆತಿವೆ'ಯೆಂದು ಕೂಗಿಕೊಳ್ಳುವದುಂಟು. ಉಪನಿಷತ್ಕಾರರು ವೇದಮಾರ್ಗವನ್ನು ಒಮ್ಮೆಲೆ ಬಿಟ್ಟು ಬೇರೆ ಮಾರ್ಗವನ್ನು ಕ್ರಮಿಸಿದ ಕ್ರಾಂತಿಕಾರರೇನೂ ಅಲ್ಲ. ವೇದಗಳಲ್ಲಿಯ ವಿಚಾರಪ್ರಣಾಲಿಯನ್ನೆ ಇಲ್ಲಿ ಮುಂದುವರಿಸಲಾಗಿದೆ. ಅದೇ ಮನೋವೃತ್ತಿ, ಅವೇ ಮೂಲಭೂತ ಕಲ್ಪನೆಗಳು ಇಲ್ಲಿಯೂ ಒಡೆದು ಕಾಣುತ್ತವೆ. ಜೊತೆ ಜೊತೆಗೆ ವಿಶಾಲತರವಾದ ರೂಪಪರಿವರ್ತನೆಯೂ ಉಪನಿಷತ್ತುಗಳಲ್ಲಿ ತೋರಿಬರುತ್ತದೆ. ಹೇಗೆಂದರೆ, ವೇದದಲ್ಲಿ ಗೂಢ ಸಂಕೇತಗಳ ರೂಪದಲ್ಲಿ ರಹಸ್ಯಪೂರ್ಣವಾಗಿ ಹುದುಗಿಸಿಟ್ಟ ಅರ್ಥವನ್ನು ಇಲ್ಲಿ ವ್ಯಕ್ತವಾಗಿ ಹೇಳಲಾಗುತ್ತದೆ. ಹೀಗೆ ಮೊದಲಿನ ಪರಂಪರೆ ಮುಂದುವರಿದುದಲ್ಲದೆ ವಿಶಾಲವೂ ಆಗಿದೆ. ವೇದ-ಬ್ರಾಹ್ಮಣಗಳಲ್ಲಿಯ ರೂಪಕಗಳನ್ನೂ ಧಾರ್ಮಿಕ ವಿಧಿಗಳ ಸಂಕೇತಗಳನ್ನೂ ಉಪನಿಷನ್ಮನವು ಮೊದಲಿಗೆ ಎತ್ತಿಕೊಂಡು ತನ್ನ ಅನುಭಾವದ ಆಂತರಿಕ ಅರ್ಥಕ್ಕೆ ಅವನ್ನು ಹೊರಳಿಸಿಕೊಳ್ಳುತ್ತದೆ. ಹೀಗೆ ಇಲ್ಲಿರುವ ಉಚ್ಚತರ ಶುದ್ಧ ಅಧ್ಯಾತ್ಮ ವಿದ್ಯೆಗೆ ಇದೊಂದು ಆಂತರಿಕ ಉಪಕ್ರಮವಾಗಿರುತ್ತದೆ. ಮುಖ್ಯವಾಗಿ ಗದ್ಯಾತ್ಮಕ ಉಪನಿಷತ್ತುಗಳಲ್ಲಂತೂ ಈ ಪ್ರಕಾರದ ಹಲವಾರು ಅವತರಣಿಕೆಗಳಿದ್ದು ಆಧುನಿಕ ಮನಕ್ಕೆ ಅವು ಅಸ್ಪಷ್ಟವಾಗಿಯೂ ಗಹನವಾಗಿಯೂ ತೋರಿ ಅರ್ಥವಾಗುವದಿಲ್ಲ. ವೇದಕಾಲದಲ್ಲಿಯ ಧಾರ್ಮಿಕ ಮನಕ್ಕೆ ಮಾತ್ರ ಅರ್ಥವಾಗಬಲ್ಲ ಆ ಕಲ್ಪನೆಗಳ ಆಂತರಿಕ ಭಾವವೂ ತ್ರಿವೇದಗಳಲ್ಲಿಯ ಸೂಕ್ಷ್ಮಭೇದವೂ ತ್ರಿಲೋಕಗಳೂ ಇಂಥ ಇನ್ನಿತರ ಮಾತುಗಳೂ ಆಧುನಿಕರಿಗೆ ಉಕ್ಕಿನ ಕಡಲೆಯೇ ಸರಿ. ಆದರೆ ಗಭೀರ ಆಧ್ಯಾತ್ಮಿಕ ಸತ್ಯವಿಚಾರಗಳಿಗೆ ಈ ಉಪನಿಷದವತರಣಿಕೆಗಳು ಮಾರ್ಗಮಾಡಿಕೊಡುತ್ತವೆ. ಆದ್ದರಿಂದ ಇವುಗಳನ್ನು ಅರ್ಥವಾಗದ ಉಚ್ಚತಮ ಊಹಾಪೋಹಗಳೆಂದಾಗಲಿ ಅರ್ಥಹೀನವಾದ ಬಾಲಿಶ ಬುದ್ಧಿಚಾಪಲ್ಯಗಳೆಂದಾಗಲಿ ಎಸೆದು ಬಿಡಲಾಗದು. ಇಷ್ಟೇ ಅಲ್ಲ ತದ್ವಿರುದ್ಧವಾಗಿ ಹೇಳುವುದೆಂದರೆ ಅವುಗಳ ಸಾಂಕೇತಿಕ ಅರ್ಥವನ್ನಿಷ್ಟು ಒಮ್ಮೆ ತಿಳಿದುಕೊಂಡರೆ ಅವುಗಳಲ್ಲಿ ಗರ್ಭಿತವಾದ ಅತ್ಯಂತ ಆಳವಾದ ಅರ್ಥವು ಮನದಟ್ಟಾಗದೆ ಬಿಡದು. ಜಡವೂ ಚೈತ್ಯವೂ ಮಿಶ್ರವಾಗಿರುವ ಅವಸ್ಥೆಯು ಹಿಂದುಳಿದು ಚೈತ್ಯವೂ ಆತ್ಮವೂ ಒಂದಾಗಿರುವ ಅವಸ್ಥೆಯು ಪ್ರಾಪ್ತವಾಗುವದು. ಈ ಉನ್ನತ ಅವಸ್ಥೆಯ ಜ್ಞಾನಕ್ಕಾಗಿ ಈಗ ನಾವು ಹೆಚ್ಚು ಬೌದ್ಧಿಕವೂ ಒಂದಿಷ್ಟು ಕಡಿಮೆ ಮೂರ್ತಸ್ವರೂಪದವೂ ಆದ ಪದಗಳನ್ನು ಬಳಸ-ಬಹುದಾಗಿದೆ. ಆದರೆ ಈ ಜ್ಞಾನವು ಯೋಗಸಾಧನೆ ಮಾಡುವವರಿಗೆ ಮೂಲಧನವೇ ಆಗಿದ್ದು ಮೇಲೆ ಹೇಳಿದ ಎರಡು ಅವಸ್ಥೆಗಳ ರಹಸ್ಯಗಳೂ ಯೋಗಿಗಳಿಗೆ ಅರ್ಥವಾಗಬಲ್ಲವು. ಈ ಪ್ರಕಾರದ ಆಂತರಿಕ ಸತ್ಯಗಳನ್ನು ಉಸುರುವ ವಿಶಿಷ್ಟ ಅವತರಣಿಕೆಗಳು ಬೇರೆ ಬೇರೆ ಉಪನಿಷತ್ತುಗಳಲ್ಲಿ ಉಪಲಬ್ಧವಿವೆ. ಅಜಾತಶತ್ರುವು ನಿದ್ರೆ-ಸ್ವಪ್ನಗಳನ್ನು ಸ್ಪಷ್ಟೀಕರಿಸುವ ಪ್ರಸಂಗದಲ್ಲಿ, ಪ್ರಶ್ನೋಪನಿಷತ್ತಿನಲ್ಲಿ ಮೂಲ

ತತ್ತ್ವ ಹಾಗು ಅದರ ಚಲನೆಗಳ ಬಗ್ಗೆ ವರ್ಣನೆಯಿರುವ ಪ್ರಸಂಗದಲ್ಲಿ, ದೇವ-ದಾನವ ಯುದ್ಧದ ರೂಪಕಕತೆಯಲ್ಲಿ ಅಡಕವಾದ ಆಧ್ಯಾತ್ಮಿಕ ಸಂಕೇತದ ಪ್ರಸಂಗದಲ್ಲಿ ಅಥವಾ ಋಕ್–ಸಾಮುಗಳಲ್ಲಿ ವ್ಯಕ್ತವಾಗುವ ರೀತಿಗಿಂತ ಸ್ಪಷ್ಟತರ ರೀತಿಯಲ್ಲಿ ಇಲ್ಲಿ ದೇವತೆಗಳನ್ನು ಆವಾಹಿಸುವ ಪ್ರಸಂಗದಲ್ಲಿ ಇಂಥ ವಿಶಿಷ್ಟ ಅವತರಣಿಕೆಗಳು ಕಂಡುಬರುತ್ತವೆ.

ವೇದಗಳಲ್ಲಿಯ ಕಲ್ಪಕತೆಯೂ ರೂಪಕತೆಯೂ ವಿಶಾಲತರವಾದುದಕ್ಕೆ ಉದಾಹರಣೆಯೆಂದು ತೈತ್ತಿರೀಯ ಉಪನಿಷತ್ತಿನಲ್ಲಿ ಬರುವ ಒಂದು ಅವತರಣಿಕೆ † ಯನ್ನು ಇಲ್ಲಿ ಉದ್ಧೃತಗೊಳಿಸಿದೆ. ಇಲ್ಲಿ ಇಂದ್ರನು ದಿವ್ಯಮನದ ದೇವತಾಶಕ್ತಿಯಾಗಿ ಕಾಣಿಸಿಕೊಂಡಿರುವದು ಸ್ಪಷ್ಟವೇ ಇದೆ.

" ವಿಶ್ವರೂಪನೂ ವೇದಗಳಲ್ಲಿ ಋಷಭನೂ ಆದ ಇಂದ್ರನು ಅಮೃತದಿಂದ ಸಂದ ಛಂದಗಳಿಂದ ಜನಿಸಿದನು. ಆ ಇಂದ್ರನು ನನ್ನನ್ನು ಮೇಧಾವಂತನನ್ನಾಗಿ ಮಾಡಲಿ. ಹೇ ದೇವನೇ, ನಾನು ಅಮೃತವನ್ನು ಧರಿಸುವ ಪಾತ್ರೆಯಾಗಲಿ. ನನ್ನ ಶರೀರವು ದರ್ಶನದಿಂದ ಸಮೃದ್ಧವಾಗಲಿ. ನನ್ನ ನಾಲಿಗೆಯಲ್ಲಿ ಮಧುವುಂಟಾಗಲಿ. ನನ್ನ ಕಿವಿಗಳು ವಿಪುಲಜ್ಞಾನವನ್ನು ಸಾಕಷ್ಟು ಕೇಳಲಿ. ನೀನು ಮೇಧಾಶಕ್ತಿಯಿಂದ ಮುಚ್ಚಲ್ಪಟ್ಟ ಬ್ರಹ್ಮನ ಕೋಶವಾಗಿರುವಿ. " ಇಂಥದೇ ಒಂದು ಅವತರಣಿಕೆ * ಯನ್ನು ಈಶೋಪನಿಷತ್ತಿನಿಂದ ಉದ್ಧೃತಗೊಳಿಸಲಾಗಿದೆ : ಇಲ್ಲಿ ಸೂರ್ಯನನ್ನು ಜ್ಞಾನ ದೇವತೆಯೆಂದು ಆವಾಹಿಸಲಾಗಿದೆ. ಆತನ ಪರಮ ಜ್ಯೋತಿ-ರೂಪವು ಆತ್ಮನ ಏಕತ್ವವೇ ಆಗಿದೆ. ಮನಃಕ್ಷೇತ್ರದಲ್ಲಿ ಪಸರಿಸಿದ ಆತನ ಕಿರಣಗಳು ವಿಚಾರಸ್ಫೂರ್ತ ಮನದ ಕಾಂತಿಮಯ ಪ್ರಸರಣೆಯೆ ಆಗಿವೆ. ಆದರೆ ಅವು ಅನಂತವಾದ ಅತಿಮಾನಸ ಸತ್ಯವನ್ನೂ ಈ ಸೂರ್ಯನ ದೇಹವೂ ಆತ್ಮವೂ ಆಗಿದ್ದ ಶಾಶ್ವತ ಬ್ರಹ್ಮತತ್ತ್ವದ ಸತ್ಯವನ್ನೂ, ಮರೆಮಾಡಿವೆ.

" ಸತ್ಯದ ಮುಖವು ಹೊಳೆಹೊಳೆಯುವ ಬಂಗಾರದ ಮುಚ್ಚಳದಿಂದ ಮುಚ್ಚಲ್ಪಟ್ಟಿದೆ. ಓ ಪೋಷಕನೇ ಸತ್ಯಧರ್ಮಕ್ಕಾಗಿ, ದೃಷ್ಟಿಗಾಗಿ ಅದನ್ನು ತೆಗೆದೊಗೆ.

† ಯಶ್ಛಂದಸಾಮೃಷಭೋ ವಿಶ್ವರೂಪಃ ॥ ಛಂದೋಭ್ಯೋಽಧ್ಯಮೃತಾತ್ಸಂಬಭೂವ ॥ ಸ ಮೇಂದ್ರೋ ಮೇಧಯಾ ಸ್ಪೃಣೋತು ॥ ಅಮೃತಸ್ಯ ದೇವಧಾರಣೋ ಭೂಯಾಸಂ ॥ ಶರೀರಂ ಮೇ ವಿಚರ್ಷಣಂ ॥ ಜಿಹ್ವಾ ಮೇ ಮಧುಮತ್ತಮಾ ॥ ಕರ್ಣಾಭ್ಯಾಂ ಭೂರಿ ವಿಶ್ರುವಂ ॥ ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ ॥

* ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ । ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥ ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹರಶ್ಮೀನ್ ಸಮೂಹತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ । ಯೋಽಸಾವಸೌ ಪುರುಷಃ ಸೋಽಹಮಸ್ಮಿ

ಹೇ ಪೋಷಕನೆ, ಕೇವಲ ದ್ರಷ್ಟಾರನೆ, ನಿಯಾಮಕನೆ, ಪ್ರಕಾಶಮಾನನಾದ ಸೂರ್ಯನೆ, ಪ್ರಜಾಪತಿಯ ಶಕ್ತಿಸ್ವರೂಪನೆ, ನಿನ್ನ ಕಿರಣಗಳನ್ನು ಓರಣಗೊಳಿಸು; ನಿನ್ನ ಬೆಳಕನ್ನು ಒಂದುಗೊಳಿಸು. ನಿನ್ನ ಕಲ್ಯಾಣತಮವಾದ ಕಾಂತಿಯನ್ನು ನಿನ್ನಲ್ಲಿ ನಾನು ನೋಡುತ್ತೇನೆ. ಅಲ್ಲಿ-ಅಲ್ಲಿಯ ಪುರುಷ, ಅವನೇ ನಾನು."

ಈ ಎರಡು ಅವತರಣಿಕೆಗಳು ಭಿನ್ನವಾಗಿದ್ದರೂ ವೇದದ ರೂಪಕತೆಯನ್ನೂ ಶೈಲಿಯನ್ನೂ ಇವು ಅಳವಡಿಸಿಕೊಂಡಿವೆಯೆಂಬುದು ಸ್ಪಷ್ಟವೇ ಇದೆ. ಎರಡನೆಯ ಅವತರಣಿಕೆಯಂತೂ ವೇದದಲ್ಲಿಯ ಅತ್ರಿಸೂಕ್ತವನ್ನು ಅತಿಯಾಗಿ ಹೋಲುತ್ತದೆ. ವೇದದ ಸೂಕ್ತವನ್ನೇ ಇಲ್ಲಿ ಬೇರೆ ಶಬ್ದಗಳಲ್ಲಿ ಹೆಚ್ಚು ಸುಸ್ಪಷ್ಟ ಶೈಲಿಯಲ್ಲಿ ರೂಪಾಂತರಿಸಿದೆ. ವೇದದ ಸೂಕ್ತದ ಅರ್ಥವು ಕೆಳಗಿನಂತಿದೆ:

"ನಿನ್ನ ಸತ್ಯದಿಂದ ಶಾಶ್ವತವಾದ ಆ ಸತ್ಯವು ಮುಚ್ಚಲ್ಪಟ್ಟಿದೆ. ಸೂರ್ಯನ ಅಶ್ವಗಳನ್ನು ಅಲ್ಲಿ ಕಡಿವಾಣ ಬಿಚ್ಚಿ ಬಿಟ್ಟಿದ್ದಾರೆ. ಅಗೋ ಅಲ್ಲಿ ದಶಸಹಸ್ರ ಅಶ್ವಗಳು ಒಟ್ಟಾಗಿ ಕಲೆತಿವೆ. ಆ ಏಕತೆಯೇ ಅದು. ದೇವತೆಗಳ ಅಧಿದೈವವಾದ ಆ ಪರಮಾತ್ಮನನ್ನು ನಾನು ಕಂಡಿದ್ದೇನೆ."

ವೇದವೇದಾಂತಗಳ ಈ ರೂಪಕತೆ ಇಂದಿನ ನಮ್ಮ ಮನೋವೃತ್ತಿಗೆ ಅಪರಿಚಿತವಾಗಿದೆ. ನಾವು ಇಂದು ಸಂಕೇತದ ಸಜೀವ ಸತ್ಯವನ್ನು ನಂಬಲಾರೆವು. ಏಕೆಂದರೆ ಬುದ್ಧಿಯಿಂದ ಭೀತಿಗೊಂಡ ಕಲ್ಪನಾಶಕ್ತಿಗೆ ಆಂತರಿಕ ಮತ್ತು ಆಧ್ಯಾತ್ಮಿಕ ದರ್ಶನವನ್ನು ಒಪ್ಪಿಕೊಳ್ಳುವ ಧೈರ್ಯವಾಗಲಿ ಅದರೊಡನೆ ಎದೆಗಾರಿಕೆಯಿಂದ ಒಂದಾಗುವ ತಾದಾತ್ಮ್ಯದ ಪ್ರವೃತ್ತಿಯಾಗಲಿ ಇರುವದಿಲ್ಲ. ಆದರೆ ಪ್ರಾಚೀನಕಾಲದ ಅನಾಗರಿಕ ಜನಾಂಗದ, ಅಥವಾ ಬಾಲಿಶ ಅನುಭಾವದ ರೀತಿಯು ಇದು ಅಲ್ಲವೇ ಅಲ್ಲ. ಇಲ್ಲಿರುವ ಕವಿವಾಣಿ ಸ್ಪಷ್ಟವೂ ಸಜೀವವೂ ಪ್ರಕಾಶಮಯವೂ ಆದ ಮಂತ್ರವಾಣಿಯಾಗಿದ್ದು ಉಚ್ಚ ಆಧ್ಯಾತ್ಮಿಕ ಸಂಸ್ಕೃತಿಯ ಸ್ವಾಭಾವಿಕ ಅಭಿವ್ಯಕ್ತಿಯು ಇಲ್ಲಿ ಕಂಡುಬರುತ್ತಿದೆ.

## ಅಂತಃಸ್ಫೂರ್ತ ವಿಚಾರಸರಣಿ

ಉಪನಿಷತ್ತುಗಳ ಅಂತಃಸ್ಫೂರ್ತ ವಿಚಾರಸರಣಿಯು ಈ ಮೂರ್ತಸ್ವರೂಪದ ರೂಪಕತೆಯಿಂದಲೂ ಈ ಸಂಕೇತಗಳಿಂದಲೂ ಪ್ರಾರಂಭವಾಗುತ್ತದೆ. ಈ ಸಂಕೇತಗಳು ಮೊದಲು ದ್ರಷ್ಟಾರರ ಬುದ್ಧಿಗೆ ಸಂಪೂರ್ಣವಾಗಿ ಅಭಿವ್ಯಕ್ತವಾಗುವ ರಹಸ್ಯಮಯ ಮಂತ್ರಗಳಾಗಿದ್ದವು; ಆದರೆ ಪಾಮರರಿಗೆ ಅವುಗಳ ಆಂತರಿಕ ಅರ್ಥವನ್ನು ಅವು ಮರೆ ಮಾಡುತ್ತಿದ್ದವು. ಈ ಸಂಕೇತಗಳು, ತರುವಾಯ ಬಂದ, ಅಷ್ಟು ಗೌಪ್ಯ ರೀತಿಯದಲ್ಲದ ಭಾಷೆಯೊಡನೆ ರೂಪಕತೆಗಳನ್ನು ಜೋಡಿಸಿದವು. ಅಂಥ ಭಾಷೆಯನ್ನೂ ಅತಿಕ್ರಮಿಸಿ ಮತ್ತೊಂದು ಭವ್ಯ ಬಹಿರಂಗ ರೀತಿಯು ಹಾಗೂ ಘನವಾದ ರೂಪಕತೆಯನ್ನೂ ಶಬ್ದಸಂಯೋಜನೆಯನ್ನೂ ಕೂಡಿಸಿಕೊಂಡವು. ಈ ಶೈಲಿಯು

ಅಧ್ಯಾತ್ಮ ಸತ್ಯವನ್ನು ಅದರ ಪೂರ್ಣ ವೈಭವದಲ್ಲಿ ತತ್‌ಕ್ಷಣವೇ ಗೋಚರಿಸುವಂತೆ ಮಾಡುತ್ತದೆ. ಗದ್ಯಾತ್ಮಕ ಉಪನಿಷತ್ತುಗಳು ಪ್ರಾಚೀನಕಾಲದಲ್ಲಿ ಭಾರತದ ಮನವು ಯಾವ ಅಚ್ಚಿನಲ್ಲಿ ಮೂಡತೊಡಗಿತ್ತೆಂಬುದನ್ನು ಹೇಳಬಲ್ಲವು. ಸಂಕೇತವನ್ನು ಬಳಸುತ್ತಲೆ ಅದನ್ನು ಮೀರಿ ಹೋಗಿ ಮುಂದೆ ಬಹಿರಂಗವಾಗಿ ಸತ್ಯಾರ್ಥವನ್ನು ಪ್ರದರ್ಶಿಸುವ ಕ್ರಮವು ಹೇಗೆ ಬಂದಿತೆಂಬುದು ನಮಗೆ ತಿಳಿಯುವಂತಿದೆ. ಪ್ರಶ್ನೋಪನಿಷತ್ತಿನಲ್ಲಿ ಓಂ ಕಾರದ ಪ್ರಭಾವವನ್ನೂ ಆಧ್ಯಾತ್ಮಿಕ ಮಹತ್ವವನ್ನೂ ವಿವರಿಸುವ ಅವತರಣಿಕೆ†ಯು ಆ ಪ್ರಾರಂಭಕಾಲದ ಕ್ರಮವನ್ನು ಸೋದಾಹರಣವಾಗಿ ಸೂಚಿಸುತ್ತದೆ. ಅದರ ಅನುವಾದವು ಇಂತಿದೆ :

"ಓ ಸತ್ಯಕಾಮನೆ, ಈ ಓಂಕಾರವೆಂಬುದೆ ಪರ ಮತ್ತು ಅಪರ ಬ್ರಹ್ಮವು. ಆದುದರಿಂದ ವಿದ್ವಾಂಸನು ಬ್ರಹ್ಮ ತತ್ತ್ವದ ಈ ಆಧಾರದಿಂದಲೆ ಪರ ಮತ್ತು ಅಪರ ಇವೆರಡರಲ್ಲಿ ಒಂದಕ್ಕೆ ತಲುಪುವನು. ಏಕಮಾತ್ರೆಯನ್ನಷ್ಟೆ ಧ್ಯಾನಿಸುವವನು ಅದರಿಂದಲೆ ಜ್ಞಾನವನ್ನು ಸಂಪಾದಿಸಿ ಜಗತ್ತಿನಲ್ಲಿ ತೀವ್ರವೇ ಸಂಪನ್ನನಾಗುವನು. ಅವನನ್ನು ಋಗ್ವೇದ ಮಂತ್ರಗಳು ಮನುಷ್ಯಲೋಕಕ್ಕೆ ಕರೆದೊಯ್ಯುವವು. ಅಲ್ಲಿ ತಪಸ್ಸು-ಬ್ರಹ್ಮಚರ್ಯ-ಶ್ರದ್ಧೆಗಳಿಂದ ಸಂಪನ್ನನಾಗಿ ಆತ್ಮದ ಮಹಿಮೆಯನ್ನು ಅನುಭವಿಸುವನು. ಇನ್ನು ದ್ವಿಮಾತ್ರೆಯೊಡನೆ ಮನದಲ್ಲಿ ಸಂಪನ್ನನಾಗುವವನು ಯಜುರ್ವೇದದ ಮಂತ್ರಗಳಿಂದ ಅಂತರಿಕ್ಷಕ್ಕೆ ಎಂದರೆ ಸೋಮಲೋಕಕ್ಕೆ ಕರೆದೊಯ್ಯಲ್ಪಡುವನು. ಅವನು ಸೋಮಲೋಕದಲ್ಲಿ ಆತ್ಮದ ಐಶ್ವರ್ಯವನ್ನು ಅನುಭವಿಸಿ ಮರಳಿ ಬರುವನು. ಇನ್ನು ತ್ರಿಮಾತ್ರೆಯಾದ ಈ ಓಂ ಎಂಬ ಅಕ್ಷರದ

† ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಸ್ತಸ್ಮಾದ್ವಿದ್ವಾನೇತೇನೈವಾಯತನೇನೈಕತರ ಮನ್ವೇತಿ ॥ ಸ ಯದ್ಯೇಕಮಾತ್ರಮಭಿಧ್ಯಾಯೀತ ಸ ತೇನೈವ ಸಂವೇದಿತಸ್ತೂರ್ಣಮೇವ ಜಗತ್ಯಾಮಭಿಸಂಪದ್ಯತೇ ॥ ತಮೃಚೋ ಮನುಷ್ಯಲೋಕಮುಪನಯಂತೇ ಸ ತತ್ರ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂಪನ್ನೋ ಮಹಿಮಾನಮನುಭವತಿ॥ ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಂತರಿಕ್ಷಂ ಯಜುರ್ಭಿರುನ್ನೀಯತೇ ಸ ಸೋಮಲೋಕಂ ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ ॥ ಯಃ ಪುನರೇತತ್ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನಃ॥ ಯಥಾಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ ಸ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ ತದೇತೌ ಶ್ಲೋಕೌ ಭವತಃ ॥ ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ಕ್ರಿಯಾಸು ಬಾಹ್ಯಾಭ್ಯಂತರಮಧ್ಯಮಾಸು ಸಮ್ಯಕ್ ಪ್ರಯುಕ್ತಾಸು ನ ಕಂಪತೇ ಜ್ಞಃ॥ ಋಗ್ಭಿರೇತಂ ಯಜುರ್ಭಿರಂತರಿಕ್ಷಂ ಸ ಸಾಮಭಿರ್ಯತ್ತತ್ಕವಯೋ ವೇದಯಂತೇ ॥ ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್ಯತ್ತಚ್ಛಾಂತಮಜರಮಮೃತಮಭಯಂ ಪರಂ ಚೇತಿ ॥

ಮುಖಾಂತರ ಪರಮ ಪುರುಷನ ಧ್ಯಾನಮಾಡುವವನು ಸೂರ್ಯನೇ ಆದ ಆ ಪ್ರಕಾಶದಲ್ಲಿ ಪೂರ್ಣತೆಯನ್ನು ಪಡೆಯುವನು. ಅವನು ಪರಿಬಿಚ್ಚಿದ ಹಾವಿನಂತೆ ಪಾಪದಿಂದ ವಿಮುಕ್ತನಾಗಿ ಸಾಮವೇದದ ಮಂತ್ರಗಳಿಂದ ಬ್ರಹ್ಮಲೋಕಕ್ಕೆ ಕರೆದೊಯ್ಯಲ್ಪಡುವನು. ಜೀವಗಳ ಈ ಘನದತ್ತಣಿಂದ ಈ ಶರೀರಸ್ಥನಾದ ಪರಾತ್ಪರ ಪುರುಷನನ್ನು ಅವನು ಕಂಡುಕೊಳ್ಳುವನು. ಪ್ರತ್ಯೇಕವಾಗಿದ್ದ ಈ ಮೂರು ಮಾತ್ರೆಗಳು ಮೃತ್ಯುವಿಗೆ ತುತ್ತಾಗಿವೆ. ಆದರೆ ಅವನ್ನು ಬಿಡಿಬಿಡಿ ಮಾಡದೆ ಇಡಿಯಾಗಿ ಪ್ರಯೋಗಿಸುವದರಿಂದ ಅವು ಅನ್ಯೋನ್ಯವಾಗಿ ಆಸಕ್ತವಾಗಿವೆ. ಹೀಗೆ ಪೂರ್ಣ ಪ್ರಯೋಗದಲ್ಲಿ ಆತ್ಮಶಕ್ತಿಯ ಒಳಗಿನ, ಹೊರಗಿನ ಮತ್ತು ನಡುವಿನ ಕ್ರಿಯೆಗಳು ಸಮಗ್ರತೆಯನ್ನು ಹೊಂದುತ್ತವೆ. ಇದನ್ನು ಬಲ್ಲ ಆತ್ಮವು ಕಂಪಿಸುವದಿಲ್ಲ. ಋಗ್ವೇದದಿಂದ ಈ ಲೋಕವೂ, ಯಜುರ್ವೇದದಿಂದ ಮಧ್ಯಮಲೋಕವೂ ಸಾಮವೇದದಿಂದ ದ್ರಷ್ಟಾರರು ನಮಗೆ ಕಾಣುವಂತೆ ಮಾಡುವ ಅಂತರ್ಲೋಕವೂ ಪ್ರಾಪ್ತವಾಗುವವು. ಆಗ ಜ್ಞಾನಿಯು ಪರಮಾತ್ಮನ ತತ್ತ್ವದ ಮನೆಯಾದ ಓಂಕಾರದಲ್ಲಿ ಆತನನ್ನು ತಲುಪುವನು. ಆ ಪರಮಾತ್ಮ ತತ್ತ್ವವು ಶಾಂತವೂ ಭಯರಹಿತವಾದುದೂ ಅಜರಾಮರವೂ ಆಗಿದೆ. ”

ಇಲ್ಲಿರುವ ಸಂಕೇತಗಳು ನಮ್ಮ ಬುದ್ಧಿಗೆ ಅಸ್ಪಷ್ಟವಾಗಿ ತೋರುತ್ತವೆ. ಆದರೆ ಇವುಗಳಲ್ಲಿರುವ ಸೂಚ್ಯಾರ್ಥವು ಸ್ಪಷ್ಟವಾಗಿದೆ. ಈ ಸಂಕೇತಗಳೆಂದರೆ ಆಧ್ಯಾತ್ಮಿಕ ಸಾಕ್ಷಾತ್ಕಾರದ ಮೂರು ಅವಸ್ಥೆಗಳಿಗೆ ಒಯ್ದು ಮುಟ್ಟಿಸುವ ಆಂತರಿಕ ಅನುಭವದ ಪ್ರತೀಕಗಳಾಗಿವೆ. ಬಾಹ್ಯ, ಮಾನಸಿಕ ಮತ್ತು ಅತಿಮಾನಸಿಕ ಎಂಬಿವೇ ಆ ಮೂರು ಅವಸ್ಥೆಗಳು. ಕೊನೆಯ ಅವಸ್ಥೆಯೇ ಪರಮ ಪೂರ್ಣತೆಯಾಗಿದ್ದು, ಅಮರ ಆತ್ಮದ ಪ್ರಶಾಂತ ಶಾಶ್ವತತೆಯನ್ನೈದಿದ ಜೀವನ ಸಮಗ್ರ ಸಂಪೂರ್ಣ ಕ್ರಿಯೆಯೇ ಅದಾಗಿದೆ. ತರುವಾಯದ ಮಾಂಡೂಕ್ಯೋಪನಿಷತ್ತಿನಲ್ಲಿ ಇತರ ಸಂಕೇತಗಳೆಲ್ಲವನ್ನೂ ಬಿಟ್ಟುಕೊಡಲಾಗಿದ್ದು ಯಾವ ಮರೆಮುಸುಕೂ ಇಲ್ಲದೆ ಒಳಗಿನ ಅರ್ಥವೇ ಅಲ್ಲಿ ನಮಗೆ ಗೋಚರವಾಗುವದು. ತದನಂತರ ಜ್ಞಾನವು ಉದಯಿಸಿ ಬರುವದು. ಆಧುನಿಕ ವಿಚಾರಸರಣಿಯೂ ಕೂಡ ತನ್ನ ಬೌದ್ಧಿಕ, ವಿಚಾರಯುಕ್ತ ಮತ್ತು ಶಾಸ್ತ್ರೀಯ ಪದ್ಧತಿಗಳ ಭಿನ್ನಮಾರ್ಗದಿಂದ ಹೊರಟು ಇದೇ ‘ಜ್ಞಾನ’ಕ್ಕೆ ಬಂದು ತಲುಪತೊಡಗಿದೆ. ಈ ‘ಜ್ಞಾನ’ವೆಂದರೆ ನಮ್ಮ ಬಾಹ್ಯ ಜಡಚೇತನದ ಹಿಂದೆ ಇನ್ನೊಂದು ಪ್ರಚ್ಛನ್ನ ಚೇತನದ ಕ್ರಿಯೆಗಳು ನಡೆದಿರುವದುಂಟು. ( ಅದು ಇನ್ನೊಂದಾದರೂ ಒಂದೇ ಆಗಿದೆ ). ನಮ್ಮ ಜಾಗೃತ ಮನವೋ ಈ ಪ್ರಚ್ಛನ್ನ ಚೇತನದ ಮೇಲ್ಭಾಗದ ಕ್ರಿಯೆಯಾಗಿದೆ. ಮೇಲೆ ಅದೊಂದು ಆಧ್ಯಾತ್ಮಿಕ ಅತಿಚೇತನ (Super-Conscience) ವುಂಟು. ( ಬಹುಶಃ ಉಂಟೆಂದು ಸಂಶಯಗ್ರಸ್ತರಾದ ಆಧುನಿಕರು ಈಗಲೂ ಹೇಳುತ್ತಾರೆ ). ಈ ಅತಿಚೇತನದಲ್ಲಿ ನಮ್ಮ ಸತ್ತ್ವದ ಉಚ್ಚತಮ ಅವಸ್ಥೆಯೂ ಸಮಗ್ರ ರಹಸ್ಯವೂ ಪ್ರಾಯಶಃ ಕಂಡುಬರಬಲ್ಲವು. ಪ್ರಶ್ನೋಪ

ನಿಷತ್ತಿನ ಅವತರಣಿಕೆಯನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದಾಗ ಈ 'ಜ್ಞಾನ'ವು ಅಲ್ಲಿ ಉಪಲಬ್ಧವಿದೆಯೆಂಬುದನ್ನು ನಾವು ಅರಿಯಬಲ್ಲೆವು. ಪ್ರಾಚೀನ ಋಷಿಗಳ ಈ ಮತ್ತು ಇಂಥ ಉದ್ಗಾರಗಳ ಅಭಿವ್ಯಕ್ತಿಯು ನಮ್ಮ ವಿವೇಚನಾಪರ ಮನಕ್ಕೆ ಬಹಳಷ್ಟು ದಿಗಿಲುಗೊಳಿಸುವಂತಿದೆ. ಆದರೂ ಈ ಬಗೆಯ ಉದ್ಗಾರಗಳು ಕೇವಲ ಬಾಲಿಶ ಅನುಭಾವದ ಉಕ್ತಿಗಳೆಂದು ಅವನ್ನು ನಾವು ಕಡೆಗಣಿಸಿ ಬಿಸಾಡಲಾರೆವೆಂಬ ಸಿದ್ಧಾಂತವನ್ನು ವಿವೇಕದಿಂದ ಪ್ರಸ್ಥಾಪಿಸಬಹುದೆಂದು ನಾನು ಭಾವಿಸುತ್ತೇನೆ. ಋಷಿಗಳ ಈ ಮಂತ್ರಗಳು ಆ ಕಾಲದ ಮನೋವೃತ್ತಿಗೆ ಸಹಜವಾಗಿ ಸಲ್ಲುವ ರೂಪಕಮಯ ಉದ್ಗಾರಗಳಾಗಿವೆ. ಇಂದು ಬುದ್ಧಿಯು ತನ್ನದೇ ಆದ ಪ್ರಕ್ರಿಯೆಯಿಂದ ಅಂದಿನ ಉದ್ಗಾರವು ಸತ್ಯವಾದುದೆಂದು ಸಿದ್ಧಮಾಡಿ ತೋರಿಸತೊಡಗಿದೆ. ಆ ಸತ್ಯವೋ ಅತಿ ಪ್ರಗಲ್ಭವಾದ ಸತ್ಯವೂ ಜ್ಞಾನದ ನಿಜವಾದ ನೈಜ ತತ್ತ್ವವೂ ಆಗಿದೆ.

ಪದ್ಯಾತ್ಮಕವಾದ ಉಪನಿಷತ್ತುಗಳು ಈ ಅತಿಪ್ರಗಲ್ಭವಾದ ಸಂಕೇತ ನಿಷ್ಠೆಯನ್ನು ಮುಂದುವರಿಸುತ್ತವೆ; ಆದರೆ ಅವನ್ನು ಮೊದಲಿಗಿಂತ ಬಹು ಲಲಿತವಾಗಿ ಮುಂದುವರಿಸಲಾಗುತ್ತದೆ. ಅದಲ್ಲದೆ ಈ ಮಂತ್ರಗಳು ಮೊತ್ತದಲ್ಲಿ ಮೊದಲಿನ ರೂಪಕತೆಯನ್ನು ದಾಟಿಹೋಗಿ ಸ್ಪಷ್ಟತೆಯ ಕಡೆಗೆ ಒಲಿಯುತ್ತವೆ. ಮಾನವಾದಿ ಸಕಲ ಪ್ರಾಣಿಗಳಲ್ಲಿಯೂ ಪ್ರಕೃತಿ ಮೊದಲಾದ ಈ ಸಮಸ್ತ ಸೃಷ್ಟಿಯಲ್ಲಿಯೂ ಇತರ ಲೋಕಗಳಲ್ಲಿಯೂ ಈ ವಿಶ್ವದ ಆಚೆಗೂ ಇರುವ ಪ್ರಾಣ, ಆತ್ಮ, ಪರಮಾತ್ಮ, ಅಮೃತತ್ವ, ಏಕಮೇವಾದ್ವಿತೀಯತೆ, ಅನಂತತೆ ಇವೆಲ್ಲವೂ ಆತನ ಶಾಶ್ವತ ವಿಶ್ವಾತೀತತೆಯ ವೈಭವವನ್ನೂ ಆತನ ಸಹಸ್ರಮುಖವಾದ ಸ್ವಪ್ರಕಟನೆಯನ್ನೂ ಯಾವ ಮರೆಯಿಲ್ಲದೆ ಮಂತ್ರಘೋಷದ ಮೂಲಕ ತೆರೆತೆರೆದು ತೋರಿಸುತ್ತವೆ. ಧರ್ಮಮೃತ್ಯುಗಳ ದೇವತೆಯಾದ ಯಮಧರ್ಮನು ನಚಿಕೇತನಿಗೆ ಅರುಪಿದ ಬೋಧೆಯನ್ನು ವಿವರಿಸುವ ಕೆಲವು ಅವತರಣಿಕೆ*ಗಳನ್ನಿಷ್ಟು ಇಲ್ಲಿ ಉದ್ಧೃತಗೊಳಿಸಿದರೆ ಉಪರ್ಯುಕ್ತ ಅಂಶಗಳ ಲಕ್ಷಣವನ್ನು ಸ್ವಲ್ಪಮಟ್ಟಿಗಾದರೂ ಸೋದಾಹರಣವಾಗಿ ಹೇಳಿದಂತಾಗುವದು.

---

* ಏತದ್ಧ್ಯೇವಾಕ್ಷರಂ ಬ್ರಹ್ಮ ಹ್ಯೇತದೇವಾಕ್ಷರಂ ಪರಮ್ ‖ ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ‖ ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಮ್ ‖ ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ‖ ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ ‖ ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ . . . .

ಆಸೀನೋ ದೂರಂ ವ್ರಜತಿ ಶಯಾನೋ ಯಾತಿ ಸರ್ವತಃ ‖ ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ‖ ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್ ‖ ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ‖ ನಾಯಮಾತ್ಮಾ

"ಓಂ ಎಂಬುದೇ ಈ ಅಕ್ಷರವು. ಈ ಅಕ್ಷರವೇ ಬ್ರಹ್ಮವು. ಈ ಅಕ್ಷರವೇ ಅತ್ಯಂತ ಶ್ರೇಷ್ಠವಾದುದು. ಈ ಅವಿನಾಶಿಯಾದ ಓಂಕಾರವನ್ನು ಅರಿತವನು ತಾನು ಇಚ್ಛಿಸಿದ್ದನ್ನೆಲ್ಲ ಪಡೆಯುವನು. ಇದುವೆ ಶ್ರೇಷ್ಠವಾದ ಆಲಂಬನವು; ಇದುವೆ ಪರಮವಾದ ಆಲಂಬನವು; ಈ ಆಲಂಬನವನ್ನರಿತವನು ಬ್ರಹ್ಮಲೋಕದಲ್ಲಿ ಹಿರಿಮೆ ಹೊಂದುವನು. ಸರ್ವಜ್ಞನಾದ ಆತ್ಮನಿಗೆ ಹುಟ್ಟುಸಾವುಗಳಿಲ್ಲ. ಎಲ್ಲಿಂದಲೂ ಆತನು ಆಗಿಲ್ಲ. ಆತನು ಇನ್ನೊಬ್ಬನಾರೂ ಅಲ್ಲ. ಅವನು ಅಜನು, ನಿತ್ಯನು, ಶಾಶ್ವತನು, ಪುರಾಣಪುರುಷನು. ಶರೀರವು ಹತವಾದರೂ ಆತನು ಹತನಾಗುವದಿಲ್ಲ........

ಆತನು ಕುಳಿತಲ್ಲಿಯೇ ಕುಳಿತು ದೂರ ದೂರ ಅಲೆದಾಡುವನು; ಮಲಗಿದಲ್ಲಿಯೇ ಮಲಗಿ ಎಲ್ಲೆಡೆಗೂ ಹೋಗುವನು. ಈ ಆನಂದದ ಮದಾಮುದದ ದೇವನನ್ನು ನನ್ನ ಹೊರತು ಯಾರು ಬಲ್ಲರು? ಶರೀರಗಳಲ್ಲಿ ಅಶರೀರನಾಗಿಯೂ ಅನಿತ್ಯಗಳಲ್ಲಿ ನಿತ್ಯನಾಗಿಯೂ ಇರುವ ಮಹಾ ವಿಭು ಆತ್ಮನನ್ನು ಅರಿತ ಧೀರನು ಎಂದಿಗೂ ಶೋಕರಹಿತನು. ಈ ಆತ್ಮನು ಪ್ರವಚನದಿಂದ ಲಭ್ಯನಲ್ಲ. ಮೇಧಾಶಕ್ತಿಯಿಂದಾಗಲಿ ಬಹುಶ್ರವಣದಿಂದಾಗಲಿ ಲಭ್ಯನಲ್ಲ. ಆತ್ಮನು ತಾನು ಯಾವನಿಗೆ ಮೆಚ್ಚುವನೊ ಅವನಿಗೆ ಮಾತ್ರ ಲಭ್ಯನು. ಅವನಿಗೆ ಆತ್ಮನು ತನ್ನ ತನುವನ್ನು ಪ್ರಕಟಗೊಳಿಸಿ ತೋರಿಸುವನು. ಯಾವನು ದುಷ್ಟಕರ್ಮಗಳನ್ನು ಬಿಟ್ಟಿಲ್ಲವೊ ಯಾವನು ಏಕಾಗ್ರಚಿತ್ತವಿಲ್ಲದೆ ಅಶಾಂತನಾಗಿರುವನೊ ಯಾವನ ಮನದಲ್ಲಿ ಶಾಂತಿ ನೆಲೆಗೊಂಡಿಲ್ಲವೊ ಅಂಥವನು ಬುದ್ಧಿಬಲದಿಂದ ಆತ್ಮನನ್ನು ಪಡೆಯಲಾರನು. ಬ್ರಾಹ್ಮಣ-ಕ್ಷತ್ರಿಯರೀರ್ವರೂ ಯಾವನ ಆಹಾರವಾಗಿರುವರೊ ಮತ್ತು ಮೃತ್ಯುವು ಯಾವನ

---

† ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ॥ ಯಮೇ ವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥ ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ॥ ನಾಶಾಂತ ಮನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್ ॥ ಯಸ್ಯ ಬ್ರಹ್ಮ ಚ ಕ್ಷತ್ರಂ ಚೋಭೇ ಭವತ ಓದನಃ ॥ ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾ ವೇದ ಯತ್ರ ಸಃ ॥ . . . .

ಪರಾಂಚಿಖಾನಿ ವ್ಯತೃಣತ್ ಸ್ವಯಂಭೂ ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್ ॥ ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷುರಮೃತತ್ವಮಿಚ್ಛನ್ ॥ ಪರಾ ಚಃ ಕಾಮಾನನುಯಂತಿ ಬಾಲಾಸ್ತೇ ಮೃತ್ಯೋರ್ಯಂತಿ ವಿತತಸ್ಯ ಪಾಶಮ್ ॥ ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ ನ ಪ್ರಾರ್ಥಯಂತೇ ॥ ಯೇನ ರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚ ಮೈಥುನಾನ್ ॥ ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತ ಏತದ್ವೈ ತತ್ ॥ ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ ॥ ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥ ಯ ಇಮಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್ ॥ ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತ ಏತದ್ವೈ ತತ್ ॥ ಯಃ ಪೂರ್ವಂ ತಪಸೋ ಜಾತಮದ್ಭ್ಯಃ ಪೂರ್ವಮಜಾಯತ ॥

ಉಪಚರ್ಯವೊ ಅಂಥ ಆತ್ಮನು ಎಲ್ಲಿರುವನೆಂಬದನ್ನು ಯಾರು ತಾನೆ ಅರಿಯ ಬಲ್ಲರು . . . .

ಸ್ವಯಂಭುವು ತನ್ನ ಬಾಗಿಲುಗಳನ್ನು ತೆರೆದುಬಿಟ್ಟಿದ್ದಾನೆ. ಅಂತೆಯೆ ಮಾನ ವನು ಹೊರಗಿನದನ್ನು ನೋಡಲೆಳಸುವನು. ತನ್ನೊಳಗೆ ತಾನು ನೋಡಲರಿಯನು. ಅಲ್ಲಲ್ಲಿ ಕಂಡುಬರುವ ಕೆಲವೆ ಧೀರರು ಮಾತ್ರ ಅಮೃತತ್ವವನ್ನು ಹೊಂದುವ ಇಚ್ಛೆ ಯಿಂದ ಅಂತರ್ಮುಖಿಗಳಾಗಿ ಆತ್ಮನನ್ನು ಸಾಕ್ಷಾತ್ ನೋಡಬಲ್ಲರು. ಬಾಲಬುದ್ಧಿ ಯುಳ್ಳವರು ಬಾಹ್ಯ ಕಾಮನೆಗಳ ಬೆನ್ನು ಹತ್ತಿ, ವಿಸ್ತೃತವಾಗಿ ಹಬ್ಬಿದ ಮರಣಪಾಶ ದಲ್ಲಿ ಬಲಿಬೀಳುವರು. ಆದರೆ ಧೀರರು ಅಮೃತತ್ವವನ್ನು ಅರಿತುಕೊಂಡು ಅನಿತ್ಯ ವಸ್ತುಗಳಿಂದ ನಿತ್ಯತೆಯನ್ನು ಬೇಡಬಯಸುವದಿಲ್ಲ. ರೂಪ-ರಸ-ಗಂಧ-ಶಬ್ದ- ಸ್ಪರ್ಶ-ಮೈಥುನಗಳ ತಿಳಿವಳಿಕೆಯು ಆತ್ಮನಿಂದಲೆ ಉಂಟಾಗುವದು. ಇನ್ನೇನು ಉಳಿಯಿತು ? ಸ್ವಪ್ನ-ಜಾಗ್ರತ ಸ್ಥಿತಿಯಲ್ಲಿಯ ಎಲ್ಲವೂ ಯಾವನ ಬಲದಿಂದ ತಿಳಿ ಯುತ್ತದೆಯೊ ಅಂಥ ಮಹಾವಿಭು ಆತ್ಮನನ್ನು ಅರಿತುಕೊಂಡು ಧೀರನು ಎಂದಿಗೂ ಶೋಕರಹಿತನಾಗಿರುವನು. ಪ್ರಾಣಪುರುಷನ ಸಂನಿಧಿಯಲ್ಲಿದ್ದು ಫಲವನ್ನು ಸವಿ ಯುವ ಹಾಗು ಭೂತ ಭವಿಷ್ಯಗಳ ಒಡೆಯನಾಗಿರುವ ಆತ್ಮನನ್ನು ಅರಿತವನು ಯಾವುದಿದ್ದರೂ ಅದಕ್ಕೆ ಅಳುಕನು. ಎಂದಿನಿಂದಲೂ ತಪಸ್ಸಿನಿಂದ ಹುಟ್ಟಿದವ ನೆಂದು, ಎಂದಿನಿಂದಲೂ ಅಪ್ಪುಗಳಿಂದ ಹುಟ್ಟಿದವನೆಂದು, ಈ ಸರ್ವ ಭೂತಗ ಳೊಡನೆ ಜೀವಾತ್ಮನ ಗೂಢ ಅಂತರಂಗದಲ್ಲಿ ಹೊಕ್ಕು ಇದ್ದುಕೊಂಡಿದ್ದಾ ನೆಂದು ಆತ್ಮನನ್ನು ಧೀರನು ತಿಳಿಯುವನು. ದೇವತಾಮಯಿಯಾದ ಅದಿತಿಯು ಪ್ರಾಣಶಕ್ತಿಯೊಡನೆ ಹುಟ್ಟಿದ್ದಾಳೆಂದೂ ಈ ಸರ್ವಭೂತಗಳೊಡನೆ ಹೃದಯ ಗುಹೆಯಲ್ಲಿ ನೆಲೆಸಿದ್ದಾಳೆಂದೂ ಧೀರನು ತಿಳಿಯುವನು. ಗರ್ಭಿಣಿಯರಾದ ಸ್ತ್ರೀಯರು ಧರಿಸಿದ ಗರ್ಭದಂತೆ ಎರಡು ಅರಣಿಗಳ ನಡುವೆ ಜ್ಞಾನವನ್ನು ಧರಿಸಿದ

† ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ ಭೂತೇಭಿರ್ವ್ಯಪಶ್ಯತ ಏತದ್ವೈ ತತ್ ॥ ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ ॥ ಗುಹಾಂ ಪ್ರವಿಶ್ಯ ತಿಷ್ಠಂತೀ ಯಾ ಭೂತೇಭಿರ್ವ್ಯ ಜಾಯತ ಏತದ್ವೈ ತತ್ ॥ ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ॥ ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿರೇತ ದ್ವೈ ತತ್ ॥ ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ॥ ತಂ ದೇವಾಃ ಸರ್ವೇಽರ್ಪಿತಾಸ್ತದು ನಾತ್ಯೇತಿ ಕಶ್ಚನ ಏತದ್ವೈ ತತ್ ॥ ಯದೇವೇಹ ತದಮುತ್ರ ಯದ ಮುತ್ರ ತದನ್ವಿಹ ॥ ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ॥ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ ॥ ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ॥ ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತ ಏದದ್ವೈ ತತ್ ॥ ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾ ಧೂಮಕಃ ॥ ಈಶಾನೋ ಭೂತಭವ್ಯಸ್ಯ ಸ ಏವಾದ್ಯ ಸ ಉ ಶ್ವ ಏತ ದ್ವೈ ತತ್ ॥ . . .

ಅಗ್ನಿಯೇ ಈ ಆತ್ಮನು. ಜಾಗ್ರತರಾಗಿದ್ದು ಹವಿಸ್ಸನ್ನು ಅರ್ಪಿಸುವ ಮನುಷ್ಯರು ಈ ಅಗ್ನಿಯನ್ನು ಪೂಜಿಸತಕ್ಕದ್ದು. ಸೂರ್ಯನು ಉದಯಿಸುವದು ಈ ಆತ್ಮನಿಂದಲೆ; ಆತನಲ್ಲಿಯೆ ಸೂರ್ಯನು ಮುಳುಗುವನು. ಆತನಲ್ಲಿಯೆ ಸಕಲ ದೇವತೆಗಳು ಇರುವರು.ಆತನ ಆಚೆಗೆ ಯಾವನೂ ಹೋಗಲರಿಯನು. ಇಲ್ಲಿದ್ದುದು ಇತರ ಲೋಕಗಳಲ್ಲಿಯೂ ಉಂಟು; ಅಲ್ಲಿದ್ದುದು ಅಲ್ಲಿದ್ದಂತೆಯೆ ಇಲ್ಲಿಯೂ ಇದೆ. ಇಲ್ಲಿ ನಾನಾತ್ವವನ್ನು ಮಾತ್ರ ನೋಡುವವನು ಮೇಲಿಂದ ಮೇಲೆ ಮೃತ್ಯುವಿಗೆ ತುತ್ತಾಗುವನು. ಮನುಷ್ಯನ ಆತ್ಮಕೇಂದ್ರದಲ್ಲಿ ಅಂಗುಷ್ಠ ಮಾತ್ರದ ಪುರುಷನು ನೆಲಿಸಿದ್ದು ಅವನು ಭೂತ ಭವಿಷ್ಯತ್ತುಗಳ ಪ್ರಭುವಾಗಿರುವನು. ಆತನನ್ನು ಅರಿತವನು ಯಾವುದಿದ್ದರೂ ಅದರಿಂದ ಅಳುಕನು. ಅಂಗುಷ್ಠಮಾತ್ರದ ಈ ಪುರುಷನು ಧೂಮವಿಲ್ಲದ ಜ್ಯೋತಿಯಂತೆ ಇರುವನು. ಅವನು ಭೂತ ಭವಿಷ್ಯತ್ತುಗಳ ಪ್ರಭುವಾಗಿರುವನು. ಅವನು ಇಂದೂ ಉಂಟು, ಮುಂದೂ ಉಂಟು."

## ಭಾರತೀಯ ಸಂಸ್ಕೃತಿಯ ಮೇಲೆ ಉಪನಿಷತ್ತುಗಳ ಪ್ರಭಾವ

ಉಪನಿಷತ್ತುಗಳಲ್ಲಿ ಇಂಥ ಅವತರಣಿಕೆಗಳು ವಿಪುಲವಾಗಿದ್ದು ಅವುಗಳಲ್ಲಿ ಕಾವ್ಯವೂ ಉಂಟು, ತತ್ತ್ವಜ್ಞಾನವೂ ಉಂಟು. ಅವು ಅತಿ ಸುಲಭವಾಗಿದ್ದು ಅತಿ ಸುಂದರವಾಗಿವೆ. ಮೂಲ ಮಂತ್ರಗಳ, ಛಂದಗಳ ಧ್ವನಿಯೂ ಅಲ್ಲಿರುವ ಗಂಭೀರ, ಸೂಕ್ಷ್ಮ, ಜ್ಯೋತಿರ್ಮಯ ಅರ್ಥದ ಪ್ರತಿಧ್ವನಿಗಳೂ ಇಲ್ಲದ ಯಾವ ಅನುವಾದವೂ ಅವುಗಳ ಪ್ರಭಾವದ ಹಾಗೂ ಪೂರ್ಣತೆಯ ಕಲ್ಪನೆಯನ್ನು ತಂದುಕೊಡಲಾರವು. ಇನ್ನು ಕೆಲವು ಅವತರಣಿಕೆಗಳಲ್ಲಿ ಮನಃಶಾಸ್ತ್ರದ ಮತ್ತು ತತ್ತ್ವಶಾಸ್ತ್ರದ ಸೂಕ್ಷ್ಮತಮ ಸತ್ಯಗಳು ಪೂರ್ಣ ಪ್ರಗಲ್ಭತೆಯೊಡನೆ ಅಭಿವ್ಯಕ್ತವಾಗಿವೆ. ಹೀಗಿದ್ದರೂ ಕಾವ್ಯದ ಅಭಿವ್ಯಕ್ತಿಯ ಪೂರ್ಣ ಸೌಂದರ್ಯಕ್ಕೆ ಯಾವ ಕುಂದೂ ಉಂಟಾಗಿಲ್ಲ. ಹೀಗಾಗಿ ಉಪನಿಷತ್ತುಗಳ ಸಂದೇಶವು ಅರ್ಥಗ್ರಾಹಿಯಾದ ಬುದ್ಧಿಗಷ್ಟೇ ನಿವೇದಿತವಾಗಿರದೆ ಮನಕ್ಕೂ ಅಂತರಂಗಕ್ಕೂ ಪ್ರೇರಣೆಯನ್ನು ಅದು ಸದಾ ನೀಡುತ್ತಿರುವದು ಕೆಲವು ಗದ್ಯಾತ್ಮಕ ಉಪನಿಷತ್ತುಗಳಲ್ಲಿ ಭವ್ಯ ಕಥನದ ಮತ್ತು ಪರಂಪರೆಯ ಅಂಶವೊಂದುಂಟು. ಈ ಅಂಶವು ಪರಮ ಜ್ಞಾನಕ್ಕಾಗಿ ಕಾತರಪಡುವ ಜೀವಗಳಲ್ಲಿ ಆಧ್ಯಾತ್ಮಿಕ ಶೋಧದ ಹಸಿ ಹಂಬಲದ ವಿಲಕ್ಷಣ ಚಟುವಟಿಕೆ ಹೇಗೆ ಪ್ರಬಲವಾಗಿತ್ತೆಂಬುದರ ಚಿತ್ರವನ್ನು ಈಷನ್ಮಾತ್ರವಾಗಿಯಾದರೂ ನಮ್ಮ ಕಣ್ಣ ಮುಂದೆ ತಂದು ನಿಲ್ಲಿಸುತ್ತದೆ. ಇಂಥ ಚಟುವಟಿಕೆ ಅಂದು ಇದ್ದುದರಿಂದಲೆ ಉಪನಿಷತ್ತುಗಳು ಜನಿಸುವದು ಸಾಧ್ಯವಾಯಿತು. ಪ್ರಾಚೀನ ಕಾಲದ ಆ ದೃಶ್ಯಗಳು ಇಂದಿಗೂ ನಮಗೆ ಸಜೀವವಾಗಿ ತೋರುವವು. ಅವುಗಳನ್ನು ಚಿತ್ರಿಸಲು ಹಲವಾರು ಪುಟಗಳು ಹಿಡಿಯುವವು. ಋಷಿಗಳು ತಮ್ಮ ತಪೋವನಗಳಲ್ಲಿ ಕುಳಿತು ಬಂದ ಜಿಜ್ಞಾಸುಗಳನ್ನೆಲ್ಲ ಪರೀಕ್ಷಿಸುತ್ತ ಅವರಿಗೆ ಜ್ಞಾನವನ್ನು ನೀಡಲು ಸದೈವ ಸಿದ್ಧರಾಗಿದ್ದಾರೆ. ವಿದ್ವಾಂಸ

ರಾದ ಬ್ರಾಹ್ಮಣರೂ ಕ್ಷತ್ರಿಯರೂ ಇತರ ಸಾಮಂತರೂ ಜ್ಞಾನದ ಶೋಧಕ್ಕಾಗಿ ಸುತ್ತಲೂ ಅಲೆಯುತ್ತಿದ್ದಾರೆ. ರಾಜನೊಬ್ಬನ ಮಗನು ರಥದಲ್ಲಿ ಬರುತ್ತಿದ್ದಾನೆ. ದಾಸಿಯೋರ್ವಳ ಜಾರಪುತ್ರನೂ ಅಲ್ಲಿಗೆ ನಡೆದು ಬರುತ್ತಿದ್ದಾನೆ. ಇವರೆಲ್ಲರು ಜ್ಯೋತಿರ್ಮಯ ವಿಚಾರಗಳನ್ನೂ ಶ್ರುತಿಯ ಮಂತ್ರಗಳನ್ನೂ ಕಂಡ ಜ್ಞಾನಿಗಳು ಎಲ್ಲೆಲ್ಲಿ ಉಂಟೋ ಅಲ್ಲಿಗೆ ಅವರನ್ನು ಹುಡುಕುತ್ತ ನಡೆದಿದ್ದಾರೆ. ಇಂಥ ಜ್ಞಾನಿಗಳಲ್ಲಿ ವಿಶಿಷ್ಟ ವ್ಯಕ್ತಿಗಳು ಹಲವರು ಎದ್ದು ಕಾಣುತ್ತಿದ್ದಾರೆ. ಆ ಜನಕಮಹಾರಾಜ, ಸೂಕ್ಷ್ಮಮನದ ಆ ಅಜಾತಶತ್ರು, ಎತ್ತಿನ ಬಂಡಿಯ ಆ ರೈಕ್ವ, ಸತ್ಯ. ವೀರನೂ ಪ್ರಶಾಂತನೂ ವಕ್ರೋಕ್ತಿಶೀಲನೂ ಆದ ಆ ಯಾಜ್ಞವಲ್ಕ್ಯ ಇವರು ಮಹಿಮಾವಂತರು. ಶ್ರೇಯ ಪ್ರೇಯಗಳ ಉಭಯ ಸಂಪತ್ತನ್ನು ಎರಡು ಕೈಗಳಿಂ-ದಲೂ ಅನಾಸಕ್ತಿಯಿಂದ ಯಾಜ್ಞವಲ್ಕ್ಯರು ತಮ್ಮೆಡೆಗೆ ಎಳೆದುಕೊಳ್ಳುತ್ತಿದ್ದಾರೆ; ಕೊನೆಗೆ ಅವರು ಸರ್ವ ಧನ ಪರಿತ್ಯಾಗ ಮಾಡಿ ಪರಿವ್ರಾಜಕನಾಗಿ ಹೊರಟು ಬಿಡುತ್ತಿದ್ದಾರೆ. ದೇವಕೀಪುತ್ರನಾದ ಕೃಷ್ಣನು ಋಷಿ ಘೋರನಿಂದ ಕಲಿತ ವರ್ಣಮಾತ್ರದಿಂದಲೆ ಶಾಶ್ವತ ಜ್ಞಾನವನ್ನು ಪಡೆಯುತ್ತಿದ್ದಾನೆ. ಅಂದಿನ ಆಶ್ರಮಗಳಲ್ಲಿ, ರಾಜರ ಆಸ್ಥಾನಗಳಲ್ಲಿ, ಯಜ್ಞವೇದಿಕೆಗಳಲ್ಲಿ ಋಷಿಗಳು ನೆರೆದು ತಮ್ಮ ತಮ್ಮ ಜ್ಞಾನವನ್ನು ತೂಗಿನೋಡುತ್ತಿದ್ದರು. ಋಷಿಗಳ ಇಂಥ ಜ್ಞಾನಕೂಟದಲ್ಲಿಯೆ ಭಾರತದ ಆತ್ಮವು ಜನಿಸಿ ಬಂದು ಅದರ ಜೋಗುಳಪದದ ದಿವ್ಯನಾದವು ಭೂಲೋಕದಿಂದ ಹೊರಟು ಆತ್ಮತತ್ತ್ವದ ಅತ್ಯುಚ್ಚ ಲೋಕದ ವರೆಗೂ ಏರಿಹೋಯಿತು. ವೇದೋಪನಿ-ಷತ್ತುಗಳು ಭಾರತದ ಧರ್ಮತತ್ತ್ವಜ್ಞಾನಗಳಿಗೆ ಮಾತ್ರ ಉಗಮಸ್ಥಾನವಾಗಿರದೆ ಭಾರತೀಯವೆನಿಸಿದ ಸಮಸ್ತ ಕಲೆಗಳಿಗೂ ಕಾವ್ಯಕ್ಕೂ ಇತರ ಸಾಹಿತ್ಯಕ್ಕೂ ಪ್ರೇರಣೆಯನ್ನು ಉಂಟುಮಾಡಿವೆ. ವೇದೋಪನಿಷತ್ತುಗಳಲ್ಲಿ ರೂಪಗೊಂಡು ಪ್ರಕಟವಾದ ಭಾರತದ ಒಂದು ಜೀವಸತ್ತ್ವವೆ, ಸ್ವಭಾವಪ್ರವೃತ್ತಿಯೆ, ಆದರ್ಶಮನೋವೃತ್ತಿಯೆ ತರುವಾಯದ ಶ್ರೇಷ್ಠ ದರ್ಶನಶಾಸ್ತ್ರಗಳನ್ನು ಕಡೆದು ತೋರಿಸಿತು, ಧರ್ಮದ ಸೌಧವೊಂದನ್ನು ರಚಿಸಿ ತೋರಿಸಿತು, ಮಹಾಭಾರತ-ರಾಮಾಯಣಗಳಲ್ಲಿ ತನ್ನ ಯೌವನದ ಸಾಹಸಮಯ ವೀರ ಕಥೆಗಳನ್ನು ಉಲ್ಲೇಖಿಸಿ ತೋರಿಸಿತು, ತನ್ನ ಪ್ರಬುದ್ಧಾವಸ್ಥೆಯ ಪಕ್ವತೆಯನ್ನು ತಪೋವನಗಳ ಕಾಲದಲ್ಲಿ ಅವಿರತವಾಗಿ ಬೌದ್ಧಿಕ ತೇಜದ ಒಪ್ಪದೊಂದಿಗೆ ಮೆರೆಯಿಸಿ ತೋರಿಸಿತು, ತನ್ನ ಮೌಲಿಕ ಅಂತರ್ಜ್ಞಾನವನ್ನು ಅನೇಕ ಶಾಸ್ತ್ರಗಳಲ್ಲಿ ಎರಕಹಾಕಿ ತೋರಿಸಿತು, ಸಮೃದ್ಧ–ಸುಂದರ–ಪ್ರಾಣನಿರ್ಭರ-ಇಂದ್ರಿಯಾನುಭವಗಳನ್ನು ನಿರ್ಮಿಸಿ ತೋರಿಸಿತು, ತನ್ನ ಆಧ್ಯಾತ್ಮಿಕ ಹಾಗು ಯೌಗಿಕ ಅನುಭವಗಳನ್ನು ತಂತ್ರ–ಪುರಾಣಗಳಲ್ಲಿ ಪುನರುಜ್ಜೀವನಗೊಳಿಸಿ ತೋರಿಸಿತು, ಅನೇಕ ವರ್ಣರೇಖೆಗಳಲ್ಲಿ ತನ್ನ ವೈಭವ ರಮಣೀಯತೆಗಳನ್ನು ಸೂರೆಮಾಡಿ ತೋರಿಸಿತು, ಕಲ್ಲುಕಂಚುಗಳ ಪ್ರತಿಮೆಗಳಲ್ಲಿ ತನ್ನ ನೆನಸು-ಕಣಸುಗಳನ್ನು ಕೊರೆಯಿಸಿ ತೋರಿಸಿತು, ತರುವಾಯದ ಪ್ರಾಕೃತ ಮತ್ತು ದೇಶೀಯ ಭಾಷೆಗಳಲ್ಲಿ

ನವೋನವ ಜ್ಞಾನಪ್ರವಾಹಗಳಲ್ಲಿ ತನ್ನ ಪ್ರತಿಭೆಯನ್ನು ಹರಿಯಿಸಿ ತೋರಿಸಿತು, ಈಗ ಗ್ರಹಣದಿಂದ ಮುಕ್ತನಾದ ರವಿಯಂತೆ ಮತ್ತೆ ಮೂಲ ತೇಜವನ್ನು ಬೇರೆ ಬೇರೆ ಆಕಾರಗಳಲ್ಲಿ ರೂಪಾಂತರಿಸಿ ನವಸೃಷ್ಟಿಯನ್ನೂ ನವಜೀವನವನ್ನೂ ಮೆರೆದು ತೋರಿಸಲು ಭಾರತದ ಆ ಆತ್ಮವು ಅಣಿಯಾಗುತ್ತಿದೆ.

ಅನುವಾದಕರು : ಪ್ರಹ್ಲಾದ ನರೇಗಲ್ಲ

# ಗೀತೆಯ ಸಂದೇಶ

## ' Essays on the Gita '

### ಎಂಬ ಗ್ರಂಥದಲ್ಲಿಯ ೨೪ ನೆಯ ಪ್ರಕರಣದ ಅನುವಾದ

ಶ್ರೀ ಅರವಿಂದರು

### ಕರ್ಮದ ರಹಸ್ಯ

ಭಗವಾನ್ ಶ್ರೀ ಕೃಷ್ಣನ ಮುಖದಿಂದ ಹೊರಬಂದ ಗೀತೆಯ ಸಂದೇಶದ ಸಾರವನ್ನು ನಾವು ಹೀಗೆ ಸಂಗ್ರಹಿಸಬಹುದು : ಕರ್ಮದ ರಹಸ್ಯವು ಸಕಲ ಜೀವನದ ಮತ್ತು ಅಸ್ತಿತ್ವದ ರಹಸ್ಯದೊಂದಿಗೆ ಸಮ್ಮತವಾಗಿದೆ. ಅಸ್ತಿತ್ವವೆಂದರೆ ಕೇವಲ ಪ್ರಕೃತಿಯ ಯಂತ್ರವಲ್ಲ, ಒಂದು ಕ್ಷಣವೋ ಅಥವಾ ಯುಗಗಳ ಪರ್ಯಂತವೋ ಜೀವಾತ್ಮನು ಸಿಕ್ಕು ತೊಳಲಾಡುವ ನಿಯತಿ ಚಕ್ರವಲ್ಲ. ಅಸ್ತಿತ್ವವು ಸಂತತವಾಗಿ ನಡೆಯುವ ಆತ್ಮಾವಿಷ್ಕರಣವಾಗಿದೆ. ಜೀವನವು ಕೇವಲ ಜೀವನಕ್ಕಾಗಿಯೆ ಇಲ್ಲ, ಅದು ಈಶ್ವರನಿಗಾಗಿ ಉಂಟು. ಮಾನವನಲ್ಲಿಯ ಆತ್ಮಚೈತನ್ಯವು ಭಗವಂತನ ಸನಾತನ ಅಂಶವೇ ಆಗಿದೆ. ಕರ್ಮವು ಆತ್ಮಶೋಧನೆಗಾಗಿ, ಆತ್ಮಸಾರ್ಥಕತೆಗಾಗಿ, ಆತ್ಮಸಾಕ್ಷಾತ್ಕಾರಕ್ಕಾಗಿ ಇದೆ. ಇಂದಿನ ಅಥವಾ ಮುಂದಿನ ಬಾಹ್ಯ-ಪ್ರತ್ಯಕ್ಷ ಫಲಪ್ರಾಪ್ತಿಗೆ ಮಾತ್ರವಲ್ಲ. ಆತ್ಮದ ಪರಮ ಹಾಗೂ ಆವಿರ್ಭೂತ ಸ್ವರೂಪವನ್ನು ಅವಲಂಬಿಸಿ ಎಲ್ಲ ವಸ್ತುಗಳಿಗೂ ಒಂದು ಅಂತರ್ನಿಯಮವಿದೆ, ಒಂದು ಅರ್ಥವಿದೆ. ಕರ್ಮದ ನಿಜವಾದ ಸತ್ಯವು ಅಲ್ಲಿದೆ. ಮನದ ಮತ್ತು ಅದರ ಕ್ರಿಯೆಯ ಬಾಹ್ಯ ರೂಪಗಳಲ್ಲಿ ಆ ಸತ್ಯವನ್ನು ಪ್ರಾಸಂಗಿಕವಾಗಿ, ಅಪೂರ್ಣವಾಗಿ ಅಜ್ಞಾನದಿಂದ ವೇಷಾಂತರವಾಗಿ ಮಾತ್ರ ಬಿಂಬಿಸಬಹುದು. ಆದುದರಿಂದ ಪರಮ ನಿರ್ದುಷ್ಟ ಹಾಗು ಮಹತ್ತಮವಾದ ಕರ್ಮಸೂತ್ರವೆಂದರೆ ನಿಮ್ಮ ಅತ್ಯುಚ್ಚ ಮತ್ತು ಅತಿನಿಗೂಢ ಜೀವನದ ಸತ್ಯವನ್ನು ಅರಸಿ ಅದಕ್ಕನುಗುಣವಾಗಿ ಬಾಳುವದು, ಯಾವುದಾದರೂ ಬಾಹ್ಯಪ್ರಮಾಣವನ್ನಾಗಲಿ ಧರ್ಮವನ್ನಾಗಲಿ ಅನುಸರಿಸುವುದಲ್ಲ. ಅಲ್ಲಿಯವರೆಗೆ ಎಲ್ಲ ಜೀವನವೂ ಕರ್ಮವೂ ಒಂದು ಅಪೂರ್ಣತೆ, ತೊಡಕು, ಹೋರಾಟ, ಸಮಸ್ಯೆಯಾಗಿ ಉಳಿಯಲಿಕ್ಕೆ ಬೇಕು. ನಿನ್ನ ನಿಜವಾದ ಆತ್ಮವನ್ನು ಶೋಧಿಸಿ, ಅದರ ನಿಜ ಸತ್ಯದಂತೆ ಜೀವಿಸಿದರೆ ಮಾತ್ರ ಸಮಸ್ಯೆಯನ್ನು ಪುನರುದ್ಭವಿಸದಂತೆ ಬಗೆಹರಿಸಬಹುದು ; ತೊಡಕನ್ನೂ ಹೋರಾಟವನ್ನೂ ಅತಿಕ್ರಮಿಸಬಹುದು. ಮತ್ತು ಬೆಳಕಿಗೆ ಬಂದ ಆತ್ಮದ ಸಂರಕ್ಷಣೆಯಲ್ಲಿ ಪರಿಪೂರ್ಣಗೊಂಡ ನಿನ್ನ ಕೃತಿಗಳು ದಿವ್ಯ ಮುದ್ರೆಯನ್ನು ಹೊತ್ತ ಕ್ರಿಯೆಯಾಗಿ ಪರಿಣಮಿಸುವವು. ಆದುದರಿಂದ ನಿನ್ನ ಆತ್ಮವನ್ನು ನೀನು ಅರಿಯುವವ

ನಾಗು. ನಿನ್ನ ನಿಜವಾದ ಆತ್ಮನು ಈಶ್ವರನೆಂದೂ, ಉಳಿದ ಎಲ್ಲರ ಆತ್ಮದೊಂದಿಗೆ ಏಕನೆಂದೂ ಅರಿ. ನಿನ್ನ ಆತ್ಮನನ್ನು ಭಗವಂತನ ಒಂದಂಶವೆಂದು ಅರಿ. ನಿನ್ನ ಅರಿವಿನ ಬೆಳಕಿನಲ್ಲಿ ಬಾಳು. ಆತ್ಮನಲ್ಲಿ ನೆಲೆಗೊಂಡು ಜೀವಿಸು. ನಿನ್ನ ಪರಮ ಆಧ್ಯಾತ್ಮಿಕ ಪ್ರವೃತ್ತಿಯಂತೆ ಜೀವನವನ್ನು ಸಾಗಿಸು. ಈಶ್ವರನೊಡನೆಯೂ ಆತನೊಡನೆ ಸಾಧರ್ಮ್ಯವನ್ನು ಪಡೆದವರೊಡನೆಯೂ ಒಂದಾಗು. ನಿನ್ನಲ್ಲಿಯೂ ವಿಶ್ವದಲ್ಲಿಯೂ ಏಕರೂಪವಾಗಿದ್ದ ಆ ಪರಾತ್ಪರನಿಗೆ ನಿನ್ನ ಸರ್ವಕರ್ಮಗಳನ್ನು ಪ್ರಥಮದಲ್ಲಿ ಯಜ್ಞದಂತೆ ಅರ್ಪಿಸು, ಕೊನೆಯಲ್ಲಿ ಪರಮಾತ್ಮನೂ ವಿಶ್ವಾತ್ಮನೂ ನಿನ್ನ ಮುಖಾಂತರ ಜಗತ್ತಿನಲ್ಲಿ ಅವನ ಸಂಕಲ್ಪವನ್ನೇ ಕರ್ಮ ವ್ಯಾಪಾರಗಳನ್ನೇ ನಡೆಯಿಸುವಂತೆ ನಿನ್ನ ಸರ್ವಸ್ವವನ್ನೂ ನೀನು ಗೈಯುವ ಕರ್ಮವನ್ನೂ ಆತನಿಗೆ ಅರ್ಪಿಸು. ಇದೇ ನಾನು ನಿನಗೆಸಗುವ ಪರಿಹಾರವು. ಇದರ ಹೊರತು ಬೇರೆ ಉಪಾಯವಿಲ್ಲವೆಂದು ನಿನಗೆ ಕೊನೆಯಲ್ಲಿ ಬೋಧೆಯಾಗುವದು.

## ಅಸ್ತಿತ್ವದ ಎರಡು ಮುಖ

ಇಲ್ಲಿ ನಾವು ಮೂಲಭೂತ ವಿರೋಧದ ವಿಷಯದಲ್ಲಿ ಗೀತೆಯ ಅಭಿಪ್ರಾಯವನ್ನು ವಿಶದಪಡಿಸುವುದು ಅಗತ್ಯವಿದೆ; ಉಳಿದ ಭಾರತೀಯ ದರ್ಶನಗಳಂತೆ ಗೀತೆಯೂ ಈ ವಿರೋಧದ ಮೇಲೆಯೆ ತನ್ನ ನಿಲುಮೆಯನ್ನು ಪ್ರಸ್ಥಾಪಿಸಿದೆ. ನಿಜವಾದ ಆತ್ಮನ ಶೋಧನೆಯಾಗಲಿ, ನಮ್ಮಲ್ಲಿ ಹಾಗೂ ಸರ್ವಭೂತಗಳಲ್ಲಿ ಇರುವ ದೇವತ್ವದ ಪರಿಜ್ಞಾನವಾಗಲಿ ಸುಲಭವಲ್ಲ. ಮನಸ್ಸಿನಿಂದ ಗ್ರಹಿಸಿದ್ದರೂ ಇಂಥ ಜ್ಞಾನವನ್ನು ನಮ್ಮ ಚೇತನದ ಸತ್ವವನ್ನಾಗಿ, ನಮ್ಮ ಕರ್ಮದ ಸಮಗ್ರ ಪ್ರೇರಣೆಯನ್ನಾಗಿ ಮಾರ್ಪಡಿಸುವುದು ಸುಲಭವಲ್ಲ. ಕರ್ಮವೆಲ್ಲವೂ ನಮ್ಮ ಸತ್ತೆಯ ಕ್ರಿಯಾಸಾಮರ್ಥ್ಯ ಸ್ಥಿತಿಯಿಂದ ನಿರ್ಧರಿಸಲ್ಪಡುತ್ತದೆ. ನಮ್ಮ ಸತ್ತೆಯ ಕ್ರಿಯಾ ಸಾಮರ್ಥ್ಯ ಸ್ಥಿತಿಯು ನಮ್ಮ ಸಂತತ ಸ್ವಾವಲೋಕನಾಪರ ಸಂಕಲ್ಪ ಹಾಗು ಕಾರ್ಯಶೀಲ ಚೇತನದ ಸ್ಥಿತಿಯಿಂದಲೂ, ಅದರ ಚಲನಾತ್ಮಕ ಗತಿಯ ಆಧಾರದಿಂದಲೂ ನಿರ್ಧರಿಸಲ್ಪಡುತ್ತದೆ. ನಾವು ನಮ್ಮನ್ನು, ಜಗತ್ತಿನೊಡನೆ ನಮಗಿರುವ ಸಂಬಂಧದ ಅರ್ಥವನ್ನೂ ನಮ್ಮ ಸಮಗ್ರ ಕಾರ್ಯಶೀಲ ಸ್ವಭಾವದಿಂದ ಹೇಗೆ ನೋಡಿ ನಂಬುವೆವೋ, ನಮ್ಮ ವಿಶ್ವಾಸ ನಮ್ಮ ಶ್ರದ್ಧೆ ಎಂಥವೋ ಅಂತೆಯೇ ನಮ್ಮ ಇಂದಿನ ಸತ್ವವು ಇರುವುದು. ಆದರೆ ಮಾನವನ ಚೇತನವು ಇಬ್ಬಗೆಯಾದದ್ದು. ಜೀವನದ ಇಬ್ಬಗೆಯ ಸತ್ಯಕ್ಕೆ ಅದು ಅನುಗುಣವಾಗಿರುತ್ತದೆ. ಆಂತರಿಕ ಸದ್ವಸ್ತುವಿನ ಸತ್ಯವೊಂದಿದೆ ಹಾಗು ಬಾಹ್ಯ ರೂಪಿನ ಸತ್ಯವೊಂದಿದೆ. ಇವೆರಡರಲ್ಲಿ ಯಾವುದನ್ನು ಮಾನವನು ಜೀವನ ತತ್ವವನ್ನಾಗಿ ಅವಲಂಬಿಸುವನೋ ಅದರಂತೆ ಅವನು ಮಾನವಸಹಜವಾದ ಅಜ್ಞಾನದಲ್ಲಿ ವ್ಯವಹರಿಸುವ ಮನವಾದರೂ ಆಗುವನು, ದೈವೀ-ಜ್ಞಾನದಲ್ಲಿ ನೆಲೆಯೂರಿ ನಿಂತ ಆತ್ಮನಾದರೂ ಆಗುವನು.

ಬಾಹ್ಯ ರೂಪದಲ್ಲಿ ಅಸ್ತಿತ್ವದ ಸತ್ಯವೆಂದರೆ ನಾವು ಪ್ರಕೃತಿ ಅಥವಾ ನಿಸರ್ಗ ವೆಂದು ಕರೆಯುವುದು ಮಾತ್ರ. ಈ ಶಕ್ತಿಯು ಸತ್ತೆಯ ಯಂತ್ರವಾಗಿ ಸಮಗ್ರ ಸೂತ್ರವಾಗಿ ಕಾರ್ಯಮಾಡುತ್ತದೆ, ಮನಸ್ಸಿಗೂ ಇಂದ್ರಿಯಗಳಿಗೂ ವಿಷಯವಾದ ಜಗತ್ತನ್ನು ಸೃಜಿಸುತ್ತದೆ. ಜೀವಿಗೂ ಅವನು ವಾಸಿಸುವ ಬಾಹ್ಯ ಜಗತ್ತಿಗೂ ಸಂಬಂಧವನ್ನು ಕಲ್ಪಿಸಲು ಸಾಧನಗಳಾದ ಮನಸ್ಸನ್ನೂ ಇಂದ್ರಿಯಗಳನ್ನೂ ಸಹ ಈ ಶಕ್ತಿಯೇ ಸೃಜಿಸುತ್ತದೆ. ಬಾಹ್ಯ ರೂಪದಲ್ಲಿ ಮಾನವನು ತನ್ನ ಆತ್ಮ, ಮನ, ಪ್ರಾಣ ದೇಹಗಳಿಂದ ಕೂಡಿದವನಾಗಿ ಪ್ರಕೃತಿಯ ಸಂತಾನದಂತೆ ತೋರುತ್ತಾನೆ. ತನ್ನ ದೇಹ–ಪ್ರಾಣ–ಮನಗಳ ಪ್ರತ್ಯೇಕತೆಯಿಂದ, ವಿಶೇಷವಾಗಿ ತನ್ನ ಅಹಂಭಾವದ ಮೂಲಕ ಅವನು ಇತರರಿಂದ ಭಿನ್ನನಾಗಿ ಇದ್ದಾನೆ. ಈ ಅಹಂಭಾವವು ಅವನಿ ಗಾಗಿಯೇ ನಿರ್ಮಿಸಿದ ಸೂಕ್ಷ್ಮಯಂತ್ರವು. ತನ್ಮೂಲಕ ಅವನು ಈ ತೀವ್ರ ಪ್ರತ್ಯೇಕತೆ ಭಿನ್ನತೆಗಳ ಅರಿವನ್ನು ದೃಢೀಕರಿಸಲು ಕೇಂದ್ರೀಕರಿಸಲು ಬಹುದು. ಅವನಲ್ಲಿಯ ಸರ್ವಸ್ವವೂ, ಅವನ ಮನಸ್–ಚೈತನ್ಯವೂ ಅದರ ಕ್ರಿಯೆಯೂ, ಅವನ ಪ್ರಾಣ– ದೇಹಗಳ ಕಾರ್ಯನಿರ್ವಹಣೆಯೂ ಅವನ ಸ್ವಭಾವ ಧರ್ಮದಿಂದ ನಿರ್ಧರಿಸಲ್ಪಡು ವುದು ಸ್ಪಷ್ಟವೆ ಇದೆ. ಅವಾವೂ ಸ್ವಭಾವಧರ್ಮವನ್ನು ಅತಿಕ್ರಮಿಸಲಾರವು. ಬೇರೆ ರೀತಿಯಲ್ಲಿ ಕಾರ್ಯವೆಸಗಲಾರವು. ಮಾನವನು ತನ್ನ ವೈಯಕ್ತಿಕ ಸಂಕಲ್ಪಕ್ಕೆ ತನ್ನ ಅಹಂಕಾರದ ಸಂಕಲ್ಪಕ್ಕೆ ಸ್ವಲ್ಪ ಸ್ವಾತಂತ್ರ್ಯವಿರುವುದೆಂದು ಭಾವಿಸಿರುತ್ತಾನೆ. ನಿಜ. ಆದರೆ ನಿಜವಾಗಿ ಹೊತ್ತದಲ್ಲಿ ಅದು ಮಿಥ್ಯೆಯೇ. ಏಕೆಂದರೆ ಪ್ರಕೃತಿಯು ಅವನನ್ನು ಕುರಿತು ಮಾಡಿದ ಸೃಷ್ಟಿವಿಶೇಷದೊಡನೆ, ಪ್ರಕೃತಿಯು ನಿರ್ಮಿಸಿದ ಬದ ಲಾಗುತ್ತಿರುವ ಮನ–ಪ್ರಾಣ–ದೇಹಗಳೊಡನೆ ಅವನು ತಾದಾತ್ಮ್ಯ ಹೊಂದುವಂತೆ ಮಾಡುವ ಭಾವವೇ ಅವನ ಅಹಂಸ್ವರೂಪ. ಈ ಅಹಂ ವ್ಯಕ್ತಿತ್ವವು ತಾನೇ ಪ್ರಕೃತಿಯ ಕೃತಿಗಳ ಪರಿಣಾಮ. ಅಹಂಸ್ವಭಾವದಂತೆ ಸಂಕಲ್ಪವಿರುವುದು. ಸಂಕಲ್ಪಕ್ಕೆ ಅನುಗುಣವಾಗಿ ಅವನು ನಡೆಯಲೇಬೇಕು. ಅನ್ಯರೀತಿಯಲ್ಲಿ ನಡೆಯಲು ಸಾಧ್ಯವಿಲ್ಲ.

ಮನುಷ್ಯನಿಗೆ ತನ್ನ ಬಗ್ಗೆ ಇರುವ ಸಾಮಾನ್ಯ ಅರಿವು, ತನ್ನ ಸತ್ಯದ ಬಗ್ಗೆ ಅವನಿಗಿದ್ದ ಶ್ರದ್ಧೆ ಇಂತಿದೆ. ತಾನು ಪ್ರಕೃತಿಯ ಅಧೀನ, ಪ್ರತ್ಯೇಕವಾದ ಅಹಂ- ಜೀವಿ. ಇತರರೊಡನೆ, ಜಗತ್ತಿನೊಡನೆ ತಾನು ಕಲ್ಪಿಸಿಕೊಳ್ಳುವ ಸಂಬಂಧಗಳಲ್ಲಿ ತನ್ನ ಯಾವದೇ ವಿಕಾಸವನ್ನು ಮಾಡಿಕೊಳ್ಳುವುದರಲ್ಲಿ ತನ್ನ ಯಾವದೇ ಇಚ್ಛೆ, ಆಶೆ, ಮನಸ್ಸಿನ ವಿಚಾರಗಳನ್ನು ತೃಪ್ತಿಪಡಿಸಿಕೊಳ್ಳುವದರಲ್ಲಿ ಅವನು ಪ್ರಕೃತಿಯು ಒಪ್ಪಿದ ಪರಿಮಿತಿಯಲ್ಲಿ ಉಳಿದು ತನ್ನ ಜೀವನವನ್ನು ಪ್ರಕೃತಿಯ ಅಭೀಷ್ಟ ಅಥವಾ ನಿಯಮದಂತೆ ನೆರವೇರಿಸುವನು.

ಆದರೆ ಈ ಸೂತ್ರದ ನಿಷ್ಠುರತೆಗೆ ಒಳಗಾಗದ ಯಾವದೋ ಒಂದು ವಸ್ತುವು ಮಾನವನ ಚೇತನದಲ್ಲಿದೆ. ಜೀವನದ ಅಂತಃಸತ್ಯದಲ್ಲಿ ಮಾನವನಿಗೆ ಶ್ರದ್ಧೆಯಿದೆ. ಅವನ ಆತ್ಮವಿಕಾಸವಾದಂತೆ ಆ ಶ್ರದ್ಧೆಯೂ ಹೆಚ್ಚು ಹೆಚ್ಚಾಗುತ್ತದೆ. ಸತ್ಯದ

ಈ ಆಂತರಿಕ ತತ್ತ್ವದ ದೃಷ್ಟಿಯಿಂದ ಅಸ್ತಿತ್ವದ ಸತ್ಯವು ಪ್ರಕೃತಿಯಾಗಿರದೆ ಆತ್ಮ-ತತ್ತ್ವವಾಗಿದೆ, ಪುರುಷನಾಗಿದೆ. ಪ್ರಕೃತಿಯಾದರೋ ಸ್ವತಃ ಆತ್ಮತತ್ತ್ವದ ಒಂದು ಶಕ್ತಿಯಾಗಿದೆ. ಪುರುಷನ ಶಕ್ತಿಯೇ ಪ್ರಕೃತಿ. ಬ್ರಹ್ಮನು ಆತ್ಮನು ಪುರುಷನು ಸರ್ವಗತನಾಗಿದ್ದು ಈ ಜಗತ್ತಿನ ಅಧಿಪತಿಯಾಗಿರುವನು. ಈ ಜಗತ್ತು ಆ ಪುರುಷನ ಆವಿರ್ಭಾವದ ಅಂಶವು ಮಾತ್ರ. ಪುರುಷನು ಪ್ರಕೃತಿಗೂ ಆಕೆಯ ಕೃತಿಗೂ ಆಧಾರನಾಗಿದ್ದಾನೆ. ಅವನ ಅನುಮತಿಯಿಂದಲೆ ಆಕೆಯ ನಿಯಮವು ಅಲಂಘ್ಯವಾಗುವುದಲ್ಲದೆ ಅವಳ ಶಕ್ತಿಯೂ ಅದರ ರೀತಿಗಳೂ ಕಾರ್ಯಕ್ಷಮವಾಗುತ್ತವೆ. ಪ್ರಕೃತಿಯಲ್ಲಿದ್ದ ಪುರುಷನೇ ಆಕೆಗೆ ಪ್ರಕಾಶವನ್ನೀಯುತ್ತ ಅವಳನ್ನು ಸಚೇತನಳನ್ನಾಗಿ ಮಾಡುವ ಜ್ಞಾತೃವಾಗಿದ್ದಾನೆ. ಈ ಪುರುಷನ ಸಂಕಲ್ಪವೇ ಅಂತಃಸ್ಥವಾದ ಅತಿಚೇತನದ ಸಂಕಲ್ಪವಾಗಿದ್ದು ಪ್ರಕೃತಿಯ ಕೃತಿಗಳನ್ನು ಪ್ರೇರಿಸುತ್ತದೆ, ಪ್ರಚೋದಿಸುತ್ತದೆ. ಮಾನವನಲ್ಲಿಯು ಆತ್ಮನು ಈ ದೇವತ್ವದ ಅಂಶವೇ ಆಗಿದ್ದು ಆತನ ಸ್ವಭಾವವನ್ನೇ ಪಡೆದಿದ್ದಾನೆ. ನಮ್ಮ ಸ್ವಭಾವವು ನಮ್ಮ ಆತ್ಮದ ಆವಿಷ್ಕಾರವಾಗಿದೆ, ಅದರ ಅನುಮತಿಯಿಂದಲೆ ಕಾರ್ಯಪ್ರವೃತ್ತವಾಗುತ್ತದೆ ಮತ್ತು ಅದರ ರಹಸ್ಯ ಆತ್ಮ-ಜ್ಞಾನವನ್ನೂ, ಆತ್ಮ ಪ್ರಜ್ಞೆಯನ್ನೂ ಸತ್-ಸಂಕಲ್ಪವನ್ನೂ ಪ್ರಕೃತಿಯ ಗತಿ-ಆಕೃತಿ-ವಿಕೃತಿಗಳಲ್ಲಿ ಮೂರ್ತಿಮತ್ತಾಗಿ ಮಾಡುತ್ತದೆ.

ನಮ್ಮ ನಿಜವಾದ ಅಂತರಾತ್ಮವು ಬುದ್ಧಿಗೆ ಅಗೋಚರವಾಗಿದೆ; ಏಕೆಂದರೆ ಈ ಬುದ್ಧಿಯು ಅಂತಃಸ್ಥ ವಿಷಯಗಳನ್ನು ಅರಿಯದೆ ತಪ್ಪು ರೀತಿಯಿಂದ ತಾದಾತ್ಮ್ಯ ಹೊಂದುತ್ತ ಮನ-ಪ್ರಾಣ-ದೇಹಗಳ ಬಾಹ್ಯ ಯಾಂತ್ರಿಕತೆಯಲ್ಲಿಯೆ ತತ್ಪರವಾಗಿ ಬಿಡುತ್ತದೆ. ಆದರೆ ಮಾನವನ ಕ್ರಿಯಾಪರ ಆತ್ಮವು ಒಮ್ಮೆ ತನ್ನ ಪ್ರಕೃತಿಯ ಉಪಕರಣಗಳೊಡನೆ ತಾದಾತ್ಮ್ಯವನ್ನು ನಿರಾಕರಿಸಿ ಹಿಂತೆಗೆಯಬಲ್ಲುದಾದರೆ, ತನ್ನ ಅಂತಃಸತ್ಯದ ಸಂಪೂರ್ಣ ಶ್ರದ್ಧೆಯಲ್ಲಿ ನೋಡಿ ನಡೆಯುವುದಾದರೆ,– ಆಗ ಎಲ್ಲವೂ ಅದಕ್ಕೆ ಪರಿವರ್ತಿತ ರೂಪದಲ್ಲಿ ತೋರುವುದು; ಜೀವನವೂ ಅಸ್ತಿತ್ವವೂ ಬೇರೊಂದು ಮುಖವನ್ನೇ ತಾಳುವುವು. ಕರ್ಮವು ಬೇರೊಂದು ಅರ್ಥವನ್ನೂ ಲಕ್ಷಣವನ್ನೂ ಸೂಚಿಸುವುದು. ಆಗ ನಮ ಸತ್ವವು ಪ್ರಕೃತಿಯ ಈ ಅಲ್ಪ ಅಹಂಭಾವದ ಸೃಷ್ಟಿಯಾಗಿ ಉಳಿಯದೆ ಒಂದು ದಿವ್ಯವಾದ, ಅಮರವಾದ ಆಧ್ಯಾತ್ಮಿಕ ಶಕ್ತಿಯ ಮಹತ್ತನ್ನು ಪ್ರಕಟಿಸುವದು. ನಮ್ಮ ಚೇತನವು ಈ ಸಾಂತವಾದ ಪ್ರಯತ್ನ-ಪರಿಶ್ರಮ ಪೂರಿತವಾದ ಮನೋಮಯ ಪ್ರಾಣಮಯ ಜೀವಿಯ ಚೇತನವಾಗಿ ಉಳಿಯದೆ ಅನಂತವಾದ ದಿವ್ಯವಾದ ಆಧ್ಯಾತ್ಮಿಕ ಚೇತನವಾಗಿ ಪರಿಣಮಿಸುವದು. ನಮ್ಮ ಸಂಕಲ್ಪವೂ ಕೃತಿಯೂ ಸಹ ಈ ಪರಿಮಿತ ವ್ಯಕ್ತಿತ್ವದ ಮತ್ತು ಅದರ ಅಹಂಕಾರದ ಸಂಕಲ್ಪ-ಕೃತಿಗಳಾಗಿ ಉಳಿಯದೆ ದಿವ್ಯ ಆಧ್ಯಾತ್ಮಿಕ ಸಂಕಲ್ಪ-ಕೃತಿಗಳಾಗಿ, ಮಾನವ ರೂಪದ ಮುಖಾಂತರ ಸ್ವಚ್ಛಂದವಾಗಿ ಕರ್ಮಗೈಯುವ ವಿಶ್ವಾತ್ಮನ, ಪರಮಾತ್ಮನ, ಸರ್ವಾತ್ಮನ ಶಕ್ತಿ ಸಂಕಲ್ಪಗಳಾಗಿ ಪರಿಣಮಿಸುವವು.

## ಅನುಗ್ರಹವನ್ನು ಪಡೆಯಲು ಬೇಕಾದ ಪರಿವರ್ತನೆ: ಅದರ ಸ್ವರೂಪ, ಲಕ್ಷಣಗಳು

ನರನಲ್ಲಿರುವ ನಾರಾಯಣ ಸ್ವರೂಪದ ಭಗವಾನ್ ಶ್ರೀ ಕೃಷ್ಣನ ಸಂದೇಶವು ಹೀಗೆ ಮುಂದುವರಿದಿದೆ: "ಇದೇ ಮಹಾ ಪರಿವರ್ತನೆ, ರೂಪಾಂತರ. ಈ ಪರಿವರ್ತನೆಯನ್ನು ಪಡೆಯಲೆಂದೇ ಅನುಗ್ರಹಕ್ಕೆ ಪಾತ್ರರಾದವರನ್ನು ನಾನು ಕರೆಯುತ್ತೇನೆ. ಯಾರು ಯಾರು ಪ್ರಕೃತಿಯ ಉಪಕರಣಗಳ ಅಜ್ಞಾನದಿಂದ ವಿಮುಖರಾಗಿ ಆತ್ಮದ ಬಹು ಆಳವಾದ ಅನುಭವ, ಆ ಅನುಭವಕ್ಕೆ ಲಭ್ಯವಾದ ಅಂತರಾತ್ಮನ ಜ್ಞಾನ, ಭಗವತ್-ಸಂಪರ್ಕ, ದೈವೀ ಅನುಭೂತಿಗೆ ಅಗತ್ಯವಾದ ಅರ್ಹತೆ ಇವುಗಳತ್ತ ಹೊರಳುವರೋ ಅವರೆಲ್ಲಾ ನನ್ನ ಅನುಗ್ರಹಕ್ಕೆ ಪಾತ್ರರೇ. ಈ ಶ್ರದ್ಧೆ-ಯನ್ನು ಈ ಮಹತ್ತರವಾದ ಧರ್ಮವನ್ನೂ ಸ್ವೀಕರಿಸಬಲ್ಲವರೆಲ್ಲರೂ ನನ್ನ ಕೃಪೆ-ಯನ್ನು ಪಡೆಯುವರು. ಮಾನವನ ಬುದ್ಧಿಯು ಯಾವಾಗಲೂ ಸ್ವಕಲ್ಪಿತ ಮೇಘ-ಸದೃಶ ಆಕೃತಿಗಳಿಗೆ, ಅವಿದ್ಯಾಜನಿತ ಅಪೂರ್ಣ ಜ್ಯೋತಿಗಳಿಗೆ ಇನ್ನೂ ಗಾಢತರ ತಿಮಿರಾವೃತವಾದ ಮನ-ಪ್ರಾಣ-ದೇಹಭಾಗಗಳಿಗೆ ಸಂಬಂಧಪಟ್ಟ ರೂಢಿಗಳಿಗೆ ಅಂಟಿಕೊಂಡಿರುವುದರಿಂದ ಅದು ಈ ಶ್ರದ್ಧೆ ಧರ್ಮಗಳನ್ನು ಅಳವಡಿಸಿಕೊಳ್ಳುವುದು ನಿಜವಾಗಿಯೂ ಕಠಿಣವೇ ಸರಿ. ಆದರೆ ಒಮ್ಮೆ ಈ ಪ್ರಾಪ್ತಿಯನ್ನು ಪಡೆದರೆ ಪಥವು ಮಹಾಪಥವಾಗುವದು, ನಿಶ್ಚಿತವಾದುದಾಗುವುದು, ತಾರಕವಾಗುವುದು. ಏಕೆಂದರೆ ಅದು ಮಾನವನ ಸತ್ತೆಯ ನಿಜವಾದ ಸತ್ಯದೊಡನೆ ಒಂದೇ ಆಗಿದೆ, ಅವನ ಅಂತರಾಳದ ಅತ್ಯುತ್ಕೃಷ್ಟ ಸ್ವಭಾವದ ಸಪ್ರಮಾಣವಾದ ಚಲನೆಯೇ ಆಗಿದೆ.

"ಆಗಬೇಕಾದ ಪರಿವರ್ತನೆಯು ಅತಿ ಮಹತ್ತಾದುದು, ಅದು ಬಹು ದೊಡ್ಡ ರೂಪಾಂತರವೇ ಸರಿ. ನಿನ್ನ ಸಮಸ್ತ ಸತ್ವವೂ ಸ್ವಭಾವವೂ ಸಂಪೂರ್ಣವಾಗಿ ಪಲ್ಲಟಗೊಂಡು ರೂಪಾಂತರವಾಗದ ಹೊರತು ಆ ಪರಿವರ್ತನೆ ಸಂಭವಿಸಲಾರದು. ನಿನ್ನ ಆತ್ಮ, ನಿನ್ನ ಸ್ವಭಾವ, ನಿನ್ನ ಜೀವನಗಳನ್ನು ಪರಾತ್ಪರನಿಗೆ ಸಂಪೂರ್ಣವಾಗಿ ಅರ್ಪಿಸುವ ಅಗತ್ಯವಿದೆ. ಈ ಸಮರ್ಪಣೆ ಮಾತ್ರ ಪರಾತ್ಪರನ ಹೊರತು ಯಾರಿಗೂ ಅನ್ವಯಿಸತಕ್ಕದ್ದಲ್ಲ. ಯಾವುದನ್ನು ಪರಿಗ್ರಹಿಸಿದರೂ ಪರಾತ್ಪರನ ಪ್ರೀತ್ಯರ್ಥವಾಗಿಯೇ ಇರಬೇಕು. ಎಲ್ಲವೂ ಭಗವಂತನಲ್ಲಿ ಗರ್ಭಿತವಾಗಿದೆಯೆಂದೂ, ಆತನ ರೂಪವೇ ಆಗಿರುವುದೆಂದೂ ಆತನಿಗಾಗಿಯೇ ಎಂದೂ ಸ್ವೀಕರಿಸಬೇಕೇ ವಿನಾ ಬೇರೆ ಅರ್ಥದಲ್ಲಿ ಅಲ್ಲ. ಹೊಸ ಸತ್ಯದ ಪ್ರವೇಶಕ್ಕೆ ಅನುಮತಿಸುವ ಅಗತ್ಯವಿದೆ. ತಾನು–ಇತರರು–ಜಗತ್ತು–ದೇವರು–ಆತ್ಮ ಮತ್ತು ಪ್ರಕೃತಿ ಇವುಗಳ ಬಗ್ಗೆ ಅಳವಡಿಸಿಕೊಳ್ಳಬೇಕಾದ ಹೊಸ ಜ್ಞಾನದತ್ತ, ಏಕತ್ವದ ಜ್ಞಾನದತ್ತ, ವಿಶ್ವ–ಪರಮಾತ್ಮನ ಜ್ಞಾನದತ್ತ ನಿನ್ನ ಮನವನ್ನು ಸಂಪೂರ್ಣವಾಗಿ ತಿರುಗಿಸಿ ಅರ್ಪಿಸುವ ಅಗತ್ಯವಿದೆ. ಈ ಜ್ಞಾನವು ಮೊದಲು ಬುದ್ಧಿಗ್ರಹೀತವಾಗಿದ್ದು

ಕೊನೆಯಲ್ಲಿ ಒಂದು ದರ್ಶನವಾಗಿಯೂ, ಒಂದು ಚೇತನವಾಗಿಯೂ ಆತ್ಮದ ಒಂದು ಶಾಶ್ವತ ಅವಸ್ಥೆಯಾಗಿಯೂ ಅದರ ಚಲನಗಳ ಚೌಕಟ್ಟಾಗಿಯೂ ಪರಿಣಮಿಸ ಬೇಕು.

ಈ ಹೊಸ ಜ್ಞಾನವನ್ನು, ದರ್ಶನವನ್ನು, ಚೇತನವನ್ನು ಕರ್ಮದ ಹೇತು ವನ್ನಾಗಿ ಮಾಡಲು ಒಂದು ಸಂಕಲ್ಪ ಬೇಕು. ಹೀಗೆ ಪ್ರೇರಿತವಾದ ಕರ್ಮವು ಮನ ಸ್ಸಿಲ್ಲದ ಕರ್ಮವಾಗಬಾರದು. ಪ್ರಕೃತಿಯು ಕೆಲವೊಂದು ಆವಶ್ಯಕ ವ್ಯಾಪಾರಗಳಿ ಗಾಗಲಿ, ಆಕಾರ ಮಾತ್ರ ಪೂರ್ಣತೆಗೆ ನೆರವಾಗುವಂತೆ ತೋರುವ ಕೆಲವೊಂದು ವಿಷಯಗಳಿಗಾಗಲಿ ಮರ್ಯಾದಿತವಾದ ಕರ್ಮವಾಗಿರಬಾರದು. ಹಾಗೆ ಮರ್ಯಾದಿತ ವಾಗಿದ್ದಲ್ಲಿ ಒಂದು ಬಗೆಯ ಧಾರ್ಮಿಕ ಪ್ರವೃತ್ತಿಗೆ ಅಥವಾ ವೈಯಕ್ತಿಕ ಮೋಕ್ಷಕೆ ಅನುಕೂಲವಾಗುವದು ಅಷ್ಟೇ. ಆದರೆ ಈ ಹೊಸ ಜ್ಞಾನ ಪ್ರೇರಿತವಾದ ಕರ್ಮ ವೆಂದರೆ ಈಶ್ವರನ ಪ್ರೀತ್ಯರ್ಥವಾಗಿ ಸರ್ವಭೂತ ಹಿತಾರ್ಥವಾಗಿ ಸಮತಾಭಾವದಿಂದ ಕೈಕೊಂಡ ಮಾನವ ಜೀವನದ ಸಕಲ ಕರ್ಮವೇ ಆಗಿದೆ. ಪರಾತ್ಪರನನ್ನು ಉದ್ದೇಶಿಸಿದ ಅನನ್ಯವಾದ ಅಭೀಪ್ಸೆಯಿಂದ, ಅನನ್ಯವಾದ ಭಕ್ತಿಯಿಂದ, ಅನನ್ಯ ವಾದ ಭಗವದಾರಾಧನೆಯಿಂದ ಉತ್ಕರ್ಷಗೊಂಡ ಹೃದಯವು ಅಗತ್ಯ. ಇದಲ್ಲದೆ ಎಲ್ಲರಲ್ಲಿಯೂ ಭಗವಂತನನ್ನು ಆಲಿಂಗನದಿಂದ ಅನುಭವಿಸುವ ಪ್ರಶಾಂತವೂ ವಿವೇಕ ಯುಕ್ತವೂ ಆದ ಹೃದಯದ ವೈಶಾಲ್ಯವು ಸಹ ಬೇಕು. ಈಗಿರುವ ಮಾನವನ ರೂಢಿ ಗತ ಸಾಮಾನ್ಯ ಸ್ವಭಾವವು ಪರಮ ದಿವ್ಯ ಆಧ್ಯಾತ್ಮಿಕ ಸ್ವಭಾವವಾಗಿ ಪರಿಣಮಿಸುವ ಅಗತ್ಯವಿದೆ. ಒಂದೇ ಶಬ್ದದಲ್ಲಿ ಹೇಳುವುದಾದರೆ, 'ಪೂರ್ಣಯೋಗದ' ಅವಶ್ಯಕತೆ ಯಿದೆ; ಈ ಪೂರ್ಣಯೋಗವು ಏಕಕಾಲಕ್ಕೆ ಸಮಗ್ರ ಜ್ಞಾನದ ಯೋಗವೂ ಆಗಿದೆ, ಸಮಗ್ರ ಸಂಕಲ್ಪದ ಹಾಗು ಅದರ ಕರ್ಮಗಳ ಯೋಗವೂ ಆಗಿದೆ, ಸಮಗ್ರ ಪ್ರೇಮ–ಭಕ್ತಿ–ಆರಾಧನೆಗಳ ಯೋಗವೂ ಆಗಿದೆ, ಅರ್ಥಾತ್ ಸರ್ವ ಸತ್ವದ ಸರ್ವಾಂಗ ಸರ್ವಸ್ಥಿತಿ ಸರ್ವಶಕ್ತಿ ಸರ್ವಗತಿಗಳ ಸಮಗ್ರ ಆಧ್ಯಾತ್ಮಿಕ ಪರಿಪೂರ್ಣತೆಯ ಯೋಗವಾಗಿದೆ.

## ಭಗವಂತನ ಸ್ವರೂಪ

ಬುದ್ಧಿಯು ಒಪ್ಪಬೇಕಾದ, ಆತ್ಮದ ಶ್ರದ್ಧೆಯು ಆಧಾರ ಕೊಡಬೇಕಾದ, ಮನ–ಪ್ರಾಣ–ಹೃದಯಗಳು ವಾಸ್ತವ ಸಜೀವವೆಂದು ಅರಿಯಬೇಕಾದ ಈ ಜ್ಞಾನ ವಾದರೂ ಅದೆಂತಹದು? ಏಕಮೇವಾದ್ವಿತೀಯನಾಗಿಯೂ ಅಖಂಡ ಪರಿ ಪೂರ್ಣನಾಗಿಯೂ ಇರುವ ಆ ಪರಮಾತ್ಮನನ್ನು ಕುರಿತ ಜ್ಞಾನವೇ ಅದು. ಕಾಲ ದೇಶಾತೀತನಾಗಿಯೂ ತನ್ನ ಸಗುಣ–ನಿರ್ಗುಣ ಅಂತಸ್ತುಗಳಿಗೆ ಅದೆಷ್ಟೋ ಅತೀತ ನಾಗಿ ಉನ್ನತನಾಗಿಯೂ ಇರುವ ಆ ಸನಾತನನ್ನು ಅರಿಯುವುದೇ ಜ್ಞಾನ. ಅವ ನಿಂದಲೇ ಸರ್ವವೂ ಉದ್ಭವಿಸುತ್ತದೆ. ಬಹುವಿಧವಾದ ಪ್ರಕೃತಿಯೂ ಅವಳ ವಸ್ತು

ಸಮೂಹವೂ ಅವನನ್ನೇ ಆವಿಷ್ಕರಿಸುತ್ತದೆ. ಅವನನ್ನು ನಿರ್ಗುಣ ಸನಾತನ ನಿರ್ವಿ-ಕಾರ ಆತ್ಮವೆಂದು ಅರಿಯುವುದೇ **ಜ್ಞಾನವು.** ಅನಂತವಾದ, ಸಮನಾದ, ಸರ್ವಕಾಲ ದಲ್ಲಿಯೂ ಒಂದೇ ಆದ, ಸತತವಾಗಿ ಬದಲಾಗುತ್ತಿರುವ ಪ್ರತ್ಯೇಕ ವ್ಯಕ್ತಿಗಳ, ಆತ್ಮ ಶಕ್ತಿಗಳ ಪ್ರಕೃತಿ ಶಕ್ತಿಗಳ ಸಮೂಹದ ನಡುವೆ, ಈ ಅನಿತ್ಯ ಹಾಗೂ ತೋರಿಕೆಯ ಜೀವನದ ರೂಪವಿಶೇಷಗಳ, ಶಕ್ತಿಗಳ, ಸಂಭವನೀಯ ಘಟನೆಗಳ ನಡುವೆ ನಿರ್ಲಿಪ್ತ ವಾಗಿ ಪರಿವರ್ತನೆಗೆ ಒಳಗಾಗದೆ ಉಳಿಯುವ, ನಾವು ಆತ್ಮವೆಂದು ಸಂಬೋಧಿಸುವ ಪ್ರಶಾಂತವಾದ ಪರಿಮಿತಿಯಿಲ್ಲದ ವಸ್ತುವೇ ಅವನೆಂದು ಅರಿಯುವುದು **ಜ್ಞಾನ.** ಪ್ರಕೃತಿಯಲ್ಲಿ ಸಂತತವಾಗಿ ಮಾರ್ಪಡುವಂತೆ ತೋರುವ ಶಕ್ತಿಯೇ ಅವನು, ಕ್ಷರ ಪುರುಷನೇ ಅವನು; ಒಂದೊಂದು ರೂಪವನ್ನೂ ಧರಿಸುತ್ತ, ತನ್ನ ಶಕ್ತಿಯ ವಿವಿಧ ಕಾರ್ಯಕಲಾಪ, ಶಕ್ತಿಯ ಪ್ರಮಾಣ-ಅಂತಸ್ತುಗಳಿಗೆ ತಕ್ಕಂತೆ ಹೊಂದಿಕೊಳ್ಳು ತ್ತಿರುವ ಅಂತರ್ನಿವಾಸಿಯೂ ಅವನೇ; ಅವನೇ ಸಕಲ ಸ್ಥಾವರ ಜಂಗಮ ಸೃಷ್ಟಿ ಯಾಗಿ ಪರಿಣಮಿಸಿದ್ದಾನೆ, ಮಾನವ-ಪಶು-ಪಕ್ಷ್ಯಾದಿಗಳಲ್ಲಿ ನಿವಸಿಸುತ್ತಾನೆ; ಅವನೇ ಜ್ಞಾತ-ಜ್ಞೇಯ ಸ್ವರೂಪಿ, ಆತ್ಮ-ಮನ-ಪ್ರಾಣ-ಶರೀರಗಳೂ ಅವನೇ; ಪ್ರತಿ ಜೀವ, ಶಕ್ತಿ, ಸರ್ವಭೂತಾತ್ಮನೂ ಅವನೇ; ಹೀಗಿದ್ದರೂ ಈ ಎಲ್ಲ ಸೃಷ್ಟಿ ಗಿಂತ ಎಂದಿಗಾದರೂ ಅದೆಷ್ಟೋ ಅಧಿಕನಾಗಿದ್ದಾನೆ,—ಭಗವಂತನನ್ನು ಇಂತೆಂದು ತಿಳಿಯುವುದೇ **ಜ್ಞಾನ.**

ಸತ್ಯದ ಕೇವಲ ಒಂದು ಪಕ್ಷವನ್ನು ಎತ್ತಿ ಹಿಡಿಯುವುದರಿಂದ ಈ ಯೋಗ ವನ್ನು ನೀನು ಅಭ್ಯಸಿಸಲಾರೆ. ಯಾವ ಭಗವಂತನನ್ನು ನೀನು ಅನ್ವೇಷಿಸಬೇ ಕಾಗಿದೆಯೋ, ಯಾವ ಆತ್ಮನನ್ನು ನೀನು ಪರಿಶೋಧಿಸಬೇಕಾಗಿದೆಯೋ, ಯಾವ ಪರಮಾತ್ಮನ ಸನಾತನ ಅಂಶವೇ ನಿನ್ನ ಜೀವಾತ್ಮನು ಆಗಿರುವನೋ ಅವನು ಏಕ ಕಾಲದಲ್ಲಿ ಈ ಎಲ್ಲವೂ ಆಗಿರುವನು; ನೀನಾದರೂ ಇವೆಲ್ಲವನ್ನೂ ಒಂದೇ ಸಮಯ ದಲ್ಲಿ ಪರಮ ಏಕತ್ವಭಾವದಿಂದ ಅರಿಯಬೇಕು, ಏಕಕಾಲದಲ್ಲಿ ಅವುಗಳೊಳಗೆ ಪ್ರವೇಶಿಸಬೇಕು. ಎಲ್ಲ ಅವಸ್ಥೆಗಳಲ್ಲಿ, ಎಲ್ಲ ವಸ್ತುಗಳಲ್ಲಿ, ಆತನೊಬ್ಬನನ್ನೇ ಕಾಣ ಬೇಕು. ಆತನು, ಪ್ರಕೃತಿಯಲ್ಲಿ ವ್ಯತ್ಯಾಸ ಹೊಂದುತ್ತಿರುವ ಆತ್ಮನು ಮಾತ್ರವಾಗಿ ದ್ದಲ್ಲಿ ಅನಂತಕಾಲದ ವಿಶ್ವಸಂಭೂತಿಯೊಂದೇ ಕ್ರಮವಾಗಿರುತ್ತಿತ್ತು. ಈ ಒಂದು ದೃಷ್ಟಿಗೇ ನಿನ್ನ ಶ್ರದ್ಧೆಯನ್ನೂ ಜ್ಞಾನವನ್ನೂ ಪರಿಮಿತಿಗೊಳಿಸಿದರೆ, ನಿನ್ನ ವ್ಯಕ್ತಿತ್ವವನ್ನೂ ಅದರ ಸತತ ಬದಲಾಗುತ್ತಿರುವ ರೀತಿಗಳನ್ನೂ ಮೀರಿ ಆಚೆಗೆ ಹೋಗಲಾರೆ. ಇಂಥ ಅಸ್ತಿಭಾರದ ಮೇಲೆ ನೆಲೆಯೂರಿ ನಿಂತರೆ ನೀನು ಪ್ರಕೃತಿಯ ಚಕ್ರಗತಿಯಲ್ಲಿ ಬದ್ಧನಾಗುವೆ. ಆದರೆ ನೀನು ಕಾಲದಲ್ಲಿ ಪ್ರಕಟವಾಗುವ ಕೇವಲ ಆತ್ಮಾವಸ್ಥೆಗಳ ಕ್ಷಣ-ಪರಂಪರೆಯಲ್ಲ. ನಿನ್ನ ವ್ಯಕ್ತಿತ್ವವಾಹಿನಿಗೆ ಆಧಾರವಾಗಿರುವ ನಿರ್ವ್ಯಕ್ತಿಕ ಆತ್ಮವೊಂದಿದೆ. ಈ ವ್ಯಕ್ತಿತ್ವ-ನಿರ್ವ್ಯಕ್ತಿತ್ವಗಳಾಚೆಗೆ ಅಗಣಿತವಾಗಿ, ನಿನ್ನ ಇಲ್ಲಿಯ ಇರವಿನ ಈ ಎರಡು ಅಚಲ ಧ್ರುವಗಳನ್ನೂ ನಿಯಮಿಸುತ್ತಾ

ನೀನು ಸನಾತನ ವಿಶ್ವಾತೀತ ತತ್ತ್ವದಲ್ಲಿ ಸನಾತನನಾಗಿ ವಿಶ್ವಾತೀತನಾಗಿ ಇರುವೆ.

ಕ್ರಿಯೆ ಎಸಗದ, ಸೃಷ್ಟಿಯಲ್ಲಿ ತೊಡಗದ ಸನಾತನ ನಿರ್ಗುಣ ಆತ್ಮವು ಸತ್ಯ ಸರ್ವಸ್ವವಾಗಿದ್ದರೆ, ಜಗತ್ತೂ ನಿನ್ನ ಆತ್ಮವೂ ನಿಜವಾದ ಆಧಾರವಿಲ್ಲದ ಭ್ರಾಂತಿಗಳಾಗಿ ಪರಿಣಮಿಸುವುವು. ಈ ಪ್ರತ್ಯೇಕ ದೃಷ್ಟಿಗೇ ನಿನ್ನ ಶ್ರದ್ಧೆ ಜ್ಞಾನಗಳನ್ನು ಸಂಕುಚಿತ ಮಾಡಿದ್ದಾದರೆ ಜೀವನ-ಕರ್ಮಗಳ ಸಂನ್ಯಾಸವೇ ನಿನ್ನ ಏಕಮಾತ್ರ ಸಾಧನಸಂಪತ್ತಾಗಿ ಉಳಿಯುವದು. ಆದರೆ ಜಗತ್ತಿನಲ್ಲಿಯ ಭಗವಂತನೂ ಜಗತ್ತಿನಲ್ಲಿಯ ನೀನೂ ಸತ್ಯಾಂಶಗಳೇ; ಜಗತ್ತೂ ಹಾಗೂ ನೀನು ಪರಮಾತ್ಮನ ಆವಿಷ್ಕಾರಗಳೇ, ನಿಜ ಹಾಗು ಪ್ರತ್ಯಕ್ಷ ಶಕ್ತಿಗಳೇ. ಆದುದರಿಂದ ಜೀವನ-ಕರ್ಮಗಳನ್ನು ಅವಲಂಬಿಸು, ಅವುಗಳನ್ನು ನಿರಾಕರಿಸಬೇಡ. ನಿನ್ನ ನಿರ್ವ್ಯಕ್ತಿಕ ಸ್ವರೂಪದಲ್ಲಿ ನೀನು ಸತ್ಯತಃ ಭಗವಂತನೊಡನೆ ಏಕನಾಗಿರುವೆ. ಪರಮೇಶ್ವರನ ಸನಾತನ ಅಂಶನಾಗಿರುವೆ; ನಿನ್ನ ಆಧ್ಯಾತ್ಮಿಕ ವ್ಯಕ್ತಿತ್ವವು ತನ್ನ ಅನಂತತೆಯಲ್ಲಿಯೇ ಪ್ರೀತಿ ಭಕ್ತಿಗಳನ್ನು ಪಡೆದುದಾಗಿ ಭಗವಂತನತ್ತ ಒಲಿದುದಾಗಿದೆ. ನಿನ್ನ ಪ್ರಕೃತಿ ಸತ್ತೆಯನ್ನು ದೈವವು ಬಗೆದಂತೆ ಕರ್ಮಗಳ ಉಪಕರಣವನ್ನಾಗಿ, ಪಾತ್ರವನ್ನಾಗಿ, ಭಗವಂತನ ಒಂದು ಶಕ್ತಿಯನ್ನಾಗಿ ಮಾಡು. ತನ್ನ ಸತ್ಯದಲ್ಲಿ ಅದು ಎಂದಿಗೂ ಹಾಗೆ ಆಗಿರುವುದು. ಆದರೆ ಈಗ ಪ್ರಜ್ಞಾರಹಿತವಾಗಿ ಅಪರಿಪೂರ್ಣವಾಗಿ ಅಪರಾ ಪ್ರಕೃತಿಯ ಪ್ರಭಾವದಿಂದ ನಿನ್ನ ಅಹಂಭಾವದಿಂದ ನಿನ್ನ ಸತ್ತೆಯು ದೇವಾಂಶದ ವಿಕೃತಿ-ವಿವಂಚನೆಗಳಿಗೆ ಗುರಿಯಾಗಿದೆ. ಅದನ್ನು ಪ್ರಜ್ಞೆಯಿಂದ ಪೂರ್ಣವಾಗಿ, ಅಹಂಭಾವದಿಂದ ರೂಪಗೆಡದೆ, ಭಗವಂತನ ಆಧ್ಯಾತ್ಮಿಕ ಪರಾಪ್ರಕೃತಿಯ ಶಕ್ತಿಯಂತೆ ಮಾಡು; ಅವನ ಸಂಕಲ್ಪ ಹಾಗೂ ಕರ್ಮಗಳಿಗೆ ವಾಹಕವನ್ನಾಗಿ ಮಾಡು. ಇಂತು ನೀನು ನಿನ್ನ ಸ್ವಂತ ಸತ್ತೆಯ ಸಮಗ್ರ ಸತ್ಯದಲ್ಲಿ ಜೀವಿಸುವೆ. ನೀನು ಸಮಗ್ರ ಭಗವದೈಕ್ಯವನ್ನೂ, ಸಂಪೂರ್ಣವಾದ ಹಾಗು ಸರ್ವ ಲೋಪದೋಷರಹಿತವಾದ ಯೋಗವನ್ನೂ ಪ್ರಾಪ್ತಮಾಡಿಕೊಳ್ಳುವೆ.

ಪರಾತ್ಪರನು ಪುರುಷೋತ್ತಮನೇ ಆಗಿರುವನು, ಎಲ್ಲ ಆವಿಷ್ಕಾರದ ಆಚೆ ಶಾಶ್ವತನಾಗಿರುವನು. ಕಾಲ ದೇಶ ನಿಮಿತ್ತಗಳ ಅಥವಾ ತನ್ನ ಅಸಂಖ್ಯಾತ ಗುಣಗಳ, ಲಕ್ಷಣಗಳ, ಯಾವೊಂದರ ಮಿತಿಯನ್ನೂ ಮೀರಿ ಅನಂತನಾಗಿರುವನು. ಆದರೆ ತನ್ನ ಪರಮ ಶಾಶ್ವತತೆಯಲ್ಲಿ ಇಲ್ಲಿ ಸಂಭವಿಸುವ ಘಟನೆಗಳಿಗೆ ಸಂಬಂಧವಿಲ್ಲದವನೆಂದಾಗಲೀ, ಈ ಜಗತ್ತು ಹಾಗು ಪ್ರಕೃತಿಯಿಂದ ವಿಚ್ಛೇದಿತನೆಂದಾಗಲೀ, ಈ ಎಲ್ಲ ಜೀವಿಗಳ ಬಗ್ಗೆ ಉದಾಸೀನನಾಗಿರುವನೆಂದಾಗಲೀ ಇದರ ಅರ್ಥವಲ್ಲ. ಅವನೇ ಪರಮ ಅನಿರ್ವಚನೀಯ ಬ್ರಹ್ಮನು, ನಿರ್ವ್ಯಕ್ತಿಕ ಆತ್ಮನು; ಸಕಲ ವ್ಯಕ್ತಿಗತ ಜೀವರಾಶಿಯೂ ಅವನೇ. ಇಲ್ಲಿಯ ಆತ್ಮ, ಜೀವ, ಜಡ, ಪುರುಷ, ಪ್ರಕೃತಿ, ಹಾಗೂ ಪ್ರಕೃತಿಯ ಕೃತಿಗಳು,— ಇವೆಲ್ಲ ಅವನ ಅನಂತ ಹಾಗೂ ಶಾಶ್ವತವಾದ

ಅಸ್ತಿತ್ತ್ವದ ಮುಖಗಳೇ, ಚಲನೆಗಳೇ ಆಗಿವೆ. ಅವನು ಪರಮ ವಿಶ್ವಾತೀತ ಆತ್ಮನು. ಅವನಿಂದಲೇ ಎಲ್ಲವೂ ಆವಿಷ್ಕರಣಕ್ಕೆ ಇಳಿಯುವುದು. ಎಲ್ಲವೂ ಅವನ ರೂಪಗಳೇ, ಆವನ ಸ್ವ-ಶಕ್ತಿಗಳೇ ಆಗಿರುವವು. ಏಕಾತ್ಮನಾಗಿದ್ದು ಅವನು ಇಲ್ಲಿ ಸರ್ವಗತ ನಾಗಿರುವನು, ಸಮನಾಗಿರುವನು; ಮಾನವನಲ್ಲಿ, ಪಶುವಿನಲ್ಲಿ, ವಸ್ತುಜಾತದಲ್ಲಿ, ಪ್ರಕೃತಿಯ ಪ್ರತಿ ಶಕ್ತಿಯಲ್ಲಿ ನಿರ್ವ್ಯಕ್ತಿಕನಾಗಿರುವನು. ಅವನೇ ಪರಮ ಆತ್ಮ; ಎಲ್ಲ ಆತ್ಮರೂ ಈ ಏಕ ಆತ್ಮನ ನಿರಂತರವಾಗಿ ಪ್ರಜ್ವಲಿಸುವ ಜ್ವಾಲೆಗಳೇ–ಸಕಲ ಜೀವರಾಶಿಗಳೂ ತಮ್ಮ ಆಧ್ಯಾತ್ಮಿಕ ವ್ಯಕ್ತಿತ್ವದಲ್ಲಿ ಈ ಏಕಮೇವಾದ್ವಿತೀಯ ಪುರುಷನ ಅಮರ ಸತ್ವಾಂಶಗಳೇ ಆಗಿರುವುವು. ಎಲ್ಲ ಆವಿಷ್ಕೃತ ಜೀವನದ ಒಡೆಯನು ಅವನು. ಲೋಕಗಳ, ಲೋಕಪ್ರಾಣಿಗಳ ಪ್ರಭುವು ಅವನೇ. ಸರ್ವ ಕರ್ಮಗಳ ಸರ್ವಶಕ್ತ ಸೂತ್ರಧಾರನು ಅವನಾಗಿರುವನು; ತನ್ನ ಕರ್ಮಗಳಿಂದ ಬಂಧಿತನಲ್ಲ; ಎಲ್ಲ ಕರ್ಮವೂ ಉದ್ಯಮವೂ ಯಜ್ಞವೂ ಅವನಿಗೇ ಸಲ್ಲುವವು. ಅವನು ಎಲ್ಲಗಲ್ಲಿರುವನು; ಎಲ್ಲರೂ ಅವನಲ್ಲಿರುವರು. ಅವನೇ ಸಮಸ್ತವಾಗಿ ಪರಿಣಮಿಸಿದ್ದರೂ, ಸಮಸ್ತವನ್ನೂ ಆವನು ಮೀರಿರುವನು. ಸಮಸ್ತದ ಮೇಲಿರು ವನು. ತನ್ನ ಸೃಷ್ಟಿವಸ್ತುಗಳಿಂದ ಪರಿಮಿತನಲ್ಲ. ಅವನು ವಿಶ್ವಾತೀತ ಭಗವಂತನು; ಅವನೇ ಅವತಾರಿಯಾಗಿ ಇಳಿದು ಬರುವನು; ತನ್ನ ಶಕ್ತಿರೂಪದಲ್ಲಿ ವಿಭೂತಿಯಲ್ಲಿ ಪ್ರಕಟನಾಗಿರುವನು; ಪ್ರತಿ ಮಾನವ ಜೀವಿಯಲ್ಲಿ ಗುಹ್ಯನಾಗಿರುವ ಪರಮೇಶ್ವರನೂ ಅವನೇ. ಮಾನವರು ಆರಾಧಿಸುವ ದೇವತೆಗಳೆಲ್ಲಾ ಆತನ ವ್ಯಕ್ತಿತ್ವವಿಶೇಷಗಳೇ, ರೂಪನಾಮಗಳೇ, ಒಂದೇ ಒಂದಾದ ದಿವ್ಯ ಅಸ್ತಿತ್ವದ ಮನಃಕಲ್ಪಿತ ದೇಹಗಳೇ.

ಪರಮಾತ್ಮನು ತನ್ನ ಆಧ್ಯಾತ್ಮಿಕ ಸತ್ಯದಿಂದ ತನ್ನ ಅನಂತ ಅಸ್ತಿತ್ವದಲ್ಲಿಯೇ ಜಗತ್ತನ್ನು ಆವಿಷ್ಕಾರ ಮಾಡಿರುವನು. ತನ್ನನ್ನೇ ಜಗತ್ತಿನಲ್ಲಿ ವಿವಿಧವಾಗಿ ಅಭಿ ವ್ಯಕ್ತ ಮಾಡಿಕೊಂಡಿದ್ದಾನೆ. ಎಲ್ಲ ವಸ್ತುಗಳೂ ಅವನ ಶಕ್ತಿಗಳೇ, ರೂಪರೇಖೆಗಳೇ. ಈ ಶಕ್ತಿಗಳಿಗೆ ರೂಪರೇಖೆಗಳಿಗೆ ಅಂತವಿಲ್ಲ. ಏಕೆಂದರೆ ಅವನೇ ಅನಂತನಾಗಿರುವನು. ಸಮಸ್ತವನ್ನೂ ವ್ಯಾಪಿಸಿರುವ, ಸಮಸ್ತವನ್ನೂ ಒಳಗೊಂಡಿರುವ ನಿರ್ವ್ಯಕ್ತಿಕ ಸ್ವಯಂಭೂ–ಸತ್ತೆಯಾಗಿದ್ದು, ಅವನು ಸಮನಾಗಿ, ಪಕ್ಷಪಾತ-ಅಭಿಮಾನವಿಲ್ಲದೆ ಯಾವೊಂದು ವ್ಯಕ್ತಿ, ವಸ್ತು, ಘಟನೆ ಅಥವಾ ಲಕ್ಷಣಕ್ಕೆ ಅಂಟಿಕೊಂಡಿರದೆ, ಕಾಲ ದಲ್ಲಿ ವಿಶ್ವದಲ್ಲಿ ಪ್ರಕಟಗೊಂಡ ಈ ಅನಂತ ಸೃಷ್ಟಿಯನ್ನು ಪ್ರೇರಿಸುತ್ತಾನೆ, ಭರಿಸು ತ್ತಾನೆ. ಈ ಶುದ್ಧ ಸಮ ಆತ್ಮನು ಕ್ರಿಯೆ ಎಸಗುವದಿಲ್ಲ; ಆದರೆ ಎಲ್ಲ ವಸ್ತುಗಳ ಕ್ರಿಯೆಗೂ ನಿಷ್ಪಕ್ಷಪಾತವಾದ ಆಧಾರನಾಗಿದ್ದಾನೆ. ವಿಶ್ವ-ಪುರುಷನ ಪಾತ್ರದಲ್ಲಿ ಕಾಲ-ಪುರುಷನ ಪಾತ್ರದಲ್ಲಿ ತನ್ನ ಅನೇಕ ಸಾಮೂಹಿಕ ಶಕ್ತಿಯಾಗಿ ಪರಿಣಮಿಸುವ, ನಾವು ಪ್ರಕೃತಿಯೆಂದು ಕರೆಯುವ ಪುರುಷನ ಶಕ್ತಿಯ ಮುಖಾಂತರ **ಪರಾತ್ಪರನೇ**. ಜಗತ್ತಿನ ಕರ್ಮವ್ಯಾಪಾರವನ್ನು ಸಂಕಲ್ಪಿಸುವನು, ನಿರ್ವಹಿಸುವನು, ನಿರ್ಧರಿಸು–

ವನು. ಸೃಷ್ಟಿ-ಸ್ಥಿತಿ-ಲಯ ಕಾರಣನು ಅವನೇ. ಸರ್ವಭೂತ ಹೃದಯನಿವಾಸಿ ಯಾಗಿದ್ದು, ವ್ಯಕ್ತಿಯಲ್ಲಿ ರಹಸ್ಯ ಶಕ್ತಿ ಸ್ವರೂಪನಾಗಿ, ಅಂತೆಯೇ ವಿಶ್ವಾಂತ ರ್ಯಾಮಿಯಾಗಿ, ಪ್ರಕೃತಿಯ ಬಲದಿಂದ ಅವನು ತನ್ನ ರಹಸ್ಯದ ಯಾವುದೋ ಒಂದು ಮಾರ್ಗವನ್ನು ಪ್ರಕೃತಿಯ ಗುಣದ ಪ್ರಕೃತಿಯ ಕಾರ್ಯನಿರ್ವಹಣ ಶಕ್ತಿಯ ರೀತಿಯಲ್ಲಿ ಆರಂಭ ಮಾಡುತ್ತಾನೆ, ಪ್ರಕಟಗೊಳಿಸುತ್ತಾನೆ. ಒಂದೊಂದು ವಸ್ತು ವನ್ನೂ ಜೀವವನ್ನೂ ಅದರದರ ಜಾತಿಯಂತೆ ರೂಪಿಸುತ್ತಾನೆ. ಸರ್ವ ಕರ್ಮ ವನ್ನೂ ಆರಂಭ ಮಾಡುತ್ತಾನೆ. ಸರ್ವಕರ್ಮಕ್ಕೂ ಆಧಾರನಾಗಿರುತ್ತಾನೆ. ಪರಾತ್ಪರನಿಂದ ಸಂಭವಿಸಿದ ಈ ವಿಶ್ವಾತೀತ ಕಾರ್ಯಾರಂಭ–ಕ್ರಮವೇ, ಈ ಒಂದು ಸಂಗತಿಯೇ ವಸ್ತುಗಳಲ್ಲಿ ಜೀವಿಗಳಲ್ಲಿ ಸಂತತವಾಗಿ ನಡೆದಿರುವ ಭಗವಂತನ ಈ ವ್ಯಷ್ಟಿಗತ ಸಮಷ್ಟಿಗತ ಆವಿಷ್ಕರಣವೇ ಸೃಷ್ಟಿಯ, ಜಗತ್ತಿನ ಜಟಿಲ ಸ್ವರೂಪಕ್ಕೆ ಕಾರಣವಾಗಿದೆ.

## ಸ್ಥಿತಿ ತ್ರಯ

ಪರಮಪುರುಷನ ಈ ಮೂರು ಶಾಶ್ವತ ಸ್ಥಿತಿಗಳು ಎಂದಿಗೂ ಇರುವುವೇ. ಅಸ್ತಿತ್ವದಲ್ಲಿರುವ ಎಲ್ಲ ವಸ್ತುಗಳಿಗೂ ಆಧಾರವಾಗಿ ಯಾವಾಗಲೂ ಹಾಗೂ ಎಂದೆಂದಿಗೂ ಈ ಏಕವಾದ ಶಾಶ್ವತವಾದ ಭೇದವನ್ನು ಅರಿಯದ ಸ್ವಯಂಭೂ ತತ್ವವು ಇದೆ. ಪ್ರಕೃತಿಯಲ್ಲಿ ಮಾರ್ಪಡುತ್ತಿರುವ ಪುರುಷನು (ಕ್ಷರ ಪುರುಷನು) ಯಾವಾಗಲೂ ಹಾಗೂ ಎಂದೆಂದಿಗೂ ಇದ್ದಾನೆ. ಪ್ರಕೃತಿಯ ಈ ಎಲ್ಲ ಜೀವ ರಾಶಿಗಳು ಅವನನ್ನೇ ಆವಿಷ್ಕರಿಸುತ್ತವೆ. ಒಂದೇ ಸಮಯದಲ್ಲಿ ಈ ಉಳಿದ ಎರಡಾಗಿಯೂ ಇರಬಲ್ಲ ವಿಶ್ವಾತೀತ ಭಗವಂತನೂ ಯಾವಾಗಲೂ ಹಾಗೂ ಎಂದೆಂದಿಗೂ ಇದ್ದಾನೆ. ಅವನು ಶುದ್ಧ ಪ್ರಶಾಂತ ಆತ್ಮನಾಗಿರಬಲ್ಲನು. ಹಾಗೂ ಅದೇ ಕಾಲದಲ್ಲಿ ವಿಶ್ವದ ಯುಗ-ಚಕ್ರಗಳ ಪ್ರಾಣಸ್ವರೂಪನಾಗಿ ಕಾರ್ಯಪರ ಆತ್ಮನಾಗಿಯೂ ಇರಬಲ್ಲನು. ಏಕೆಂದರೆ ಅವನು ಈ ಎರಡರಿಂದ ಭಿನ್ನನಾಗಿರು ವನು. ಪ್ರತ್ಯೇಕವಾಗಿ ನೋಡಿದರೂ ಅಥವಾ ಒಟ್ಟಾಗಿ ನೋಡಿದರೂ ಇವೆರಡ ಕ್ಕಿಂತಲೂ ಅಧಿಕನಾಗಿರುವನು. ಈ **ಆತ್ಮನ** ಆತ್ಮನಾಗಿ, ಪರಾತ್ಪರನ ಸಚೇತನ ಶಕ್ತಿಯಾಗಿ ನಮ್ಮಲ್ಲಿ **ಜೀವ**ನಿದ್ದಾನೆ. ಜೀವನು ತನ್ನ ಅಂತರ್ಯದಲ್ಲಿ ಅಂತರ್ವಾಸಿ ಯಾದ ಸಮಗ್ರ ಭಗವಂತನನ್ನು ಪಡೆದಿರುತ್ತಾನೆ. ಪ್ರಕೃತಿಯಲ್ಲಿ ವಿಶ್ವವ್ಯಾಪ್ತಿ ಯಾದ ಭಗವಂತನನ್ನು ಆಶ್ರಯಿಸುತ್ತಾನೆ. ಜೀವನು ತಾತ್ಕಾಲಿಕ ಸೃಷ್ಟಿಯಲ್ಲ; ಶಾಶ್ವತ **ಆತ್ಮ**ನಲ್ಲಿ, ಶಾಶ್ವತ **ಅನಂತ**ನಲ್ಲಿ ಸಂಚಲಿಸುವ ಕ್ರಿಯೆ ಎಸಗುವ ಶಾಶ್ವತ ಆತ್ಮನು ಅವನಾಗಿದ್ದಾನೆ.

ನಮ್ಮೊಳಗಿರುವ ಜಾಗೃತ ಜೀವಾತ್ಮನು ಆತ್ಮದ ಈ ಮೂರು ಸ್ಥಿತಿಗಳಲ್ಲಿ ಯಾವುದನ್ನಾದರೂ ಅವಲಂಬಿಸಬಲ್ಲನು. ಮಾನವನು ಕ್ಷರ ಪ್ರಕೃತಿಯನ್ನೇ

ಆಶ್ರಯಿಸಬಹುದು, ಕೇವಲ ಅದರಲ್ಲಿಯೇ ಜೀವಿಸಬಹುದು. ಅಂಥವನು ತನ್ನ ನಿಜ ಆತ್ಮನ ಅರಿವಿಲ್ಲದೆ, ತನ್ನೊಳಗಿರುವ ದೇವಾಂಶದ ಪರಿಜ್ಞಾನವಿಲ್ಲದೆ, ಪ್ರಕೃತಿಯನ್ನು ಮಾತ್ರ ಅರಿತವನಾಗಿರುವನು; ಅವನು ಅವಳನ್ನು ಯಂತ್ರಸದೃಶವಾದ ಕಾರ್ಯನಿರ್ವಾಹಕ ಹಾಗು ಸೃಷ್ಟಿಸಮರ್ಥ ಶಕ್ತಿ ಎಂದು ಕಾಣುವನು; ಅವಳ ವಿಶ್ವದಲ್ಲಿ ಅಹಂಯುಕ್ತ ವ್ಯಕ್ತಿಗಳು, ಪ್ರತ್ಯೇಕಿಸಿದ ಜೀವಿಗಳು ಎಂದು ಬಗೆಯುವನು. ಇಂತು ಅವನು ಈಗ ಸ್ಥೂಲ ರೀತಿಯಲ್ಲಿ ಮೇಲುಮೇಲೆ ವ್ಯವಹರಿಸುತ್ತಾನೆ. ಪರಿಸ್ಥಿತಿಯು ಹೀಗಿರುವವರೆಗೆ ಮತ್ತು ಅವನು ಈ ಬಾಹ್ಯ ಚೇತನವನ್ನು ತೂರೆದು ಮುಂದೆ ಹೋಗಿ ತನ್ನ ಅಂತರ್ಯವನ್ನು ತಿಳಿಯುವವರೆಗೆ, ಅವನ ವೈಚಾರಿಕ-ವೈಜ್ಞಾನಿಕ ಸಂಪತ್ತೆಲ್ಲ ಕೇವಲ ತೆರೆಯಮೇಲೆ ಹೊರಭಾಗದ ಮೇಲೆ ಚೆಲ್ಲಿದ ಪ್ರಕಾಶದ ಛಾಯೆಯಾಗಿರುತ್ತದೆ. ಈ ಅಜ್ಞಾನವು ಜನಿಸುವುದು ಸಾಧ್ಯ; ಏಕೆಂದರೆ ಅಂತಃಸ್ಥನಾದ ಭಗವಂತನು ತನ್ನ ಯೋಗಮಾಯೆಯಿಂದ ಅದೃಶ್ಯನಾಗಿರುವನು, ಈ ಕಾರಣದಿಂದಲೇ ಅಜ್ಞಾನವು ವಿಧಿತವಾಗಿರುವುದೆಂದೂ ಹೇಳಬಹುದು. ಅವನ ಮಹತ್ತರ ಸತ್ಯವು ನಮ್ಮ ದೃಷ್ಟಿಗೆ ಅಗೋಚರವಾಗಿದೆ. ಏಕೆಂದರೆ ಪಾಕ್ಷಿಕ ಆವಿಷ್ಕಾರದಲ್ಲಿ ಅವನು ತನ್ನ ಸೃಷ್ಟಿವಿಶೇಷಗಳೊಡನೆ ಮೂರ್ತಿ-ರೂಪಗಳೊಡನೆ ಸಂಪೂರ್ಣವಾಗಿ ತಾದಾತ್ಮ್ಯವನ್ನು ಹೊಂದಿರುವನು; ತನ್ನ ಪ್ರಕೃತಿಯ ಭ್ರಾಮಕ ವ್ಯಾಪಾರಗಳಲ್ಲಿ ಅವನಿಂದ ಸೃಷ್ಟಿಯಾದ ಮನಸ್ಸು ತಲ್ಲೀನಗೊಳ್ಳುವಂತೆಯೂ ಮಾಡಿರುವನು. ಅಜ್ಞಾನವು ಮತ್ತೂ ಸಾಧ್ಯ, ಏಕೆಂದರೆ ವಸ್ತುಗಳು ತತ್ವತಃ ನಿಜವಾದ, ಶಾಶ್ವತವಾದ ಆಧ್ಯಾತ್ಮಿಕ ಪ್ರಕೃತಿಯನ್ನೇ ತಮ್ಮ ರಹಸ್ಯವನ್ನಾಗಿ ಪಡೆದಿದ್ದರೂ ಅದನ್ನು ಬಾಹ್ಯ ಪ್ರಪಂಚದಲ್ಲಿ ವ್ಯಕ್ತಮಾಡಿಲ್ಲ. ನಾವು ಹೊರಗೆ ನೋಡಿದಾಗ ಕಾಣುವ ಪ್ರಕೃತಿಯು ನಮ್ಮ ದೇಹೇಂದ್ರಿಯ-ಮನಗಳಲ್ಲಿ ಕಾರ್ಯಮಾಡುವ ಪ್ರಕೃತಿಯು; ಅಪರಾಪ್ರಕೃತಿಯು, ಮತ್ತೊಂದರ ಉತ್ಪತ್ತಿಯು ಆಗಿದೆ. ಆತ್ಮದ ರೂಪಗಳನ್ನು ಸೃಜಿಸಿ ಆತ್ಮನನ್ನು ಆ ರೂಪಗಳಲ್ಲಿ ಮರೆಮಾಡಿ, ಸತ್ಯವನ್ನು ಮುಚ್ಚಿಟ್ಟು ಜನರು ಮುಖವಾಡಗಳತ್ತ ನೋಡುವಂತೆ ಮಾಡುವ ಮಾಯಗಾರನಾಗಿರುವುದು ಆ ಪ್ರಕೃತಿ. ಅದು ಗೌಣವಾದ ಹಾಗು ಅಲ್ಪ ಪ್ರಮಾಣದ ಮೌಲ್ಯಗಳ ಒಂದು ಮೊತ್ತವನ್ನು ಲಭ್ಯಮಾಡಿಕೊಡಬಲ್ಲ ಶಕ್ತಿಯಾಗಿರುವುದು. ಆದರೆ ಭಗವಂತನ ಆವಿಷ್ಕಾರದ ಪೂರ್ಣ ಶಕ್ತಿಯನ್ನೂ, ವೈಭವವನ್ನೂ ಆನಂದಾವೇಶವನ್ನೂ ಮಾಧುರ್ಯವನ್ನೂ ಅದು ಲಭ್ಯಮಾಡಿಕೊಡಲಾರದು. ನಮ್ಮೊಳಗಿರುವ ಈ ಪ್ರಕೃತಿಯು ಅಹಂಕಾರದ ಮಾಯೆಯಾಗಿದೆ, ದ್ವಂದ್ವಗಳ ತೊಡಕಾಗಿದೆ, ಅಜ್ಞಾನ ಹಾಗು ತ್ರಿಗುಣಗಳ ಜಾಲವಾಗಿದೆ. ಎಲ್ಲಿಯವರೆಗೆ ಮಾನವನ ಆತ್ಮವು ಮನ-ಪ್ರಾಣ ದೇಹಗಳ ಹೊರಗಣ ಸತ್ಯವನ್ನು ಆಶ್ರಯಿಸಿರುತ್ತದೆಯೋ, ಎಲ್ಲಿಯವರೆಗೆ ಮಾನವನು ತನ್ನ ಆತ್ಮದಲ್ಲಿ ನೆಲೆಗೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅವನು ಭಗವಂತನನ್ನೂ, ತನ್ನನ್ನೂ, ಜಗತ್ತನ್ನೂ ಯಥಾರ್ಥವಾಗಿ

ಕಾಣಲಾರ, ಈ ಮಾಯೆಯನ್ನು ಗೆಲ್ಲಲಾರ; ಅದರ ನಿಯಮಗಳಂತೆ ವೇಷ-ಭಾಷೆಗಳಂತೆ ವರ್ತಿಸಬೇಕಾಗುವುದು.

ಈಗ ಮಾನವನು ಆಶ್ರಯಿಸಿರುವ ತನ್ನ ಸ್ವಭಾವದ ಅಧಃಪ್ರವೃತ್ತಿಯಿಂದ ಹಿಂದಕ್ಕೆ ಸರಿದು, ನಿಜವಾಗಿಯೂ ಕತ್ತಲೆಯೇ ಆಗಿರುವ ಈ ಬೆಳಕಿನಿಂದ ಎಚ್ಚತ್ತು, ಶಾಶ್ವತವಾದ ವ್ಯತ್ಯಾಸವರಿಯದ ಸ್ವಯಂಭೂ ಸತ್ತೆಯ ಪ್ರಕಾಶಮಯ ಸತ್ಯದಲ್ಲಿ ಜೀವಿಸುವುದು ಸಾಧ್ಯ. ಆಗ ಮಾನವನು ತನ್ನ ವ್ಯಕ್ತಿತ್ವದ ಇಕ್ಕಟ್ಟಿನ ಸೆರೆಮನೆಯಲ್ಲಿ ಬಂದಿಯಾಗಿರುವುದಿಲ್ಲ; ಕ್ಷುದ್ರ ಪ್ರಾಪ್ತಿಗಾಗಿ ವಿಚಾರವ್ಯಯ ಮಾಡಿ, ಕೃತಿಗೈದು, ಸುಖದುಃಖಗಳನ್ನು ಅನುಭವಿಸಿ, ಹೋರಾಡಿ ಪರಿಶ್ರಮಿಸುವ ಈ ಕ್ಷುದ್ರ 'ಅಹಂ' ತಾನೇ ಎಂದು ಇನ್ನು ಮುಂದೆ ತಿಳಿಯುವುದಿಲ್ಲ. ಅವನು ವಿಶುದ್ಧ ಆತ್ಮದ ಮಹತ್ತಾದ ಸ್ವಚ್ಛಂದವಾದ ನಿರ್ಗುಣತ್ವದಲ್ಲಿ ಐಕ್ಯನಾಗಿರುವನು; ಅವನು ಬ್ರಹ್ಮನೇ ಆಗುವನು; ಸರ್ವವಸ್ತುಗತನಾಗಿರುವ ಏಕೈಕ ಆತ್ಮನೂ ತಾನೂ ಒಂದೇ ಎಂದು ತಿಳಿಯುವನು. ಅವನು ಇನ್ನು ಮುಂದೆ 'ಅಹಂ' ಜೀವಿಯಲ್ಲ; ದ್ವಂದ್ವಗಳಿಂದ ಅವನು ಬಂಧಿತನಲ್ಲ; ದುಃಖದ ಬೇಗುದಿಯು ಅವನಿಗಿಲ್ಲ; ಹರ್ಷವು ಅವನ ಚಿತ್ತವನ್ನು ವಿಕಾರಗೊಳಿಸುವುದಿಲ್ಲ; ಆಶೆಯಾದರೂ ಅದನ್ನು ಕಲಕುವುದಿಲ್ಲ; ಇನ್ನು ಮುಂದೆ ಅವನು ಪಾಪ ಪೀಡಿತನಲ್ಲ, ಅಥವಾ ಪುಣ್ಯದಿಂದಲಾದರೂ ಮಿತಿಗೊಂಡವನಲ್ಲ. ಇವುಗಳ ಛಾಯೆಯು ಇನ್ನೂ ಉಳಿದಿದ್ದರೆ ಪ್ರಕೃತಿಯು ತನ್ನ ಗುಣಗಳಿಗೆ ಅನುಸಾರವಾಗಿ ವರ್ತಿಸುವುದೇ ವಿನಾ ಬೇರೆಯಲ್ಲ ಎಂದು ಅವನು ಮನಗಾಣುವನು. ಈ ರೀತಿಗಳೂ ತಾನು ನೆಲೆಗೊಂಡಿರುವ ಆತ್ಮ ಸತ್ಯವೂ ಒಂದೆ ಎಂದು ಅವನು ಭಾವಿಸುವುದಿಲ್ಲ. ಪ್ರಕೃತಿಯು ಮಾತ್ರ ಕ್ರಿಯೆ ಎಸಗುವದು, ತನ್ನ ಯಾಂತ್ರಿಕ ರೂಪ-ರೇಖೆಗಳನ್ನು ಮೂಡಿಸುವುದು. ಆದರೆ ವಿಶುದ್ಧ ಆತ್ಮವು ಪ್ರಶಾಂತವಾಗಿ, ಕ್ರಿಯಾರಹಿತವಾಗಿ, ಸ್ವತಂತ್ರವಾಗಿ ಉಳಿಯುವುದು. ಸ್ಥಿರವಾಗಿ, ಪ್ರಕೃತಿಯ ಕಾರ್ಯಕಲಾಪಗಳಿಂದ ನಿರ್ಲಿಪ್ತವಾಗಿ, ಅವುಗಳನ್ನು ಪೂರ್ಣ ಸಮತೆಯಿಂದ ಈ ವಿಶುದ್ಧ ಆತ್ಮವು ಕಾಣುವುದು. ತಾನು ಈ ವಸ್ತುಗಳಿಂದ ಭಿನ್ನವೆಂಬುದನ್ನು ಅರಿಯುವುದು. ಈ ಆಧ್ಯಾತ್ಮಿಕ ಸ್ಥಿತಿಯು ಪ್ರಶಾಂತತೆಯನ್ನೂ ಸ್ವೇಚ್ಛೆಯನ್ನೂ ಅದರ ಸಂಗಡ ತರುವುದು. ಆದರೆ ಕಾರ್ಯ-ಪರ ಶಕ್ತಿ-ಯುತ ದೈವತ್ವವನ್ನು ತರುವುದಿಲ್ಲ, ಸಮಗ್ರ ಪರಿಪೂರ್ಣತೆಯನ್ನು ತರುವುದಿಲ್ಲ. ಅದು ಒಂದು ದೊಡ್ಡ ಹೆಜ್ಜೆಯೇ ಸರಿ; ಆದರೆ ಅದು ಸಮಗ್ರವಾದ ಭಗವತ್-ಜ್ಞಾನವಾಗಲಿ ಆತ್ಮ-ಜ್ಞಾನವಾಗಲಿ ಅಲ್ಲ.

ಪರಮೋನ್ನತ ಹಾಗು ಸಮಗ್ರ ಭಗವಂತನನ್ನು ಆಶ್ರಯಿಸುವುದರಿಂದಲೇ, ಅವನಲ್ಲಿ ಜೀವಿಸುವುದರಿಂದಲೇ ಲೋಪದೋಷಗಳಿಲ್ಲದ ಪರಿಪೂರ್ಣತೆಯು ಕೈಗೂಡುವುದು. ಆಗ ಭಗವದಂಶನಾದ ಮಾನವನ ಜೀವಾತ್ಮವು ಭಗವಂತನೊಡನೆ ಸಂಯೋಗವಾಗುವುದು. ಸರ್ವಪ್ರಾಣಿಗಳೊಡನೆ ಏಕವಾಗುವುದು. ಆಗ ಅದು

ವಿಮುಕ್ತವಾಗಿರುವುದಲ್ಲದೆ ಪರಮಾನಂದದಲ್ಲಿ ಮುಳುಗಿ, ತನ್ನ ಅಂತಿಮ ಪರಿಪೂರ್ಣತೆಯನ್ನೈದಲು ಸಿದ್ಧವಾಗಿ, ಪೂರ್ತಿಯೂ ಆಗುವುದು. ಈ ತರುವಾಯ ಅವನ ಜ್ಞಾನಚಕ್ಷುವಿಗೆ ಹಾಗು ಕರ್ಮಚಕ್ಷುವಿಗೆ ಸರ್ವವೂ ಭಗವಂತನ ಸಂಕಲ್ಪ-ಕಾರ್ಯಪರಿಣಾಮವಾಗಿ ಗೋಚರಿಸುವುದು. ವಿಶ್ವಗತ ಚೈತನ್ಯಾಂಶನಾಗಿ ಶಕ್ತಿಯಾಗಿ ಆತ್ಮಸ್ವರೂಪನಾಗಿ ಅವನು ಜೀವಿಸುವನು, ಕರ್ಮಪರಾಯಣನಾಗುವನು. ವಿಶ್ವಾತೀತ ದಿವ್ಯಾನಂದದಿಂದ ಆಧ್ಯಾತ್ಮಿಕ ಆನಂದದಿಂದ ಅವನು ತುಂಬಿರುವನು. ಅವನ ಕರ್ಮವು ದಿವ್ಯ ಕರ್ಮವಾಗಿ ಪರಿಣಮಿಸುವುದು; ಅವನ ಧಾಮವು ಅತ್ಯುಚ್ಚ ಪರಂಧಾಮವಾಗುವುದು.

## ಜ್ಞಾನ ಪರಿವರ್ತನೆ

“ತಮ್ಮೊಳಗಿನ ದಿವ್ಯವಾಣಿಯನ್ನು ಯಾರು ಕೇಳಬಲ್ಲರೊ, ಈ ಶ್ರದ್ಧೆ ಹಾಗೂ ಜ್ಞಾನಗಳನ್ನು ಯಾರು ಅಳವಡಿಸಿಕೊಳ್ಳಬಲ್ಲರೋ ಅವರೆಲ್ಲರಿಗೆ ನಾನು ನೀಡುವ ಪರಿಹಾರವಿದೇ, ಮುಕ್ತಿ ಮಂತ್ರವಿದೇ. ಆದರೆ ಈ ಅತ್ಯುನ್ನತ ಸ್ಥಿತಿಯನ್ನು ಪಡೆಯಲು ಪ್ರಥಮ ಅಗತ್ಯ, ಮೂಲೋಪಾಯ, ಆಮೂಲಾಗ್ರದ ಕ್ರಮವೆಂದರೆ ನಿನ್ನ ಅಪರಾ ಪ್ರಕೃತಿಗೆ ಸೇರಿದ ಸರ್ವದಿಂದ ವಿಮುಖನಾಗುವುದು ಹಾಗೂ ನಿನ್ನ ಸಂಕಲ್ಪ-ಬುದ್ಧಿಗಳ ಏಕಾಗ್ರತೆಯಿಂದ ಸಂಕಲ್ಪ-ಬುದ್ಧಿಗಳಿಗಿಂತ ಉನ್ನತವಾದ, ಮನ-ಹೃದಯ-ಇಂದ್ರಿಯ-ದೇಹಗಳಿಗಿಂತ ಉನ್ನತವಾದ ತತ್ತ್ವದಲ್ಲಿ ನೀನು ನೆಲೆಗೊಳ್ಳುವುದು. ಎಲ್ಲಕ್ಕೂ ಮೊದಲು ನೀನು ನಿನ್ನ ಶಾಶ್ವತವಾದ ವ್ಯತ್ಯಾಸ-ವಿಕಾರವನ್ನರಿಯದ, ನಿರ್ವ್ಯಕ್ತಿಕ, ಸರ್ವಭೂತಗಳಲ್ಲಿ ಒಂದೇ ಆದ ಆತ್ಮನತ್ತ ತಿರುಗಬೇಕು, ಲಕ್ಷ್ಯವನ್ನು ಹೊರಳಿಸಬೇಕು. ಅಹಂ-ತತ್ತ್ವದಲ್ಲಿ ಮನಃಕಲ್ಪಿತ ವ್ಯಕ್ತಿತ್ವದಲ್ಲಿ ನೀನು ಎಲ್ಲಿಯವರೆಗೆ ವ್ಯವಹರಿಸುವೆಯೋ ಅಲ್ಲಿಯವರೆಗೆ ಕೊನೆಯಿಲ್ಲದೆ ಒಂದೇ ವೃತ್ತದಲ್ಲಿ ಸುತ್ತಿಯೆ ಸುತ್ತುತ್ತಿರುವೆ. ಹೊರಗೆ ಬರಲು ಮಾರ್ಗವಿರುವದಿಲ್ಲ. ಹೃದಯ, ಅದರ ಆಕಾಂಕ್ಷೆಗಳು, ಇಂದ್ರಿಯ, ಅದರ ಮೋಹಗಳು, ಇವುಗಳಾಚೆ ನಿನ್ನ ಸಂಕಲ್ಪವನ್ನು ಅಂತರ್ಮುಖಿಯನ್ನಾಗಿ ಮಾಡು. ಮನದ ಸಂಬಂಧಗಳ, ಆಸಕ್ತಿಗಳ, ಹಾಗೂ ಅದರ ಪರಿಮಿತ ಇಚ್ಛೆ, ವಿಚಾರ ಹಾಗೂ ಪ್ರವೃತ್ತಿಗಳ ಆಚೆಗೆ ನಿನ್ನ ಸಂಕಲ್ಪವನ್ನು ಊರ್ಧ್ವಮುಖವಾಗಿ ಎತ್ತು. ಶಾಶ್ವತವಾದ, ಎಂದಿಗೂ ಬದಲಾಗದ, ಸ್ಥಿರವಾದ, ಅಪ್ರಕ್ಷುಬ್ಧವಾದ, ಸಮವಾದ, ವಸ್ತುಗಳ ವ್ಯಕ್ತಿಗಳ ಘಟನೆಗಳ ಬಗ್ಗೆ ನಿಷ್ಪಕ್ಷಪಾತವಾದ, ಯಾವ ಕ್ರಿಯೆಯಿಂದಲೂ ಪ್ರತಿಕ್ರಿಯೆಗೆ ಒಳಗಾಗದ, ಪ್ರಕೃತಿಯ ರೂಪಗಳಿಂದ ಅಂತರವಾಗದ, ನಿನ್ನೊಳಗಿನ ತತ್ತ್ವವನ್ನು ಮುಟ್ಟು. ಅದಾಗಿ ಪರಿಣಮಿಸು, ಶಾಶ್ವತ ಆತ್ಮನಾಗಿರು, ಬ್ರಹ್ಮನೇ ಆಗು. ಒಂದು ಸ್ಥಿರವಾದ ಆಧ್ಯಾತ್ಮಿಕ ಅನುಭವದಿಂದ ನೀನು ಈ ಪರಿವರ್ತನೆಯನ್ನು ಹೊಂದಿದರೆ, ನಿನಗೆ ನಿಶ್ಚಿತ ಆಧಾರವೊಂದೊದಗುವುದು. ನಿನ್ನ ಮನಃಕಲ್ಪಿತ ವ್ಯಕ್ತಿತ್ವದ

ದೌರ್ಬಲ್ಯಗಳಿಂದ ಪಾರುಮಾಡಲ್ಪಟ್ಟು, ಶಾಂತಿ-ಜ್ಞಾನಗಳು ನಷ್ಟವಾಗಬಹುದೆಂಬ ಭೀತಿಯಿಲ್ಲದೆ, ಅಹಂ-ವರ್ಜಿತನಾಗಿ, ನೀನು ಆ ಆಧಾರದ ಮೇಲೆ ನಿಲ್ಲ ಬಲ್ಲೆ.

ಎಲ್ಲಿಯವರೆಗೆ ನೀನು ನಿನ್ನ ಅಹಂ-ವೃತ್ತಿಯನ್ನು ಅಥವಾ ಅದಕ್ಕೆ ಸಂಬಂಧ-ವಾದುದನ್ನು ಸಲಹಿ, ಆದರಿಸಿ, ಅದಕ್ಕೆ ಅಂಟಿಕೊಂಡಿರುವೆಯೋ, ಅಲ್ಲಿಯವರೆಗೆ ನಿನ್ನ ಸತ್ತೆಯನ್ನು ಮೇಲೆ ವಿವರಿಸಿದಂತೆ ನಿರ್ವ್ಯಕ್ತೀಕರಿಸಲು ಸಾಧ್ಯವಾಗುವುದಿಲ್ಲ. ಆಶೆ ಹಾಗೂ ಆಶೆಯಿಂದ ಜನಿಸಿದ ವಿಷಯಾಸಕ್ತಿಗಳೇ ಅಹಂ-ವೃತ್ತಿಯ ಹೆಗ್ಗುರುತು ಹಾಗೂ ಅದರ ಗ್ರಂಥಿ. 'ನಾನು, ನನ್ನದು' ಎಂದು ನೀನು ನುಡಿಯುವಂತೆ ಮಾಡುವದು ಆಶೆಯೇ. ಬಿಡದೆ ಅಂಟಿಕೊಂಡಿರುವ ಅಹಂ-ಭಾವದ ಮೂಲಕ ತೃಪ್ತಿ-ಅತೃಪ್ತಿ, ಪ್ರೀತಿ-ಅಪ್ರೀತಿ, ಆಶೆ-ನಿರಾಶೆ, ಸುಖ-ದುಃಖ, ರಾಗ-ದ್ವೇಷ, ಕೋಪ-ತಾಪಗಳಿಗೆ, ಆಶೆಯೇ ನಿನ್ನನ್ನು ಗುರಿ ಮಾಡುವದು. ಪ್ರಿಯವಾದ ವಸ್ತುಗಳಲ್ಲಿ, ವಿಜಯದಲ್ಲಿ ಆಕಾಂಕ್ಷೆಯನ್ನೂ, ಅಪ್ರಿಯವಸ್ತುಗಳಲ್ಲಿ, ಅಪಜಯದಲ್ಲಿ, ಶೋಕವನ್ನೂ ವೇದನೆಯನ್ನೂ ಉಂಟುಮಾಡುವದು ಆಶೆಯೇ. ಆಶೆಯು ಯಾವಾಗಲೂ ಮತಿವಿಭ್ರಮಣವನ್ನು ಸಂಕಲ್ಪ-ದೌರ್ಬಲ್ಯವನ್ನು ಉಂಟುಮಾಡು ವುದು. ಅಹಂ-ಯುಕ್ತವಾದ ಹಾಗೂ ವಿರೂಪಗೊಂಡ ವಸ್ತುದೃಷ್ಟಿ, ಜ್ಞಾನದ ಕಾಂತಿ ಕ್ಷೀಣತೆ ಹಾಗೂ ಗ್ಲಾನಿ,-ಇವೂ ಆಶೆಯ ಪರಿಣಾಮವೇ. ಆಶೆ, ಅದರ ಒಲವುಗಳು ಅಸಾಮ್ಯತೆಗಳು,-ಇವೇ ಪಾಪ ಹಾಗೂ ಪ್ರಮಾದಗಳಿಗೆ ಮೂಲದಲ್ಲಿ ಪ್ರಬಲವಾದ ಬೇರಾಗಿವೆ. ನೀನು ಆಶೆಯನ್ನು ಅಪ್ಪಿಕೊಂಡಿರುವವರೆಗೆ ನಿಶ್ಚಿತವಾದ ನಿಷ್ಕಲಂಕ ವಾದ ಶಾಂತಿಯಾಗಲಿ, ಸ್ಥಿರಗೊಂಡ ಜ್ಯೋತಿಯಾಗಲಿ, ಸಮವಾದ ಶುದ್ಧವಾದ ಜ್ಞಾನವಾಗಲಿ ಲಭಿಸಲಾರವು. ಯುಕ್ತವಾದ (ಸಮಂಜಸವಾದ) ಸತ್ತೆಯು ಇರಲಾರದು,-ಆಶೆಯು ಸ್ವಭಾವದ ವೈಪರೀತ್ಯವೇ ಆಗಿದೆ,-ಯುಕ್ತವಿಚಾರ, ಕೃತಿ, ಭಾವನೆಗಳಿಗೆ ತಕ್ಕ ಭದ್ರವಾದ ತಳಹದಿಯಾದರೂ ಇರಲಾರದು. ಯಾವದೇ ಬಣ್ಣದ ಆಶೆಗೆ ಎಡೆಗೊಟ್ಟರೆ, ಅದು ಪರಮ ಬುದ್ಧಿವಂತರಿಗೂ ಸಂತತ ಭೀತಿಯಾಗಿ ಉಳಿಯುವುದು. ಯಾವ ನಿಮಿಷದಲ್ಲಿಯಾದರೂ ಸೂಕ್ಷ್ಮ ಅಥವಾ ತೀಕ್ಷ್ಣ ರೀತಿ ಯಲ್ಲಿ ಮನಸ್ಸು ಅದರ ಅತಿ ಭದ್ರವಾದ ಹಾಗೂ ಅತಿ ನಿಶ್ಚಿತವಾಗಿ ಪಡೆದುಕೊಂಡ ಸ್ಥಾನದಿಂದ ಭ್ರಷ್ಟವಾಗಬಹುದು.

ಅಂದಮೇಲೆ ಆಶೆಯನ್ನು ವಧಿಸು; ವಸ್ತುಗಳ ಬಾಹ್ಯತೆಯ ಪರಿಗ್ರಹ-ಭೋಗ ಗಳ ವಿಷಯದಲ್ಲಿ ಆಸಕ್ತಿಯನ್ನು ತೊರೆ; ಬಾಹ್ಯ ಸಂಪರ್ಕಗಳಾಗಿ, ಆಕರ್ಷಣೆ ಗಳಾಗಿ, ಮನದ ಹಾಗೂ ಇಂದ್ರಿಯಗಳ ವಸ್ತುಗಳಾಗಿ ನಿನ್ನೆಡೆ ಬರುವ ಎಲ್ಲದರಿಂದ ಪ್ರತ್ಯೇಕವಾಗಿ ಉಳಿ. ಕಾಮ ಕ್ರೋಧಾದಿ ಅರಿಷಡ್ವರ್ಗಗಳ ಆಕ್ರಮಣವನ್ನು ತಡೆಯಲು, ನಿರಾಕರಿಸಲು ಕಲಿಯುವವನಾಗು; ನಿನ್ನ ಅಂಗಗಳಲ್ಲಿ ಅವು ಭುಗಿಲೆ-ದ್ದರೂ ನಿನ್ನ ಅಂತರಾತ್ಮನಲ್ಲಿ ಭದ್ರವಾದ ಪೀಠವನ್ನು ಪಡೆಯಲು ಕಲಿಯುವವ ನಾಗು. ಕೊನೆಗೆ ಅವು ನಿನ್ನ ಸ್ವಭಾವದ ಯಾವ ಭಾಗವನ್ನೂ ಉಪದ್ರವಿಸುವುದಿಲ್ಲ.

ಅದೇ ರೀತಿಯಲ್ಲಿ ಸುಖ-ದುಃಖಗಳ ಬಲವಾದ ದಾಳಿಗಳನ್ನು ಹಾಗೂ ಅತ್ಯಲ್ಪ ಸೂಚಿತ–ಸ್ಪರ್ಶಗಳನ್ನೂ ಸಹಿಸುವವನಾಗು, ಬದಿಗಿಡುವವನಾಗು. ರಾಗ ದ್ವೇಷಗಳನ್ನು ವರ್ಜಿಸು, ಪಕ್ಷಪಾತ–ಅಭಿಮಾನ ಹಾಗೂ ಹಗೆತನಗಳನ್ನು ನಾಶಗೊಳಿಸು, ಜುಗುಪ್ಸೆ ಹಾಗು ವಿರೋಧಗಳನ್ನು ನಿರ್ಮೂಲವಮಾಡು. ವಿಷಯ ವಸ್ತುಗಳ ಬಗ್ಗೆ ಹಾಗು ಈ ಎಲ್ಲ ವಸ್ತುಗಳ ಬಗ್ಗೆ ನಿನ್ನ ಸಮಗ್ರ ಸ್ವಭಾವದಲ್ಲಿ ಒಂದು ಸ್ಥಿರವಾದ ಉದಾಸೀನತೆಯನ್ನು ತಾಳು. ನಿರ್ಗುಣ ಆತ್ಮನಂತೆ ಅವುಗಳನ್ನು ಪ್ರಶಾಂತ-ಸಮತಾ ದೃಷ್ಟಿಯಿಂದ ನೋಡುವವನಾಗು.

"ವಿಶ್ವಾತ್ಮವು ತನ್ನ ಸೃಷ್ಟಿ-ವಿವರಗಳ ಎದುರಿನಲ್ಲಿ, ಪ್ರಕೃತಿಯ ಬಹುವಿಧದ ಕಾರ್ಯವನ್ನು ಲಕ್ಷಿಸುತ್ತ ಅಚಲವಾದ ಶಾಂತಿ-ಸಾಮರ್ಥ್ಯವನ್ನೂ ಪರಮ ಸಮತ್ವ ವನ್ನೂ ಧರಿಸುವುದು. ಇದು ಪರಿಣಾಮ. ಸಮದೃಷ್ಟಿಯಿಂದ ನೋಡು; ನಿನ ಪಾಲಿಗೆ ಬಂದುದನ್ನೆಲ್ಲ, ಜಯಾಪಜಯವನ್ನು, ಮಾನಾಪಮಾನವನ್ನು, ಲೋಕ ಮನ್ನಣೆ-ಆದರಗಳನ್ನು, ಹಾಗೂ ಜನರ ತಿರಸ್ಕಾರ, ದ್ವೇಷ, ಹಿಂಸಾಚಾರಗಳನ್ನು ಇತರರಿಗೆ ಸಂತೋಷಪ್ರಸಂಗವಾಗುವ ಪ್ರತಿ ಘಟನೆಯನ್ನು ಇತರರಿಗೆ ದುಃಖ ಪ್ರಸಂಗವಾಗುವ ಪ್ರತಿ ಘಟನೆಯನ್ನು ಸಮಚಿತ್ತದಿಂದ-ಮನದಿಂದ ನೀನು ಪಡೆಯು ವವನಾಗು.

"ಸಜ್ಜನ ಹಾಗು ದುರ್ಜನ, ಬುದ್ಧಿವಂತ ಹಾಗೂ ಮೂರ್ಖ, ಬ್ರಾಹ್ಮಣ ಹಾಗು ಚಂಡಾಲ, ಅತ್ಯುಚ್ಚ ಮಾನವ ಹಾಗೂ ಅತ್ಯಲ್ಪ ಜೀವಿ, ಎಲ್ಲ ವ್ಯಕ್ತಿಗಳನ್ನೂ ಸಮದೃಷ್ಟಿಯಿಂದ ಕಾಣು. ಎಲ್ಲ ಜನರೊಡನೆ, ಅವರ ನಿನ್ನ ಸಂಬಂಧವೇನೇ ಇರಲಿ, ಬಂಧುಮಿತ್ರರೊಡನೆ, ತಟಸ್ಥರಾಗಿರುವವರೊಡನೆ, ಉದಾಸೀನರಾಗಿರುವವ ರೊಡನೆ, ಪ್ರತಿಕಕ್ಷಿಗಳೊಡನೆ, ಶತ್ರುಗಳೊಡನೆ, ಪ್ರೇಮಿಗಳೊಡನೆ, ದ್ವೇಷಿಗಳೊಡನೆ, ಸಮವಾಗಿ ವರ್ತಿಸು. ಈ ವಿಷಯಗಳು ಅಹಂಕಾರ ಸಾಮಗ್ರಿಯಾಗಿರುವುವು. ನಿನಗಿರುವ ಆಹ್ವಾನವಾದರೋ ಅಹಂ-ವೃತ್ತಿಯಿಂದ ವಿಮುಕ್ತನಾಗಬೇಕೆಂಬುದಾಗಿದೆ. ಇವು ವೈಯಕ್ತಿಕ ಸಂಬಂಧಗಳು. ನೀನಾದರೋ ನಿರ್ವ್ಯಕ್ತಿಕ ಆತ್ಮನಂತೆ ಎಲ್ಲ-ವನ್ನೂ ಆಳವಾದ ದೃಷ್ಟಿಯಿಂದ ನಿರೀಕ್ಷಿಸಬೇಕಾಗಿದೆ. ಇವು ವ್ಯಾವಹಾರಿಕ ವೈಯ-ಕ್ತಿಕ ವ್ಯತ್ಯಾಸಗಳಿದ್ದು, ನೀನು ಅವುಗಳನ್ನು ಗಮನಿಸಬೇಕಷ್ಟೇ ಅಲ್ಲದೆ ಅವುಗಳಿಂದ ಪ್ರಭಾವಿತನಾಗಬಾರದು. ಏಕೆಂದರೆ ನೀನು ಈ ಭೇದಗಳನ್ನು ನಿನ್ನ ಲಕ್ಷ್ಯದ ಕೇಂದ್ರವನ್ನಾಗಿ ಮಾಡದೆ, ಸರ್ವರಲ್ಲಿಯೂ ಒಂದೇ ಆದ, ಸರ್ವರೂ ವಸ್ತುತಃ ತಾನೇ ಆಗಿರುವ ಏಕ ಆತ್ಮನನ್ನು ಪ್ರತಿ ಜೀವಿಯಲ್ಲಿ ಪ್ರತ್ಯಕ್ಷನಾಗಿರುವ ಭಗವಂತ ನನ್ನು, ಮಾನವರಲ್ಲಿ, ವಸ್ತುಜಾಲದಲ್ಲಿ, ಶಕ್ತಿಗಳಲ್ಲಿ, ಘಟನೆಗಳಲ್ಲಿ ಸಮಸ್ತ ಪ್ರಯತ್ನ ದಲ್ಲಿ, ಪರಿಣಾಮದಲ್ಲಿ; ವಿಶ್ವ ಪರಿಶ್ರಮದ ಯಾವದೇ ಪರಿಣಾಮದಲ್ಲಿ ಭಗವಂತನ ಸಮತ್ವಯುಕ್ತ ಸಂಕಲ್ಪವೇ ಆಗಿ ಪ್ರಕಟಗೊಂಡಿರುವ ಪ್ರಕೃತಿಯ ಏಕಪ್ರಕಾರ ಕ್ರಿಯೆಯನ್ನು ನಿನ್ನ ಲಕ್ಷ್ಯ ಕೇಂದ್ರವನ್ನಾಗಿ ಮಾಡಿಕೊಳ್ಳಬೇಕು.

" ಪ್ರಕೃತಿಯು ಸದಾ ಕಾರ್ಯದಲ್ಲಿ ಉದ್ಯುಕ್ತವಾಗಿರುವದರಿಂದ, ನಿನ್ನಲ್ಲಿ ಸಂತತವಾಗಿ ಕ್ರಿಯೆಯು ನಡೆಯುವದು. ಆದರೆ ನಿನ್ನ ಆತ್ಮವು ಕರ್ತೃವಲ್ಲವೆಂದು ನೀನು ಅರಿತು, ಅಂತೆಯೇ ಭಾವಿಸಬೇಕು. ಪ್ರಕೃತಿಯ ಪ್ರಕ್ರಿಯೆಯನ್ನು ಕದಲದೆ ಸುಮ್ಮನೆ ನಿರೀಕ್ಷಿಸು, ಅವಳ ಗುಣಗಳ ಲೀಲಾಜಾಲವನ್ನು, ಮಾಯಾಜಾಲವನ್ನು, ಹಾಗೇ ನೋಡು. ನಿನ್ನೊಳಗೆ ಈ ಕ್ರಿಯೆಯನ್ನು ಅಚಲನಾಗಿ ನಿರೀಕ್ಷಿಸು; ನಿನ್ನ ಸುತ್ತಮುತ್ತ ನಡೆಯುತ್ತಿರುವ ವ್ಯಾಪಾರವನ್ನು ನೋಡಿ, ಅದು ಇತರರಲ್ಲಿ ನಡೆಯು-ತ್ತಿರುವ ಅದೇ ಕ್ರಿಯೆಯೆಂದು ಗುರುತಿಸು. ನಿನ್ನ ಹಾಗೂ ಅವರ ಕರ್ಮಗಳ ಪರಿಣಾಮವು ಸಂತತವೂ ನೀನಾಗಲಿ ಅವರಾಗಲಿ ಇಚ್ಛಿಸಿದಂತೆ ಉದ್ದೇಶಿಸಿದಂತೆ ಇರದೆ, ನಿನಗೆ ಸೇರಿರದೆ, ಅವರಿಗೂ ಸೇರಿರದೆ ಇಲ್ಲಿ ವಿಶ್ವ ಪ್ರಕೃತಿಯಲ್ಲಿ ಸಂಕಲ್ಪಿಸಿ ಕ್ರಿಯೆ ಎಸಗುವ ಒಂದು ಮಹತ್ತರ ಶಕ್ತಿಯಿಂದ ಸರ್ವಶಕ್ತರೀತಿಯಲ್ಲಿ ನಿರ್ಣಯಿ-ಸಲ್ಪಟ್ಟಿರುವದನ್ನು ಕಾಣುವವನಾಗು. ನಿನ್ನ ಕರ್ಮಗಳಲ್ಲಿ ಪ್ರಕಟವಾಗಿರುವ ಸಂಕಲ್ಪವು ಸಹ ನಿನ್ನದಾಗಿರದೆ ಪ್ರಕೃತಿಯ ಸಂಕಲ್ಪವೆಂಬುದನ್ನು ಕೂಡ ಕಾಣು. ಅದು ನಿನ್ನ ಅಹಂಭಾವದ ಸಂಕಲ್ಪವಾಗಿದೆ; ಭೂತಕಾಲದಲ್ಲಿ ಪ್ರಕೃತಿಯು ನಿನ್ನಲ್ಲಿ ಬೆಳೆಯಿಸಿದ ಅಥವಾ ವರ್ತಮಾನದಲ್ಲಿ ಮುಂದೆ ತಂದೊಡ್ಡಲಾದ ನಿನ್ನ ಸ್ವಭಾವದ ಪ್ರಮುಖ ಗುಣದಿಂದ ಅದು ( ಸಂಕಲ್ಪವು ) ನಿರ್ಧರಿಸಲ್ಪಟ್ಟಿದೆ. ಅದು ನಿನ್ನ ಸ್ವಾಭಾವಿಕ ವ್ಯಕ್ತಿತ್ವದ ಸಹಜ ಲೀಲೆಯನ್ನು ಅವಲಂಬಿಸಿರುತ್ತದೆ; ಪ್ರಕೃತಿಯ ಆ ರಚನೆಯು ನಿನ್ನ ಪುರುಷ ಸ್ವರೂಪವಲ್ಲ. ಈ ಬಾಹ್ಯ ರಚನೆಯಿಂದ ನಿನ್ನ ಪ್ರಶಾಂತ ಅಂತರಾತ್ಮನತ್ತ ಹಿಂದೆ ಸರಿ; ನೀನು ಪುರುಷ ಸ್ವರೂಪಿಯಾಗಿದ್ದು ತಟಸ್ಥ ನಾಗಿರುವದನ್ನು ನೀನು ಕಾಣುವೆ; ಆದರೆ ಪ್ರಕೃತಿಯು ಸದಾ ತನ್ನ ಗುಣಗಳಂತೆ ಕ್ರಿಯಾಕಲಾಪಗಳನ್ನು ನಡೆಯಿಸುವುದನ್ನೂ ಕಾಣುವೆ. ಈ ಆಂತರಿಕ ನಿಷ್ಕ್ರಿಯೆ-ಯಲ್ಲಿ, ಸ್ತಬ್ಧತೆಯಲ್ಲಿ, ಕೇಂದ್ರೀಕೃತನಾಗು, ದೃಢೀಕೃತನಾಗು ; ನೀನೇ ಕರ್ತೃ ವೆಂದು ಇನ್ನು ಮುಂದೆ ಬಗೆಯದಿರು. ಗುಣಗಳ ಪ್ರಕ್ಷುಬ್ಧ ಕ್ರಿಯೆಯಿಂದ ನಿವೃತ್ತ ನಾಗಿ ತುಮುಲದ ಮೇಗೆ ಸ್ವಾತ್ಮಾಸೀನನಾಗಿ ಸ್ವಸ್ಥ-ಚಿತ್ತನಾಗಿ ಉಳಿ. ನಿರ್ವ್ಯಕ್ತಿಕ ಆತ್ಮದ ಪರಿಶುದ್ಧತೆಯಲ್ಲಿ ನೆಮ್ಮದಿಯಾಗಿ ಬಾಳು; ನಿನ್ನ ಅಂಗಾಂಗಳಲ್ಲಿ ಇನ್ನೂ ಅವ್ಯಯವಾಗದೆ ಚಲಿಸುವ ಮರ್ತ್ಯಸಹಜವಾದ ಅಲೆಗಳ ಅಬ್ಬರದಿಂದ ಅಂಜದೆ ಕ್ಲೇಶಪಡದೆ ಬಾಳುವವನಾಗು.

" ನೀನು ಹೀಗೆ ಮಾಡಬಲ್ಲೆಯಾದರೆ ಒಂದು ಮಹತ್ತಾದ ವಿಮೋಚನೆಯ ಸ್ಥಿತಿಯನ್ನೈದುವೆ; ಒಂದು ವಿಸ್ತೃತವಾದ ಸ್ವೇಚ್ಛೆಯನ್ನೂ ಆಳವಾದ ಶಾಂತಿ ಯನ್ನೂ ಅನುಭವಿಸುವೆ. ಆಗ ನೀನು ಭಗವಂತನನ್ನು ಅರಿಯುವೆ. ಅಮರನಾಗುವೆ. ನಿನ್ನ ಅನಾದಿಯಾದ ಸ್ವಯಂಭೂ ಸತ್ತೆಯನ್ನು ನಿನ್ನ ಸ್ವಾಧೀನದಲ್ಲಿ ಪಡೆಯುವೆ. ಮನ-ಪ್ರಾಣ-ದೇಹಗಳಿಂದ ಸ್ವತಂತ್ರನಾಗುವೆ. ನಿನ್ನ ಆಧ್ಯಾತ್ಮಿಕ ಸತ್ತೆಯಲ್ಲಿ ವಿಶ್ವಾಸವನ್ನು ತಳೆಯುವೆ. ಪ್ರಕೃತಿಯ ಪ್ರತಿಕ್ರಿಯೆಗಳಿಂದ ಅಸ್ಪರ್ಶಿತನಾಗಿ ಉಳಿ

ಯುವೆ. ಭಾವೋದ್ರೇಕ, ಪಾಪ, ನೋವು, ದುಃಖಗಳ ಸೋಂಕಿಲ್ಲದವನಾಗುವೆ. ಆ ತರುವಾಯ ನೀನು ನಿನ್ನ ಸಂತೋಷ–ಆಶೆಗಳನ್ನು ಯಾವದೇ ಮರ್ತ್ಯ ಅಥವಾ ಬಾಹ್ಯ ಅಥವಾ ಪ್ರಾಪಂಚಿಕ ವಸ್ತುಗಳ ಅವಲಂಬನೆಯಿಲ್ಲದೆ ಪಡೆಯುವೆ, ಸ್ಥಿರವಾದ ಶಾಶ್ವತವಾದ ಆತ್ಮದ ಸ್ವಯಂ–ಪೂರ್ತಿ ಆನಂದವನ್ನು, ಅದರಿಂದ ವಂಚಿತನಾಗುವ ಭೀತಿಯಿಲ್ಲದೆ, ನೀನು ವಶಮಾಡಿಕೊಳ್ಳುವೆ. ನೀನು ಬುದ್ಧಿ (ಕೇವಲ ಮಾನಸಿಕ) ಜೀವಿಯಾಗಿರದೆ ಅನಂತ ಚೈತನ್ಯನಾಗಿ **ಬ್ರಹ್ಮನಾಗಿ** ಪರಿಣಮಿಸುವೆ. ನಿನ್ನ ಮನಸ್ಸಿನಿಂದ ವಿಚಾರದ ಬೀಜವನ್ನೇ, ಕಾಮದ ಬೇರನ್ನೇ ಕಿತ್ತೊಗೆದು, ಪಂಚಭೌತಿಕ ಶರೀರದಲ್ಲಿ ಜನ್ಮಧಾರಣ ಮಾಡುವದನ್ನು ನಿರಾಕರಿಸಿ, ನಿನ್ನ ಪರ್ಯವಸಾನದಲ್ಲಿ ಶುದ್ಧ ಸನಾತನ ತತ್ತ್ವದ ಧ್ಯಾನದಿಂದ, ಅನಂತ ಪರಬ್ರಹ್ಮನತ್ತ ನಿನ್ನ ಚೇತನವನ್ನು ದೃಢವಾಗಿ ಹೊರಳಿಸುವುದರಿಂದ, ವರ್ಗಾಯಿಸುವುದರಿಂದ, ನೀನು ಪ್ರಶಾಂತ ಆತ್ಮನ ಶಾಶ್ವತತೆಯ ಸ್ಥಿತಿಯನ್ನು ಪ್ರವೇಶಿಸಬಹುದು.

## ಕರ್ಮಪರಿವರ್ತನೆ

"ಆದರೆ ಇದು ಯೋಗದ ಸರ್ವಸತ್ಯವಲ್ಲ. ಈ ಪರ್ಯವಸಾನವು, ಈ ನಿರ್ಗಮನ ರೀತಿಯು ಮಹಾ ಪರ್ಯವಸಾನ ಮಹಾ ನಿರ್ಗಮನವಾಗಿದ್ದರೂ, ನಾನು ನಿನಗೆ ಸೂಚಿಸುವ ಮಾರ್ಗವಲ್ಲ. ಏಕೆಂದರೆ ನಿನ್ನ ಅಂತರ್ಯಾಮಿಯಾದ ಶಾಶ್ವತನಾದ ಕರ್ತೃವು ನಾನೇ ಆಗಿರುವೆನು. ನಾನು ನಿನಗೆ ಕರ್ಮವನ್ನೇ ವಿಧಿಸುತ್ತೇನೆ. ನಾನು ಬೇಡುವುದು, ಪ್ರಕೃತಿಯ ಯಾಂತ್ರಿಕ ಚಲನೆಗೆ ತಾಮಸಿಕ ಅನುಮತಿಯನ್ನು ಈಯುವದನ್ನಲ್ಲ. ನಿನ್ನ ಆತ್ಮದಲ್ಲಿ ಇಂಥ ಚಲನೆಯಿಂದ ನೀನು ಸಂಪೂರ್ಣವಾಗಿ ಪ್ರತ್ಯೇಕಗೊಂಡು, ಉದಾಸೀನನಾಗಿ, ಅನಾಸಕ್ತನಾಗಿರುವೆ. ನಾನು ಬೇಡುವುದು ಪೂರ್ಣವಾದ ಹಾಗೂ ದೈವೀ ಕರ್ಮವನ್ನು,-ಭಗವಂತನ ಹಾರ್ದಿಕ ಹಾಗೂ ವಿವೇಕಯುಕ್ತ ಉಪಕರಣದಂತೆ ಮಾಡಿದ ಕರ್ಮವನ್ನು; ನಿನ್ನಲ್ಲಿರುವ, ಇತರರಲ್ಲಿರುವ ಭಗವಂತನಿಗೋಸುಗ, ಲೋಕಕಲ್ಯಾಣಕ್ಕೋಸುಗ ಮಾಡಿದ ಕರ್ಮವನ್ನು. ಈ ಕರ್ಮವನ್ನು ನಾನು ನಿನಗೆ ಸೂಚಿಸುತ್ತೇನೆ, ಮೊದಲಿಗೆ, ನಿಸ್ಸಂಶಯವಾಗಿ, ಪರಮ ಆಧ್ಯಾತ್ಮಿಕ ಪ್ರಕೃತಿಯ ಪರಿಪೂರ್ಣತೆಗೆ ಸಾಧನೋಪಾಯವೆಂದೂ, ಆದರೂ, ಆ ತರುವಾಯ, ಆ ಪರಿಪೂರ್ಣತೆಯ ಒಂದು ಭಾಗವೆಂದು ಸಹ, ನಾನು ಅದನ್ನು ಸೂಚಿಸುತ್ತೇನೆ.

"ಕರ್ಮವು ಸಮಗ್ರ ಬ್ರಹ್ಮಜ್ಞಾನದ ಹಾಗೂ **ಆತನ** ಮಹತ್ತರ, ಗೂಢವಾದ ಸತ್ಯದ, ಭಗವಂತನಲ್ಲಿ ಸಂಪೂರ್ಣವಾಗಿ ನೆಲೆಸಿ ಜೀವಿಸುವುದರ ಒಂದು ಭಾಗವಾಗಿದೆ; ಪರಿಪೂರ್ಣತೆಯನ್ನೂ ಮುಕ್ತಿಯನ್ನೂ ಪಡೆದ ತರುವಾಯ ಸಹ ಕರ್ಮವು ಸಾಧ್ಯವಾಗಿರಬೇಕು ಮತ್ತು ಮುಂದೆ ಸಾಗಿಸಲ್ಪಡಬೇಕು. ನಾನು ನಿನ್ನಿಂದ ಅಪೇಕ್ಷಿಸುವುದು **ಜೀವನ್ಮುಕ್ತನ** ಕರ್ಮವನ್ನು, ಸಿದ್ಧಪುರುಷನ ಕ್ರಿಯಾಕಲಾಪಗಳನ್ನು.

ಈಗಾಗಲೇ ನಿರೂಪಿಸಿದ ಯೋಗಕ್ಕೆ ಒಂದಂಶವನ್ನು ಸೇರಿಸಬೇಕಾಗಿದೆ,–ಏಕೆಂದರೆ ಅದು ಕೇವಲ ಆರಂಭದ ಜ್ಞಾನಯೋಗ. ಭಗವದನುಭವದ ಪ್ರಕಾಶದಲ್ಲಿ ನಡೆಯುವ ಕರ್ಮಯೋಗವು ಒಂದಿದೆ; ಕರ್ಮ ವ್ಯಾಪಾರಗಳು ಚೈತನ್ಯತಃ ಜ್ಞಾನದೊಡನೆ ಏಕವಾಗಬಹುದು. ಪೂರ್ಣ ಆತ್ಮ-ದರ್ಶನ ಹಾಗೂ ಭಗವತ್-ದರ್ಶನ, ಜಗತ್ತಿನಲ್ಲಿ ಈಶ್ವರನ ದರ್ಶನ, ಈಶ್ವರನಲ್ಲಿ ಜಗತ್ತಿನ ದರ್ಶನ,–ಈ ದರ್ಶನಗಳ ಪ್ರಕಾಶದಲ್ಲಿ ಸಲ್ಲಿಸಿದ ಕರ್ಮಗಳು ಜ್ಞಾನದ ಚಲನೆಯೇ, ಜ್ಯೋತಿಯ ಚಲನೆಯೇ ಆಗಿರುವವು. ಅವು ಅನಿವಾರ್ಯವಾದ ಅತ್ಯಗತ್ಯವಾದ ಸಾಧನೆ, ಆಧ್ಯಾತ್ಮಿಕ ಪರಿಪೂರ್ಣತೆಯ ನೈಜವಾದ ಅಂಗವೇ ಆಗಿರುವುವು.

"ಆದ್ದರಿಂದ ಈಗ ಉಚ್ಚ ನಿರ್ಗುಣತ್ವದ ಅನುಭವಕ್ಕೆ ಈ ಜ್ಞಾನವನ್ನೂ ಜೋಡಿಸು. ಅದು ಯಾವುದೆಂದರೆ,—ನಾವು ಶುದ್ಧ ಪ್ರಶಾಂತ ಆತ್ಮನನ್ನಾಗಿ ಕಾಣುವ ಪರಬ್ರಹ್ಮನನ್ನು, ವಿಶಾಲವಾದ ಕಾರ್ಯಪ್ರವೃತ್ತನಾದ ಆತ್ಮನನ್ನಾಗಿಯೂ ಕಾಣಬಹುದು. ಈ ವಿಶಾಲವಾದ ಕಾರ್ಯಪ್ರವೃತ್ತನಾದ ಆತ್ಮನೇ ಎಲ್ಲ ಕರ್ಮಗಳಿಗೂ ಮೂಲನಾಗಿರುವನು, ಲೋಕಗಳ ಒಡೆಯನಾಗಿರುವನು, ಮಾನವನ ಕಾರ್ಯ, ಪ್ರಯತ್ನ, ತ್ಯಾಗಗಳಿಗೆ ಸ್ವಾಮಿ, ಯಜಮಾನನಾಗಿರುವನು. ಸ್ವಯಂ-ಪ್ರೇರಿತವಾಗಿ ಕಾರ್ಯ ಮಾಡುವಂತೆ ತೋರುವ ಈ ಪ್ರಕೃತಿಯ ಯಂತ್ರರಚನೆಯು ಒಂದು ಅಂತಸ್ಥ ದೈವೀ ಸಂಕಲ್ಪವನ್ನು ಮರೆಮಾಡಿರುತ್ತದೆ. ಈ ದೈವೀ ಸಂಕಲ್ಪವೇ ಯಂತ್ರವನ್ನು ನಿರ್ಬಂಧಕ್ಕೆ ಒಳಪಡಿಸುತ್ತದೆ, ಅದಕ್ಕೆ ಮಾರ್ಗದರ್ಶನ ಮಾಡುತ್ತದೆ, ಅದರ ಉದ್ದೇಶಗಳನ್ನು ರೂಪಿಸುತ್ತದೆ. ಆದರೆ ನೀನು ನಿನ್ನ ವ್ಯಕ್ತಿತ್ವದ ಸಂಕುಚಿತ ಸ್ಥಳದಲ್ಲಿಯೇ ಬಂಧಿತನಾಗಿ ಉಳಿದುಬಿಟ್ಟರೆ, ಅಹಂ-ತತ್ವ ಹಾಗೂ ಅದರ ಆಶೆಗಳ ದೃಷ್ಟಿಯಿಂದ ಕಣ್ಣುಕಾಣದವನಾಗಿ ಬಿಟ್ಟರೆ, ಬಿಗಿ ಹಿಡಿಯಲ್ಪಟ್ಟರೆ, ನೀನು ಆ ದೈವೀ ಸಂಕಲ್ಪವನ್ನು ಅರಿಯಲಾರೆ, ಅನುಭವಿಸಲಾರೆ, ಏಕೆಂದರೆ ಜ್ಞಾನದಿಂದ ನಿರ್ವ್ಯಕ್ತಿಕನಾಗಿ, ಎಲ್ಲ ವಸ್ತುಗಳನ್ನೂ ಆತ್ಮನಲ್ಲಿ ಹಾಗೂ ಭಗವಂತನಲ್ಲಿ, ಅಂತೆಯೇ ಆತ್ಮನನ್ನೂ ಭಗವಂತನನ್ನೂ ಎಲ್ಲ ವಸ್ತುಗಳಲ್ಲಿ, ಕಾಣುವ ವಿಶಾಲದೃಷ್ಟಿಯನ್ನು ಪಡೆದಾಗ ಮಾತ್ರ ನೀನು ಆ ದೈವೀ ಸಂಕಲ್ಪಕ್ಕೆ ಅಭ್ಯಂತರವಿಲ್ಲದೆ ಓಗೊಡಬಲ್ಲವನಾಗುವೆ. ಆತ್ಮಶಕ್ತಿಯಿಂದಲೇ ಇಲ್ಲಿ ಎಲ್ಲವೂ ಸಂಭವಿಸುತ್ತದೆ; ವಸ್ತುಗಳ ಅಂತರಾಳದಲ್ಲಿ ಭಗವಂತನಿರುವುದರಿಂದಲೇ, ಪ್ರತಿ ಜೀವಿಯ ಹೃದಯದಲ್ಲಿ ಅವನು ಪ್ರತ್ಯಕ್ಷನಾಗಿರುವುದರಿಂದಲೇ ಎಲ್ಲರೂ ತಮ್ಮ ತಮ್ಮ ಕರ್ಮಗಳನ್ನು ಸಲ್ಲಿಸುತ್ತಾರೆ ಜಗತ್ಕರ್ತನು ತಾನು ಸೃಷ್ಟಿಸಿದ ವಸ್ತುಗಳಿಂದ ಪರಿಮಿತನಲ್ಲ; ಕರ್ಮಗಳ ಪ್ರಭುವಾದ ಆತನು ತನ್ನ ಕರ್ಮಗಳಿಂದ ಬಂಧಿತನಲ್ಲ; ದೈವೀ ಸಂಕಲ್ಪವು ತನ್ನ ಪರಿಶ್ರಮದಲ್ಲಿ ಹಾಗೂ ಪರಿಶ್ರಮದ ಫಲಿತಾಂಶಗಳಲ್ಲಿ ಆಸಕ್ತಿ ಉಳ್ಳದ್ದಲ್ಲ; ಏಕೆಂದರೆ ಅದು ಸರ್ವಶಕ್ತಿಯುಳ್ಳದ್ದು, ಸರ್ವಗ್ರಾಹಿಯಾದದ್ದು, ಪರಮಾನಂದವುಳ್ಳದ್ದು. ಆದರೂ ಭಗವಂತನು ತನ್ನ ಪರಮಪದದಿಂದ ತಾನು

ಸೃಷ್ಟಿಸಿದ ವಸ್ತುಗಳನ್ನು ನೋಡುತ್ತಾನೆ; ಅವತಾರಿಯಾಗಿ ಕೆಳಗೆ ಇಳಿಯುತ್ತಾನೆ; ಅವನು ಇಲ್ಲಿ ನಿನ್ನಲ್ಲಿ ಇದ್ದಾನೆ; ಅಂತರ್ಗತನಾಗಿ ಎಲ್ಲ ವಸ್ತುಗಳನ್ನೂ ಅವವುಗಳ ಸ್ವಭಾವಕ್ಕೆ ಅನುಗುಣವಾಗಿ ನಿಯಂತ್ರಿಸುತ್ತಾನೆ, ದೈವೀ ಸ್ವಭಾವದ ಹೆಜ್ಜೆಯನ್ನ-ನುಸರಿಸಿ, ನ್ಯೂನತೆಯಿಂದಾಗಲಿ, ಆಸಕ್ತಿಯಿಂದಾಗಲಿ, ಬಂಧನೆಯಿಂದಾಗಲಿ ಸ್ಪರ್ಶಿತ ನಾಗದೆ **ಅವನ** ರೀತಿಯಲ್ಲಿ ಅವನಲ್ಲಿ ನೀನಾದರೂ ಕರ್ಮಪ್ರವೃತ್ತನಾಗಬೇಕು. ಸರ್ವರ ಅಭ್ಯುದಯಕ್ಕೋಸುಗ ಕರ್ಮಗೈಯುತ್ತಿರು; ಜಗತ್ತು ಮುಂದುವರಿಯಲು ಆಧಾರವಾಗುವಂತೆ, ಲೋಕಸಂಗ್ರಹಾರ್ಥವಾಗಿ, ಜನರ ಮಾರ್ಗದರ್ಶನಕ್ಕಾಗಿ ಇಲ್ಲವೆ ಅವರಿಗೆ ಸಹಾಯ ಮಾಡಲು ನೀನು ಕ್ರಿಯೆ ಸಲ್ಲಿಸು. ನಿನ್ನಿಂದ ಬಯಸಿಪ ಕರ್ಮವು ಮುಕ್ತಿ ಪಡೆದ ಯೋಗಿಯ ಕರ್ಮವೇ ಆಗಿರುವುದು; ಅದು ನಿರಾತಂಕ ವಾದ ಭಗವದಧೀನ ಶಕ್ತಿಯ ಸಹಜ ಸೃಷ್ಟಿಯಾಗಿದೆ; ಅದು ಸಮಚಿತ್ತದ ಗತಿ ಯಾಗಿದೆ, ನಿಸ್ವಾರ್ಥ ನಿಷ್ಕಾಮಕರ್ಮವಾಗಿದೆ.

"ಈ ನಿರಾತಂಕವಾದ, ಈ ಸಮವಾದ, ಈ ದೈವೀ ಕರ್ಮಪಥದಲ್ಲಿ ಮೊದಲ ನೆಯ ಹೆಜ್ಜೆಯೆಂದರೆ ಫಲಾಸಕ್ತಿಯನ್ನೂ, ಪ್ರತಿಫಲವನ್ನೂ ತೊರೆಯುವುದು; ಹಾಗೆ ತೊರೆದು ಕೇವಲ ನಿರ್ವಹಿಸಬೇಕಾದ ಕರ್ಮದ ಸಲುವಾಗಿಯೇ ಶ್ರಮಬಡುವುದು. ಏಕೆಂದರೆ ಫಲ ಪರಿಣಾಮಗಳು ನಿನಗೆ ಸೇರಿದವಲ್ಲ, ಜಗದೊಡೆಯನಿಗೆ, ಎಂದು ನಿನಗೆ ಉತ್ಕಟವಾಗಿ ಅನಿಸಬೇಕು. ನಿನ್ನ ಕರ್ಮವನ್ನು ಅರ್ಪಿಸು, ಅದರ ಪ್ರತಿಫಲ ವನ್ನು ವಿಶ್ವಗತಿಯಲ್ಲಿ ಸ್ವಾವಿಷ್ಕೃತನಾಗುವ ಹಾಗೂ ತನ್ನ ಅಭೀಷ್ಟವನ್ನು ತಾನೇ ನೆರವೇರಿಸಿಕೊಳ್ಳುವ ಆ ಪರಮಾತ್ಮನಿಗೆ ಬಿಟ್ಟುಕೊಡು. ನಿನ್ನ ಕರ್ಮದ ಪರಿಣಾಮವು ಅವನ ಸಂಕಲ್ಪದಿಂದಲೇ ನಿರ್ಧರಿಸಲ್ಪಡುತ್ತದೆ. ಅದು ಏನೇ ಇರಲಿ, ಸುದೈವವಿರಲಿ ಅಥವಾ ದುರ್ದೈವವಿರಲಿ, ಗೆಲುವಿರಲಿ ಅಥವಾ ಸೋಲಿರಲಿ ಅವನು ಜಗತ್ತಿನ ಸಂಬಂಧದಲ್ಲಿ ಕಲ್ಪಿಸಿದ ಉದ್ದೇಶದ ಸಾಧನೆಗೆ ಅನುಕೂಲಿಸುವಂತೆ ಪರಿಣಮಿಸುವುದು. ಸಮಗ್ರ ಉಪಕರಣ ಪ್ರಕೃತಿಯ ಹಾಗೂ ವೈಯಕ್ತಿಕ ಸಂಕಲ್ಪದ ಪೂರ್ಣ ನಿಷ್ಕಾಮ, ನಿಸ್ವಾರ್ಥ ಕಾರ್ಯತತ್ಪರತೆಯೇ ಕರ್ಮಯೋಗದ ಪ್ರಥಮ ನಿಯಮವಾಗಿದೆ. ಯಾವ ಫಲವನ್ನೂ ಅಪೇಕ್ಷಿಸಬೇಡ; ನಿನಗೆ ಪ್ರಾಪ್ತ ವಾದ ಯಾವದೇ ಫಲವನ್ನು ಸ್ವೀಕರಿಸು; ಸಮತೆಯಿಂದ, ಸ್ಥಿರಚಿತ್ತದಿಂದ ಹರ್ಷ ದಿಂದ ಸ್ವೀಕರಿಸು; ಯಶಸ್ವಿಯಾದರೂ, ವಿಫಲನಾದರೂ, ಏಳಿಗೆ ಹೊಂದಿದರೂ, ಸಂಕಟಕ್ಕೆ ಗುರಿಯಾದರೂ, ನೀನು ನಿರ್ಭೀತನಾಗಿ ಸಾಗು, ದೈವೀ ಕರ್ಮದ ದುರ್ಗಮ ಪಥದಲ್ಲಿ ಅವ್ಯಥಿತನಾಗಿ ಅಚಂಚಲನಾಗಿ ಮುನ್ನಡೆ.

"ಇದು ಮಾರ್ಗದಲ್ಲಿ ಮೊದಲನೆಯ ಹೆಜ್ಜೆ ಮಾತ್ರ. ಏಕೆಂದರೆ ನೀನು ಪರಿಣಾ-ಮಗಳ ಬಗ್ಗೆ ಅನಾಸಕ್ತನಾಗಿರುವುದಲ್ಲದೆ, ನಿನ್ನ ಕರ್ಮದ ಬಗ್ಗೆಯೂ ಅನಾಸಕ್ತ ನಾಗಿರಬೇಕು. ನಿನ್ನ ಕರ್ಮವ್ಯಾಪಾರಗಳು ನಿನ್ನವೆಂದು ಬಗೆಯುವದನ್ನು ನಿಲ್ಲಿಸು; ನಿನ್ನ ಕರ್ಮದ ಫಲಗಳನ್ನು ನೀನು ತ್ಯಜಿಸಿದಂತೆ ನಿನ್ನ ಕರ್ಮವನ್ನೂ ಸಹ ಕರ್ಮ

ಪ್ರಭುವಿಗೆ, ಯಜ್ಞಪ್ರಭುವಿಗೆ ಅರ್ಪಿಸುವವನಾಗು. ನಿನ್ನ ಸ್ವಭಾವವು ನಿನ್ನ ಕರ್ಮವನ್ನು ನಿರ್ಧರಿಸುವುದೆಂದು ಗುರುತಿಸು; ನಿನ್ನ ಪ್ರಕೃತಿಯು ನಿನ್ನ ಸ್ವಭಾವದ ನೇರವಾದ ಗತಿಯನ್ನು ನಿಯಂತ್ರಿಸುತ್ತದೆ, ಆಳುತ್ತದೆ. **ಪ್ರಕೃತಿಯ** ಕಾರ್ಯ-ನಿರ್ವಹಣ ಶಕ್ತಿಯ ಮಾರ್ಗಗಳಲ್ಲಿ ನಿನ್ನ ಆತ್ಮವು ಯಾವ ಅಭಿವ್ಯಂಜಕ ರೂಪವನ್ನು ತಳೆಯುವುದು, ಯಾವ ವಿಕಾಸವನ್ನು ಪಡೆಯುವುದು, ಎಂಬುದನ್ನಾದರೂ ನಿನ್ನ ಪ್ರಕೃತಿಯೇ ನಿಶ್ಚಯಿಸುವುದು. ನೀನು ಈಶ್ವರಾಭಿಮುಖನಾಗಿ ನಡೆಯುವಾಗ ನಿನ್ನ ಮನಸ್ಸಿನ ಕ್ರಮವು ಗೊಂದಲಗೊಳ್ಳುವಂತೆ ಹಟಮಾರಿತನವನ್ನು ತೋರಬೇಡ. ನಿನ್ನ ಸ್ವಭಾವಕ್ಕೆ ಯೋಗ್ಯವಾದ ಕರ್ಮವನ್ನು ಅಂಗೀಕರಿಸು. ಅತಿ ಮಹತ್ತಾದ ಅಸಾಧಾರಣವಾದ ಪ್ರಯತ್ನ ಮೊದಲ್ಗೊಂಡು ಅತ್ಯಲ್ಪವಾದ ನಿತ್ಯಕ್ರಮದವರೆಗೆ ನಿನ್ನ ಮನದ ಪ್ರತಿ ಕ್ರಿಯೆಯನ್ನೂ, ನಿನ್ನ ಹೃದಯದ ಪ್ರತಿ ಕ್ರಿಯೆಯನ್ನೂ, ನಿನ್ನ ಶರೀರದ ಪ್ರತಿ ಕ್ರಿಯೆಯನ್ನೂ, ಪ್ರತಿ ಆಂತರಿಕ ಹಾಗೂ ಬಾಹ್ಯ ಪ್ರವೃತ್ತಿಯನ್ನೂ, ಪ್ರತಿ ವಿಚಾರವನ್ನೂ, ಸಂಕಲ್ಪವನ್ನೂ, ಭಾವವನ್ನೂ, ಪ್ರತಿ ಹೆಜ್ಜೆ, ವಿರಾಮ ಹಾಗೂ ಚಲನೆಯನ್ನೂ ಸಕಲ ಯಜ್ಞದ-ಪ್ರಭುವಿಗೆ, ಸಕಲ ತಪಸ್ಸಿನ-ಪ್ರಭುವಿಗೆ ಯಜ್ಞದಂತೆ ಅರ್ಪಿಸು.

"ತರುವಾಯ ನೀನು **ಸನಾತನನ** ಸನಾತನ ಅಂಶನೆಂದು ತಿಳಿ. ಅವನ ಹೊರತು ನಿನ್ನ ಸ್ವಭಾವದ ಶಕ್ತಿಗಳು ಮಿಥ್ಯೆಯೇ ಸರಿ. ಅವು ಅವನ ಆಂಶಿಕ ಅಭಿವ್ಯಕ್ತಿಯಲ್ಲದಿದ್ದರೆ ಏನೂ ಇಲ್ಲವೆಂದು ಹೇಳಬಹುದು. ನಿನ್ನ ಪ್ರಕೃತಿಯಲ್ಲಿ ಕ್ರಮೇಣ ಪೂರ್ಣಗೊಳ್ಳುತ್ತಿರುವುದು ಆ ಅನಂತ ಭಗವಂತನ ದಿವ್ಯತ್ವವೇ ಆಗಿದೆ. ಆವಿರ್ಭವಿಸಲಿರುವ ಪರಮ ಶಕ್ತಿ ಅದು. ಈಶ್ವರನ ಶಕ್ತಿಯೇ ನಿನ್ನ ಸ್ವಭಾವವನ್ನು ರೂಪಿಸುತ್ತ ತಾನೇ ನಿನ್ನ ಸ್ವಭಾವದಲ್ಲಿ ರೂಪವನ್ನು ಧರಿಸುವುದು. ಅಂದಮೇಲೆ ನೀನೇ ಕರ್ತೃವೆಂಬ ಕಿಂಚಿತ್ ಅಭಿಮಾನವನ್ನೂ ಬಿಟ್ಟು ಬಿಡು; ಆ **ಸನಾತನನೇ**, ಅವನೊಬ್ಬನೇ ಕ್ರಿಯೆಯನ್ನು ಮಾಡುವವನು ಎಂದು ಕಾಣು. ನಿನ್ನ ಪ್ರಕೃತಿ ಸತ್ತೆಯು ಒಂದು ನಿಮಿತ್ತವಾಗಲಿ, ಒಂದು ಉಪಕರಣವಾಗಲಿ, ಒಂದು ಶಕ್ತಿವಾಹಕವಾಗಲಿ, ಆವಿಷ್ಕಾರದ ಒಂದು ಸಾಧನ ಮಾತ್ರವಾಗಲಿ. ನಿನ್ನ ಸಂಕಲ್ಪವನ್ನು ಆತನಿಗೆ ಅರ್ಪಿಸು; ಆತನ ಶಾಶ್ವತ ಸಂಕಲ್ಪದೊಡನೆ ಒಂದುಗೂಡಿಸು. ನಿನ್ನ ಪ್ರಕೃತ್ಯತೀತ ಪ್ರಭುವಿಗೆ ನಿನ್ನ ಆತ್ಮದ ಹಾಗೂ ಚೈತನ್ಯದ ನಿಶ್ಚಲ ನೀರವತೆಯಲ್ಲಿ ನಿನ್ನ ಎಲ್ಲ ಕರ್ಮಗಳನ್ನೂ ಸಮರ್ಪಣಮಾಡು. ನಿನ್ನಲ್ಲಿ ಅಹಂಭಾವದ ಲವಲೇಶವು ಎಲ್ಲಿಯವರೆಗೆ ಉಳಿಯುವುದೋ, ಮನದ ಬೇಡಿಕೆಯಾಗಲಿ, ಪ್ರಾಣದ ಗಲಭೆಯಾಗಲಿ ಎಲ್ಲಿಯವರೆಗೆ ಉಳಿಯುವುದೋ ಅಲ್ಲಿಯವರೆಗೆ ಸಮರ್ಪಣೆಯನ್ನು ನಿಜವಾಗಿ ಮಾಡಲಾಗುವದಿಲ್ಲ, ಇಲ್ಲವೇ ಪೂರ್ಣವಾಗಿ ಮಾಡಲಾಗುವುದಿಲ್ಲ. ಕಿಂಚಿತ್ ಪ್ರಮಾಣದಲ್ಲಿಯಾದರೂ ಅಹಂ ಗೋಸುಗ ಮಾಡಿದ ಕರ್ಮವು ಅಥವಾ ಅಹಂ ಸಂಕಲ್ಪ-ಆಶೆಗಳಿಂದ ಕಲುಷಿತವಾದ ಕರ್ಮವು ಶ್ರೇಷ್ಠ ಯಜ್ಞವಲ್ಲ. ಅಸಮತೆ

ಯಿದ್ದಲ್ಲಿ, ಜ್ಞಾನರಹಿತ ಸಂಕೋಚ ಹಾಗೂ ಪಕ್ಷಪಾತವಿದ್ದೆಡೆಯಲ್ಲಿ ಈ ಮಹತ್ ಕಾರ್ಯವನ್ನು ಸಮರ್ಪಕವಾಗಿ, ನಿಜವಾಗಿ ಮಾಡಲಾಗುವುದಿಲ್ಲ. ಆದರೆ ಎಲ್ಲ ಕ್ರಿಯಾಕಲಾಪಗಳ, ಪರಿಣಾಮಗಳ, ವಸ್ತುಗಳ, ಜೀವಿಗಳ ಬಗ್ಗೆ ಪೂರ್ಣ ಸಮತೆ ಯಿದ್ದಾಗ, ಅಹಂ-ಆಶೆಗಳನ್ನು ವರ್ಜಿಸಿ **ಪರಾತ್ಪರನಿಗೆ** ಶರಣಾದಾಗ ದೈವೀ ಸಂಕಲ್ಪವು ಮುಗ್ಗರಿಸದೆ, ಮಾರ್ಗದಿಂದ ಹೊರಳದೆ ತೀರ್ಮಾನಿಸುವುದು. ಹಾಗೂ ದೈವೀ ಶಕ್ತಿಯು ಅಧಃಪ್ರಕೃತಿಯ ಗೊಡವೆಯಿಲ್ಲದೆ ಅಥವಾ ಪ್ರತಿಬಂಧಕ ಪ್ರತಿ-ಕ್ರಿಯೆಗೆ ಒಳಗಾಗದೆ ಎಲ್ಲ ಕರ್ಮಗಳನ್ನೂ ನಿನ್ನ ಪರಿವರ್ತಿತ ಸ್ವಭಾವದ ಶುದ್ಧತೆ-ಭದ್ರತೆಗಳಿಂದ ಕೂಡಿ ನಿರಾತಂಕವಾಗಿ ನಿರ್ವಹಿಸುವುದು. ದೈವೀ ಸಂಕಲ್ಪವು ತನ್ನ ನಿಷ್ಕಳಂಕ ಯಾಜಮಾನ್ಯದಲ್ಲಿ ನಿನ್ನ ಒಂದೊಂದು ಕೃತಿಯನ್ನೂ ನಿನ್ನ ಮುಖಾಂತರ ರೂಪಿಸಲು ಅನುಮತಿ ಕೊಡುವುದೇ ಅತ್ಯುಚ್ಚ ಪರಿಪೂರ್ಣತೆ ಯಾಗಿರುವುದು. ಇಂಥ ಪರಿಪೂರ್ಣತೆಯು, ಯೋಗದಲ್ಲಿ ನಿರತರಾಗಿ ಕರ್ಮಗಳನ್ನು ಮಾಡುವುದರಿಂದ ಪ್ರಾಪ್ತವಾಗುತ್ತದೆ. ಈ ಪರಿಪೂರ್ಣತೆಯನ್ನೈದಿದಾಗ ನಿನ್ನ ಪ್ರಕೃತಿಯು ಪರಮಾತ್ಮನೊಡನೆ ಸಂಪೂರ್ಣ ಸಂತತ ಐಕ್ಯವನ್ನು ಪಡೆದುದಾಗಿ ತನ್ನ ವಿಶ್ವಗತಿಯನ್ನು ( ವಿಶ್ವಯಾತ್ರೆಯನ್ನು ) ಅನುಸರಿಸುವುದು ; ಅತ್ಯುಚ್ಚ **ಆತ್ಮ**ನನ್ನು ಅಭಿವ್ಯಕ್ತಮಾಡುವುದು, ಈಶ್ವರಾನುವರ್ತಿಯಾಗುವುದು. ಈ ದಿವ್ಯ ಕರ್ಮಗಳ ಮಾರ್ಗವು ಜೀವನ–ಕರ್ಮ ಸಂನ್ಯಾಸಕ್ಕಿಂತ ಅವುಗಳ ದೈಹಿಕ ಪರಿ ವರ್ಜನೆಗಿಂತ ಬಹು ಮೇಲಾದ ವಿಮೋಚನೆಯಾಗಿರುವುದು, ಪೂರ್ಣತರ ಮಾರ್ಗ ವಾಗಿರುವುದು, ಪರಿಹಾರವಾಗಿರುವುದು. ದೈಹಿಕ ತಾಟಸ್ಥ್ಯವು, ನಿಷ್ಕ್ರಿಯೆಯು ಪೂರ್ಣಪ್ರಮಾಣದಲ್ಲಿ ಸಾಧ್ಯವಿಲ್ಲ; ಸಾಧ್ಯವಿದ್ದ ಪ್ರಮಾಣದಲ್ಲಿ, ಆತ್ಮದ ಮುಕ್ತಿಗೆ ಅತ್ಯಗತ್ಯವಲ್ಲ. ಅಲ್ಲದೆ ಅದು ಅಪಾಯಕರವಾದ ಆದರ್ಶ. ಏಕೆಂದರೆ ಸಾಮಾನ್ಯ ಜನರ ಮೇಲೆ ಅದು ದಾರಿತಪ್ಪಿಸುವ ಪ್ರಭಾವವನ್ನು ಬೀರುವುದು. ಶ್ರೇಷ್ಠರೂ, ಮಹಾನುಭಾವರೂ ನಿರ್ಮಿಸಿದ ಪ್ರಮಾಣವನ್ನೇ ಇತರ ಮಾನವಕೋಟಿಯು ಅನುಸರಿಸಲು ಪ್ರಯತ್ನಿಸುವುದು. ಅಂದಮೇಲೆ ಕರ್ಮವು ಶರೀರಧಾರಿಯಾದ ಆತ್ಮನ ಸ್ವಭಾವಶೀಲವೇ ಆಗಿರುವುದರಿಂದ, ಕರ್ಮವ್ಯಾಪಾರಗಳು ಶಾಶ್ವತ **ಕರ್ತೃವಿನ** ( ಈಶನ ) ಸಂಕಲ್ಪವೇ ಆಗಿರುವುದರಿಂದ, ಮಹಾತ್ಮರು, ಮಹಾ ಮೇಧಾವಿಗಳು ಈ ಆದರ್ಶವನ್ನು ಸ್ಥಾಪಿಸಬೇಕು. ಅವರು ಜಗದ್ರಂಗದಲ್ಲಿ ಕರ್ಮ ಗೈಯುವವರಾಗಬೇಕು. ಯಾವ ಅಭ್ಯಂತರವೂ ಇಲ್ಲದೆ ಎಲ್ಲ ಕೆಲಸಗಳನ್ನೂ ನಿರ್ವಹಿಸಬೇಕು. ಮುಕ್ತಾತ್ಮ ರಾಗಿ, ಪ್ರಕೃತಿಯನ್ನು ಸ್ವಾಧೀನ ಮಾಡಿಕೊಂಡವರಾಗಿ, ಸ್ವೇಚ್ಛೆಯಾಗಿ, ಹರ್ಷ-ಚಿತ್ತರಾಗಿ, ಆಶಾರಹಿತರಾಗಿ ಭಗವತ್–ಕಿಂಕರರಾಗಲೂ ಬೇಕು.

## ಭಕ್ತಿ ಪರಿವರ್ತನೆ

" ಜ್ಞಾನಯುತ ಮನವೂ ಕ್ರಿಯಾಪ್ರವೃತ್ತ ಸಂಕಲ್ಪವೂ ಸರ್ವಸ್ವವಲ್ಲ; ಆನಂದ

ವನ್ನು ಅಪೇಕ್ಷಿಸುವ ಒಂದು ಹೃದಯವೂ ನಿನ್ನೊಳಿದೆ. ಇಲ್ಲಿ ಸಹ ಹೃದಯದ ಶಕ್ತಿ ಜ್ಯೋತಿಗಳಲ್ಲಿ, ಅದರ ಆನಂದ ತೃಷೆಯಲ್ಲಿ, ಆತ್ಮತೃಪ್ತಿಯ ಅಗತ್ಯ-ಅಭಿಲಾಷೆಗಳಲ್ಲಿ ನಿನ್ನ ಸ್ವಭಾವವು ಪರಿವರ್ತಿತವಾಗಬೇಕು, ರೂಪಾಂತರವಾಗಬೇಕು; ಭಗವಂತನೊಡನೆ ಐಕ್ಯವನ್ನು ಪಡೆದು ಆನಂದಾತಿಶಯುವನ್ನು ಅನುಭವಿಸುವ ಸ್ಥಿತಿಗೆ ಉದ್ಧೃತವಾಗಬೇಕು. ನಿರ್ವ್ಯಕ್ತಿಕ ಆತ್ಮನ ಜ್ಞಾನವು ಒಂದು ವಿಶಿಷ್ಟ ಆನಂದವನ್ನು ಲಭ್ಯಮಾಡಿಕೊಡುವುದು; ನಿರ್ವ್ಯಕ್ತಿತ್ವದ ಆನಂದವೊಂದಿದೆ, ಶುದ್ಧ ಆತ್ಮನ ಏಕೈಕ ಆನಂದವೊಂದಿದೆ. ಆದರೆ ಸಮಗ್ರ ಜ್ಞಾನವು ಇನ್ನೂ ಅಧಿಕವಾದ ತ್ರಿವಿಧ ಆನಂದವನ್ನು ತರುವುದು. ವಿಶ್ವಾತೀತ ಪರಮಾತ್ಮನ ಆನಂದವನ್ನೇ ಪ್ರವೇಶಮಾಡಲು ಅದು ಬಾಗಿಲನ್ನು ತೆರೆಯುವುದು; ವಿಶ್ವನಿರ್ವ್ಯಕ್ತಿತ್ವದ ನಿರತಿಶಯ ಆನಂದವನ್ನಾದರೂ ಅದು ಒದಗಿಸಿಕೊಡುವುದು; ಈ ಬಹುಸಂಖ್ಯಾತ ಆವಿಷ್ಕಾರದ ಆನಂದವನ್ನು ಅದು ಹೊರತೋರಿಸುವುದು; ಏಕೆಂದರೆ ಪ್ರಕೃತಿಯಲ್ಲಿ ನಿತ್ಯ ಸನಾತನನ ಆನಂದವುಂಟು. ಜೀವನಲ್ಲಿ ಆನಂದವಿದೆ. ಜೀವನು ಇಲ್ಲಿ ದೇವಾಂಶನು. ಜೀವನ ಆನಂದವು ತನ್ನ ಮೂಲನಾದ ಪರಮೇಶ್ವರನಲ್ಲಿ, ತನ್ನ ಪರಮ ಆತ್ಮನಲ್ಲಿ, ತನ್ನ ಅಸ್ತಿತ್ವದ ಪ್ರಭುವಿನಲ್ಲಿ ನೆಲೆಗೊಂಡು ಐಕ್ಯದ ಪರವಶತೆಯಾಗಿ ಪರಿಣಮಿಸುವುದು. ಸಮಗ್ರ ಭಗವತ್-ಪ್ರೀತಿ, ಆರಾಧನೆಯು, ಜಗತ್ತಿನ ಹಾಗೂ ಅದರಲ್ಲಿರುವ ಎಲ್ಲ ರೂಪಗಳ, ಶಕ್ತಿಗಳ, ಸರ್ವಭೂತಗಳ, ಪ್ರೀತಿಯಾಗಿ ಪ್ರಸರಿಸುವುದು; ಎಲ್ಲರಲ್ಲಿ ಭಗವಂತನನ್ನು ದರ್ಶಿಸುವೆವು, ಕಂಡುಕೊಳ್ಳುವೆವು, ಆರಾಧಿಸುವೆವು, ಸೇವಿಸುವೆವು, ಇಲ್ಲವೆ ಏಕತ್ವದಲ್ಲಿ ಅನುಭವಿಸುವೆವು. ಜ್ಞಾನ ಹಾಗೂ ಕರ್ಮಗಳಿಗೆ ಈ ಶಾಶ್ವತವಾದ ತ್ರಿವಿಧ ಆನಂದ ಕಿರೀಟವನ್ನು ಸೇರಿಸು; ಈ ಪ್ರೀತಿಗೆ ಮುಕ್ತದ್ವಾರ ಮಾಡು, ಈ ಆರಾಧನೆಯನ್ನು ಅನುಷ್ಠಿಸು; ಜ್ಞಾನ-ಕರ್ಮಗಳೊಡನೆ ಇದನ್ನು ಏಕೀಭವಿಸು. ಇದು ಲೋಪದೋಷಗಳಿಲ್ಲದ ಪರಿಪೂರ್ಣತೆಯ ಶಿಖರವೇ ಆಗಿರುವುದು.

"ಆಧ್ಯಾತ್ಮಿಕ ಮಹತಿಯನ್ನೂ, ಐಕ್ಯತೆಯನ್ನೂ, ಮುಕ್ತಿಯನ್ನೂ ಪಡೆಯಲು ಬೇಕಾದ ಅತ್ಯುಚ್ಚ ಸಾಮರ್ಥ್ಯ-ಶಕ್ತಿಯನ್ನು ಈ ಭಕ್ತಿಯೋಗವು ನಿನಗೆ ಕೊಡುವುದು; ಆದರೆ ಈ ಭಕ್ತಿಯು ಬ್ರಹ್ಮ-ಜ್ಞಾನದೊಡನೆ ಏಕವಾದದ್ದಾಗಿರಬೇಕು. ತಾಪತ್ರಯದಲ್ಲಿ, ಸಮಾಧಾನ ಸಹಾಯ ಹಾಗೂ ವಿಮೋಚನೆಗಳ ಸಲುವಾಗಿ ಭಗವಂತನನ್ನು ಆಶ್ರಯಿಸುವ ಭಕ್ತಿಯುಂಟು. ಎಲ್ಲ ಆಶೆಗಳನ್ನು ಈಡೇರಿಸುವ ಕಾಮಧೇನುವೆಂದೂ, ಬಹುಮಾನಗಳಿಗಾಗಿ, ದೈವೀ ಸಹಾಯ-ಸಂರಕ್ಷಣೆಗಳಿಗಾಗಿ, ಭಗವಂತನನ್ನು ಆಶ್ರಯಿಸುವ ಭಕ್ತಿಯುಂಟು. ಇನ್ನೂ ಅಜ್ಞಾನದಲ್ಲಿದ್ದು, ಜ್ಞಾನ-ಪ್ರಕಾಶಗಳಿಗಾಗಿ ಭಗವಂತನತ್ತ ತಿರುಗುವ ಭಕ್ತಿಯುಂಟು. ಎಲ್ಲಿಯವರೆಗೆ ಒಬ್ಬನು ಈ ಭಕ್ತಿಪ್ರಕಾರಗಳಿಗೆ ಮರ್ಯಾದಿತನಾಗಿರುವನೋ ಅಲ್ಲಿಯ ವರೆಗೆ ಅವುಗಳ ಅತ್ಯುಚ್ಚ ಹಾಗೂ ಅತಿ ಉದಾರವಾದ, ಭಗವಂತನನ್ನು ಉದ್ದೇಶಿಸಿದ ಪ್ರವೃತ್ತಿಯಲ್ಲಿ ಸಹ, ತ್ರಿಗುಣಗಳ ಪಾಟವವು ಬಿಡದೆ ಉಳಿಯುವುದು. ಆದರೆ ಭಗವದ್ಭಕ್ತನು

ಭಗವದ್-ಜ್ಞಾನಿಯೂ ಆಗಿರುವಾಗ, ಆರಾಧಕನು ಆರಾಧ್ಯ ದೇವತೆಯೊಡನೆ ಏಕಾತ್ಮನಾಗಿ ಪರಿಣಮಿಸುವನು; ಏಕೆಂದರೆ ಪರಾತ್ಪರನಿಗೆ ಅವನು ಪ್ರಿಯನು, ಶ್ರೇಷ್ಠ ವರ್ಗಕ್ಕೆ ಸೇರಿದವನು. ಭಗವಂತನಲ್ಲಿ ತನ್ಮಯಗೊಂಡ ಇಂಥ ಭಕ್ತಿ ಯನ್ನು ನಿನ್ನಲ್ಲಿ ಅರಳಿಸು. ಆಧ್ಯಾತ್ಮಿಕ ಪರಿವರ್ತನೆಯನ್ನು ಪಡೆದು ಅಧಃಪ್ರಕೃ ತಿಯ ನ್ಯೂನತೆಗಳ ಆಚೆಗೆ ಉದ್ಧೃತವಾದ ಹೃದಯವು ಭಗವಂತನ ಅಪಾರವಾದ ಸತ್ತೆಯ ರಹಸ್ಯಗಳನ್ನು ಅತಿ ಅಂತರಂಗಿಕವಾಗಿ ತೋರಿಸಿಕೊಡುವುದು. ಇಂಥ ಹೃದಯವು ದೈವೀ ಶಕ್ತಿಯ ವೈಭವ, ಅದರ ಅಂತಃಪ್ರವೇಶ ಹಾಗೂ ಅದರೊಡನೆ ಸಮಗ್ರ ಸಂಪರ್ಕಗಳ ಅನುಭವವನ್ನು ತಂದುಕೊಡುವುದು; ಶಾಶ್ವತವಾದ ಆನಂದದ ಗುಟ್ಟನ್ನು ನಿನಗೆ ಬೋಧಿಸುವುದು. ಪೂರ್ಣ ಜ್ಞಾನವನ್ನು ಪಡೆಯಲು ಪೂರ್ಣಭಕ್ತಿಯೇ ಸರ್ವ ಸಾಧನೋಪಾಯ.

"ಇಂಥ ಸಮಗ್ರ ಭಗವದ್ಭಕ್ತಿಯು ನಿನ್ನಲ್ಲಿ ಹಾಗೂ ಸರ್ವಭೂತಗಳಲ್ಲಿ ಅಂತರ್ಗತನಾದ ಭಗವಂತನಿಗೋಸುಗ ಮಾಡಬೇಕಾದ ಸಮಗ್ರ ಕರ್ಮವನ್ನು ವಿಧಿಸುತ್ತದೆ. ಸಾಮಾನ್ಯ ಮಾನವನು ಯಾವುದೋ ಒಂದು ಆಶೆಯಿಂದ ಕರ್ಮ ಪ್ರವೃತ್ತನಾಗುತ್ತಾನೆ. ಈ ಆಶೆಯು ಪಾಪಪೂರಿತವಾಗಿರಬಹುದು, ಇಲ್ಲವೆ ಶೀಲ ಯುತವಾಗಿರಬಹುದು, ಮೇಲಾದ ಅಥವಾ ಕೀಳಾದ ಪ್ರಾಣಿಕ (ರಾಜಸಿಕ) ಪ್ರವೃತ್ತಿಯಾಗಿರಬಹುದು, ಸಾಧಾರಣವಾದ ಅಥವಾ ಉನ್ನತವಾದ ಬೌದ್ಧಿಕ ಆಯ್ಕೆ, ನಿಷ್ಕರ್ಷೆಯಾಗಿರಬಹುದು. ಮನದ ಹಾಗೂ ಪ್ರಾಣದ ಉದ್ದೇಶಗಳ ಮಿಶ್ರಣವೂ ಆಗಿರಬಹುದು. ಆದರೆ ನೀನು ಮಾಡುವ ಕರ್ಮವು ಪ್ರತಿಬಂಧಕ ಗಳಿಲ್ಲದೆ ಸ್ವತಂತ್ರವಾಗಿರಬೇಕು, ಆಶಾರಹಿತವಾಗಿರಬೇಕು; ಆಶೆಯಿಲ್ಲದೆ ಮಾಡಿದ ಕರ್ಮವು ಪ್ರತಿಕ್ರಿಯೆಯನ್ನು ಉಂಟುಮಾಡುವುದಿಲ್ಲ, ಯಾವ ಬಂಧನವನ್ನೂ ಹೇರುವುದಿಲ್ಲ, ಪೂರ್ಣಸಮತೆಯಿಂದ ಹಾಗೂ ಅಚಲವಾದ ಸ್ಥಿರತೆ ಶಾಂತಿಗಳಿಂದ ನಿರ್ವಹಿಸಿದ ಈ ಕರ್ಮದಲ್ಲಿ ದೈವೀ ತೀವ್ರತೆಯು ಸೇರಿರುವುದಿಲ್ಲ. ಈ ಕರ್ಮವು ಮೊದಲಿಗೆ ಆಧ್ಯಾತ್ಮಿಕ ಅವಶ್ಯ ಕರ್ತವ್ಯದ ಒಂದು ಸೂಕ್ಷ್ಮವಾದ ನಿರ್ಬಂಧವಾಗಿ ರುವುದು, 'ಕರ್ತವ್ಯಂ ಕರ್ಮ' ಸ್ವರೂಪದ್ದಾಗಿರುವುದು. ಆಮೇಲೆ ದೈವೀ ತ್ಯಾಗದ ಯಜ್ಞದ ಉತ್ಕರ್ಷ ಪ್ರಭಾವವು ಕಂಡುಬರುವುದು. ಅತ್ಯುಚ್ಚ ಮಟ್ಟದಲ್ಲಿ ಈ ಕರ್ಮವು ಕ್ರಿಯಾತ್ಮಕ ಏಕತ್ವದಲ್ಲಿ ಶಾಂತವಾಗಿ ಸಂತೋಷವಾಗಿ ಸಮ್ಮತಿ ಗೊಳ್ಳುವುದು; ಇಂಥ ಸಮ್ಮತಿಯ ಅಭಿವ್ಯಕ್ತಿಯಾಗಬಲ್ಲದು. ಭಕ್ತಿಭಾವದ ಏಕತ್ವವು ಇನ್ನೂ ವಿಶೇಷ ಪರಿಣಾಮವುಳ್ಳದ್ದು; ಮೊದಲಿನ ನಿರ್ವಿಕಾರ ಸ್ಥಿರತೆಯ ಸ್ಥಾನದಲ್ಲಿ ಬಲಯುತವಾದ ಆಳವಾದ ಹರ್ಷೋನ್ಮಾದವನ್ನು ತಂದಿರಿಸುವುದು; ಸ್ವಾರ್ಥಪರ ಆಶೆಯಿಂದಾಗುವ ಕ್ಷುದ್ರ ಉತ್ಸಾಹವನ್ನಲ್ಲ, ಆದರೆ ಅನಂತ ಆನಂದ ಸಾಗರವನ್ನೇ ಹರಿಯಿಸುವುದು. ಆರಾಧ್ಯ ದೇವತೆಯ ಸಾನ್ನಿಧ್ಯದ ಶುದ್ಧ ಹಾಗೂ ದೈವೀ ಭಾವೋತ್ಕಟತೆಯನ್ನೂ, ಸಂಚಲನ ಭಾವನೆಯನ್ನೂ ಅದು ನಿನ್ನ ಕ್ರಿಯೆ

ಗಳಲ್ಲಿ ಮೂಡಿಸುವುದು ; ನಿನ್ನಲ್ಲಿರುವ ಎಲ್ಲ ಜೀವಿಗಳಲ್ಲಿರುವ ಭಗವಂತನಿಗಾಗಿ ಶ್ರಮಿಸುವುದರಲ್ಲಿ ಉಕ್ಕಿಬರುವ ಸಂತೋಷವಿರುತ್ತದೆ, ಭಕ್ತಿಯು ಕರ್ಮಗಳ ಕಳಶವಾಗಿದೆ, ಜ್ಞಾನದ ಕಳಶವೂ ಆಗಿದೆ.

"ಜ್ಞಾನರೂಪವಾಗಿದ್ದ ಈ ಭಕ್ತಿಯು, ನಿನ್ನ ಕರ್ಮದ ಅಂತರಂಗ-ಹೃದಯವಾಗಬಲ್ಲ ಈ ಭಕ್ತಿಯು, ಸಂಪೂರ್ಣ ನಿವೇದನೆ-ಪರಿಪೂರ್ಣತೆಗಳನ್ನು ಸಾಧಿಸಲು ನಿನ್ನ ಅತಿ ಪರಿಣಾಮಕಾರಿಯಾದ ಶಕ್ತಿಯಾಗುವುದು. ಪರಮಾತ್ಮನ ಸತ್ತೆಯೊಡನೆ ವ್ಯಕ್ತಿಯ ಸತ್ತೆಯ ಸಮಗ್ರ ಐಕ್ಯತೆಯು ಪರಿಪೂರ್ಣ ಆಧ್ಯಾತ್ಮಿಕ ಜೀವನಕ್ಕೆ ಅಗತ್ಯವಾದ ಪೂರ್ವಪರಿಸ್ಥಿತಿಯಾಗಿದೆ, ಆಂದ ಮೇಲೆ ದೇವನತ್ತ ಒಟ್ಟು ಪ್ರಮಾಣದಲ್ಲಿ ತಿರುಗು ; ನಿನ್ನ ಇಡೀ ಸ್ವಭಾವವನ್ನು ಜ್ಞಾನ-ಭಕ್ತಿ-ಕರ್ಮಗಳ ಮೂಲಕ ಅವನೊಡನೆ ಏಕ ಮಾಡು. ಕೇವಲ ಅವನ ಕಡೆಯೇ ತಿರುಗು ; ಉದಾರವಾಗಿ, ಲೆಕ್ಕಿಸದೆ, ನಿನ್ನ ಮನ, ನಿನ್ನ ಹೃದಯ, ನಿನ್ನ ಸಂಕಲ್ಪಗಳನ್ನೂ, ನಿನ್ನ ಸರ್ವ ಚೇತನವನ್ನೂ ನಿನ್ನ ಶರೀರವನ್ನೂ ಹಾಗೂ ನಿನ್ನ ಇಂದ್ರಿಯಗಳನ್ನೂ ಸಹ ಅವನ ಹಸ್ತಗಳಲ್ಲಿ ಒಪ್ಪಿಸಿಬಿಡು. ದೋಷರಹಿತವಾದ ಅವನ ದಿವ್ಯ ಚೇತನದ ಅಚ್ಚಿನಲ್ಲಿ ನಿನ್ನ ಚೇತನವು ಅವನಿಂದ ಪ್ರಭುರೀತಿಯಲ್ಲಿ ( ಯಾವ ಅಡ್ಡಿಯೂ ಇಲ್ಲದೆ ) ರೂಪಿ-ಸಲ್ಪಡಲಿ. ನಿನ್ನ ಹೃದಯವು ಭಗವಂತನ ಸ್ವಚ್ಛವಾದ ಅಥವಾ ಪ್ರಜ್ವಲಿಸುವ ಹೃದಯವಾಗಲಿ. ನಿನ್ನ ಸಂಕಲ್ಪವು ಅವನ ಸಂಕಲ್ಪದ ನಿರ್ದುಷ್ಟ ಕ್ರಿಯೆಯಾಗಲಿ. ನಿನ್ನ ಇಂದ್ರಿಯ ಹಾಗೂ ಶರೀರವು ಸಹ ಭಗವಂತನ ಪರಮಾನಂದಭರಿತ ಶರೀರ-ಸಂವೇದನೆಯಾಗಲಿ. ನಿನ್ನ ಸರ್ವಸತ್ತೆಯಿಂದ ಅವನನ್ನು ಭಜಿಸು, ಅವನಿಗೆ ಅರ್ಪಿಸು. ವಿಚಾರ ಪ್ರತಿ ಒಂದರಲ್ಲಿ, ಭಾವದಲ್ಲಿ, ಪ್ರತಿ ಪ್ರೇರಣೆಯಲ್ಲಿ, ಕ್ರಿಯೆಯಲ್ಲಿ ಅವನನ್ನು ನೆನೆ. ಈ ವಸ್ತುಗಳೆಲ್ಲ ( ವಿಷಯಗಳೆಲ್ಲ ) ಆವನಿಗೆ ಸಂಪೂರ್ಣವಾಗಿ ಸೇರುವವರೆಗೆ ಪರಿಶ್ರಮಬಡು. ನಿನ್ನ ಅತಿ ಅಂತಃಸ್ಥ ಪವಿತ್ರ ಆತ್ಮ-ಮಂದಿರದಲ್ಲಿ ಹಾಗೂ ಅತಿ ಸಾಮಾನ್ಯವಾದ ಬಾಹ್ಯವಸ್ತುಗಳಲ್ಲಿ ಸಹ ಅವನು ತನ್ನ ಸಂತತ ಪರಿವರ್ತನಗೈಯುವ ಸಾನ್ನಿಧ್ಯವನ್ನು ನೆಲೆಗೊಳಿಸುವವರೆಗೆ ಬಿಡದೆ ಮುಂದುವರಿ.

## ಜ್ಞಾನ-ಭಕ್ತಿ-ಕರ್ಮಗಳ ಸಮನ್ವಯ

"ಹೀಗೆ ಮೂರು-ಒಂದರಲ್ಲಿ-ಐಕ್ಯವಾಗಿರುವ ಮಾರ್ಗವನ್ನು ಅನುಸರಿಸಿದರೆ ನೀನು ನಿನ್ನ ಅಧಃಪ್ರಕೃತಿಯಿಂದ ನಿನ್ನ ಪರಮ ಆಧ್ಯಾತ್ಮಿಕ ಪ್ರಕೃತಿಗೆ ಪೂರ್ಣವಾಗಿ ಏರಬಹುದು. ಅದೇ ಗುಪ್ತವಾದ ಅತಿಚೇತನ ಪ್ರಕೃತಿಯಾಗಿದೆ. ಅಲ್ಲಿ **ಜೀವನು** ಉನ್ನತ **ಅನಂತನಾದ ಭಗವಂತನ** ಅಂಶನಾಗಿದ್ದು, ಅವನ ಧರ್ಮದಲ್ಲಿ ನಿಕಟವರ್ತಿಯಾಗಿ ಏಕನಾಗಿದ್ದಾನೆ ; ಜೀವನು ಬಹಿರ್ಮುಖ ಮಾಯೆಯನ್ನು ತೊರೆದು ಅವನ **ಸತ್ಯ**ದಲ್ಲಿಯೇ ಪ್ರತಿಷ್ಠಿತನಾಗಿರುವನು. ಈ ಪರಿಪೂರ್ಣತೆಯನ್ನು ಈ ಐಕ್ಯತೆಯನ್ನು ಅದರ ಸ್ವಂತ ಜನ್ಮ-ಧಾಮದಲ್ಲಿ, ಪ್ರತ್ಯೇಕವಾಗಿ ಪರಮ

ವಿಶ್ವಾತೀತ ಅಸ್ತಿತ್ವದಲ್ಲಿ ಉಪಭೋಗಿಸಬಹುದು ; ಆದರೆ ಇಲ್ಲಿ ಈ ಮಾನವ ದೇಹದಲ್ಲಿ, ಈ ಭೌತ ಪ್ರಪಂಚದಲ್ಲಿ ಸಹ ಅದನ್ನು ಪಡೆಯಬಹುದು, ಪಡೆಯಲೂಬೇಕು. ಈ ಉದ್ದೇಶವು ಸಫಲವಾಗಬೇಕಾದರೆ, ಸ್ಥಿರವಾಗಿ, ನಿಷ್ಕ್ರಿಯನಾಗಿ, ಅಂತರಾತ್ಮನಲ್ಲಿ ತ್ರಿಗುಣರಹಿತನಾಗಿ, ಬಾಹ್ಯ ಅಂಗಗಳಲ್ಲಿ ಆ ಗುಣಗಳ ಯಾಂತ್ರಿಕ ಕ್ರಿಯೆಗೆ ಉದಾಸೀನತೆಯಿಂದ ಅವಕಾಶ ಕೊಟ್ಟು ನಿರೀಕ್ಷಿಸುತ್ತಿದ್ದರೆ ಮಾತ್ರ ಸಾಲದು. ಏಕೆಂದರೆ ಆತ್ಮನನ್ನಲ್ಲದೆ ಕ್ರಿಯಾತ್ಮಕ ಪ್ರಕೃತಿಯನ್ನೂ ಭಗವಂತನಿಗೆ ಒಪ್ಪಿಸಿಬಿಡಬೇಕು ; ಅದೂ ದಿವ್ಯವಾಗಿ ಪರಿಣಮಿಸಬೇಕು. ನಿನ್ನ ಸರ್ವ ಸತ್ತೆಯೂ **ಪುರುಷೋತ್ತಮನ** ಸತ್-ಧರ್ಮದೊಡನೆ ಏಕವರ್ತಿಯಾಗಬೇಕು ; ಸಾಧರ್ಮ್ಯವಾಗಬೇಕು ; ಎಲ್ಲವೂ ನನ್ನ ಪ್ರಜ್ಞಾಯುತ ಆಧ್ಯಾತ್ಮಿಕ ಸಂಭೂತಿಯಂತೆ ಪರಿವರ್ತಿತವಾಗಬೇಕು ; **ಮದ್ಭಾವವಾಗಬೇಕು.** ಸಂಪೂರ್ಣವಾದ ಶರಣಾಗತಿಯಿರಬೇಕು. ನಿನ್ನ ಸ್ವಭಾವದ ಬಹು ರೀತಿಗಳಲ್ಲಿ ಹಾಗೂ ಅದರ ಸಕಲ ಜೀವ-ಸ್ಫೂರ್ತ ರೇಖಾವಿನ್ಯಾಸಗಳಲ್ಲಿ ನನ್ನನ್ನೇ ಆಶ್ರಯಿಸು ; ಏಕೆಂದರೆ ಅದು ಮಾತ್ರ ಈ ಮಹಾ ಪರಿವರ್ತನೆಯನ್ನು, ಪರಿಪೂರ್ಣತೆಯನ್ನು ಸಿದ್ಧಿ ಮಾಡಿಕೊಡುವುದು.

"ಯೋಗದ ಈ ಪರಾಕಾಷ್ಠತೆಯು ಕರ್ಮಸಮಸ್ಯೆಯನ್ನು ಒಮ್ಮೆಲೇ ಬಗೆಹರಿಸುವುದು ಇಲ್ಲವೇ ಅದನ್ನು ಸಂಪೂರ್ಣವಾಗಿ ಬೇರುಸಹಿತ ನಿರ್ಮೂಲಮಾಡುವುದು. ಮಾನವೀಯ ಕರ್ಮವು ಎಡರು ತೊಡರುಗಳಿಂದ ತುಂಬಿದೆ, ಒಂದು ಅರಣ್ಯದಂತೆ ಹೆಣೆದುಕೊಂಡಿದೆ ; ಅದರ ಒಳಗೆ ಹೋಗಲು ಹೆಚ್ಚು ಕಡಿಮೆ ಅಸ್ಪಷ್ಟವಾದ ಒಂದೆರಡು ಜಾಡುಗಳಿದ್ದರೂ ಮುಂದೆ ದಾಟಿ ಹೋಗಲು ಮಾರ್ಗವಿಲ್ಲ. ಆದರೆ ಈ ಎಲ್ಲ ತೊಡಕು, ಗೊಂದಲ, ಒಂದೇ ಒಂದು ಕಾರಣದಿಂದ ಉದ್ಭವಿಸುತ್ತದೆ, ಅದೆಂದರೆ ಮಾನವನು ತನ್ನ ಮಾನಸಿಕ, ಪ್ರಾಣಿಕ, ಭೌತಿಕ ಪ್ರಕೃತಿಯ ಅಜ್ಞಾನದಲ್ಲಿ ಬಂದಿಯಾಗಿ ನಿವಸಿಸುತ್ತಿರುವುದು. ಆ ಪ್ರಕೃತಿಯ ಗುಣಗಳ ವಶವರ್ತಿಯಾಗಿರುತ್ತಾನೆ, ಆದರೂ ಅವನೊಳಗಿನ ಯಾವುದೋ ಒಂದು ಭಾಗವು, 'ತಾನು ಆತ್ಮ, ಈಗಿರುವಂತೆ ಇರತಕ್ಕದ್ದಲ್ಲ, ತನ್ನ ಪ್ರಕೃತಿಯ ಯಜಮಾನನಾಗಿರಬೇಕು, ನಿಯಾಮಕನಾಗಿರಬೇಕು' ಎಂದು ಭಾವಿಸುವುದರಿಂದ ಅವನು ತನ್ನ ಸಂಕಲ್ಪದ ಹೊಣೆಯನ್ನು ವ್ಯಥಿತನಾಗಿ ಮನಗಾಣುತ್ತಾನೆ. ಈ ಪರಿಸ್ಥಿತಿಗಳಲ್ಲಿ ಅವನ ಜೀವನ ನಿಯಮಗಳೆಲ್ಲ, ಅವನ ಧರ್ಮಗಳೆಲ್ಲ ಅಪೂರ್ಣವಾಗಿ, ತಾತ್ಕಾಲಿಕವಾಗಿ, ತಾತ್ಪೂರ್ತಿಕವಾಗಿ ಉಳಿಯಲೇಬೇಕು. ಬಹಳ ಹೆಚ್ಚೆಂದರೆ ಅರ್ಧಮರ್ಧ ಸತ್ಯ ಅಥವಾ ನೇರವಾಗಿರಬಹುದು. ತನ್ನನ್ನು ತಾನು ಅರಿತುಕೊಂಡಾಗಲೇ ಅವನ ಲೋಪದೋಷಗಳು ನಿಶ್ಶೇಷವಾಗುವುವು. ತಾನು ವಾಸಿಸುವ ಜಗತ್ತಿನ ನಿಜವಾದ ಸ್ವರೂಪವನ್ನೂ, ವಿಶೇಷವಾಗಿ, ಯಾರಿಂದ ತಾನು ಉದ್ಭವಿಸಿರುವನೋ, ಯಾರಲ್ಲಿ ಹಾಗೂ ಯಾರ ಆಧಾರದದಿಂದ ತಾನು ಅಸ್ತಿತ್ವದಲ್ಲಿರುವನೋ ಆ **ಸನಾತನನನ್ನು** ಅರಿತುಕೊಂಡಾಗಲೇ ಅವನ ಅಪೂರ್ಣತೆಗಳು ಕೊನೆಗಾಣುವವು.

ನಿಜವಾದ ಚೇತನವನ್ನೂ (ಪ್ರಜ್ಞೆಯನ್ನು) ಜ್ಞಾನವನ್ನೂ ಒಮ್ಮೆ ಸಾಧಿಸಿದ್ದೇ ಆದರೆ, ಆ ಮುಂದೆ ಸಮಸ್ಯೆ ಯಾವದೂ ಇಲ್ಲ; ಏಕೆಂದರೆ ಆಗ ಅವನು ಸ್ವತಃ ಸ್ಫೂರ್ತಿಯಿಂದ ಸ್ವತಂತ್ರನಾಗಿ ವರ್ತಿಸುತ್ತಾನೆ; ತನ್ನ ಆತ್ಮದ ಹಾಗೂ ಅತ್ಯುಚ್ಚ ಸ್ವಭಾವದ ಸತ್ಯದ ಮೇರೆಗೆ ಸಹಜವಾಗಿ ಸ್ವಯಂಪ್ರೇರಣೆಯಿಂದ ಜೀವನವನ್ನು ನಡೆಯಿಸುತ್ತಾನೆ. ಈ ಜ್ಞಾನದ ಉತ್ತುಂಗ ಶಿಖರದಲ್ಲಿ ಅದು ಸಮೃದ್ಧಿಯಿಂದ ತುಂಬಿಕೊಂಡಾಗ, ಕರ್ಮಗೈಯುವವನು ಅವನಲ್ಲ, ಭಗವಂತನೇ; ಅವನಲ್ಲಿ ಅವನ ಮುಖಾಂತರ ಅವನ ಮುಕ್ತ ಜ್ಞಾನ-ಶಕ್ತಿ-ಪೂರ್ಣತೆಗಳಲ್ಲಿ ಅನಂತನಾದ, ಸನಾತನ ನಾದ, ಏಕಮೇವಾದ್ವಿತೀಯನಾದ ಭಗವಂತನೇ ಕರ್ಮಗೈಯುವನು.

"ಮಾನವನು ತನ್ನ ಸ್ವಾಭಾವಿಕ ಸತ್ತೆಯಲ್ಲಿ ಸತ್ವರಜಸ್ತಮೋಗುಣೋಪೇತ ವಾದ **ಪ್ರಕೃತಿಯ** ಸಂತಾನನಾಗಿರುತ್ತಾನೆ. ಅವಳ ಗುಣಗಳಲ್ಲಿ ಯಾವ-ಗುಣವು ಪ್ರಧಾನವಾಗಿರುವುದೋ ಅದರಂತೆ ಒಂದು ಜೀವನ-ಕರ್ಮ ನಿಯಮವನ್ನು ಮಾಡಿ ಕೊಂಡು ತದನುಸಾರ ನಡೆಯುತ್ತಾನೆ. ಅವನ ತಾಮಸಿಕ, ಭೌತಿಕ, ಇಂದ್ರಿಯಾ ತ್ಮಕ ಮನವು ಜಡತ್ವ, ಭಯ, ಅಜ್ಞಾನಗಳಿಗೆ ಒಳಪಟ್ಟಿದ್ದು, ಅದರ ಪರಿಸರಣದ ನಿರ್ಬಂಧವನ್ನೂ ಹಾಗೂ ಅದರ ಆಶೆ-ಆಮಿಷಗಳ ಚಪಲಪ್ರವೃತ್ತಿಗಳನ್ನೂ ಅಲ್ಪ ಸ್ವಲ್ಪ ಅನುಲಕ್ಷಿಸುವುದು, ಅವುಗಳಿಗೆ ವಿಧೇಯವಾಗಿರುವುದು ಅಥವಾ ನೀರಸವಾದ ರೂಢಿ-ಬುದ್ಧಿಯ ನಿತ್ಯಕ್ರಮವನ್ನು ಆಶ್ರಯಿಸುವುದು. ಕಾಮಾಸಕ್ತ ರಜೋ-ಮನವು ತಾನು ವಾಸಿಸುವ ಜಗತ್ತಿನೊಡನೆ ಹೋರಾಡುವುದು, ಸದಾ ಹೊಸ ವಸ್ತುಗಳನ್ನು ಸಂಗ್ರಹಿಸಲು ಪ್ರಯತ್ನಿಸುವುದು; ಅದು ಆಜ್ಞೆಯನ್ನು ವಿಧಿಸಲು, ಯುದ್ಧವನ್ನು ಮಾಡಲು, ಗೆಲ್ಲಲು, ಸೃಜಿಸಲು, ನಾಶಗೊಳಿಸಲು, ಶೇಖರಿಸಲು ಹವಣಿಸುವುದು. ಆದರೆ ಎಲ್ಲೆಡೆ, ಅದು ಯಾವ ನಿಯಮ (ಸೂತ್ರ) ವನ್ನು ಒಪ್ಪಿಕೊಂಡಂತೆ ತೋರಿದರೂ, ನಿಜವಾಗಿ ಅದು ಅನುಸರಿಸುವುದು ಕೇವಲ ಕೆಳಗಿನ ಆತ್ಮ ಹಾಗೂ ಅಹಂಕಾರದ ಸೂತ್ರವನ್ನೇ; ಹೊಯ್ದಾಡುವ, ನಿರಲಸ 'ಆತ್ಮವಿನಾಶಕ' ಸರ್ವ ಭಕ್ಷಕ ಆಸುರೀ, ರಾಕ್ಷಸೀ ಪ್ರಕೃತಿಯ ಮನವನ್ನೇ ಅದು ಅವಲಂಬಿಸುತ್ತದೆ. ಸಾತ್ವಿಕ ಬುದ್ಧಿಯು ಈ ಸ್ಥಿತಿಯನ್ನು ಸ್ವಲ್ಪ ಮಟ್ಟಿಗೆ ಮೀರಿರುತ್ತದೆ. ಆಶೆ ಅಹಂ-ವೃತ್ತಿಗಳಿಗಿಂತ ಮಿಗಿಲಾದ ಧರ್ಮವನ್ನು ಅನುಸರಿಸಬೇಕೆಂದು ಅದು ಕಾಣುತ್ತದೆ. ಒಂದು ಸಾಮಾಜಿಕ, ನೈತಿಕ, ಧಾರ್ಮಿಕ ನಿಯಮವನ್ನು, ಒಂದು **ಧರ್ಮವನ್ನೇ,** ಒಂದು **ಶಾಸ್ತ್ರವನ್ನೇ** ಅದು ರಚಿಸಿ, ನಿರ್ಮಿಸಿ, ತನ್ನ ಮೇಲೆಯೇ ಹೊರಿಸಿಕೊಳ್ಳು ವುದು. ಒಂದು ಆದರ್ಶ ಅಥವಾ ವ್ಯಾವಹಾರಿಕ ನಿಯಮವನ್ನು ಮನದ ಹಾಗೂ ಸಂಕಲ್ಪದ ಮಾರ್ಗದರ್ಶನಕ್ಕೆಂದು ಕಲ್ಪಿಸಿ ಅದನ್ನು ಜೀವನದಲ್ಲಿ ಹಾಗೂ ನಡತೆ ಯಲ್ಲಿ ಸಾಧ್ಯವಿದ್ದಷ್ಟು ಶ್ರದ್ಧೆಯಿಂದ ಪಾಲಿಸುವುದು, ಮಾನವನ ಸಾಧಾರಣ ಮನದ ಉಚ್ಚಸ್ಥಿತಿಯಾಗಿದೆ. ಈ ಸಾತ್ವಿಕ ಬುದ್ಧಿಯು ತನ್ನ ಅತ್ಯುಚ್ಚಮಟ್ಟದಲ್ಲಿ ಅರಳಬೇಕು. ಆಗ ಅದು ಅಹಂ-ಮಿಶ್ರಿತ ಪ್ರೇರಣೆಯನ್ನು ಸಂಪೂರ್ಣವಾಗಿ

ನಿರಾಕರಿಸಿ, ಧರ್ಮವನ್ನು ಒಂದು ಸಾಮಾಜಿಕ, ನೈತಿಕ, ಧಾರ್ಮಿಕ ಆದರ್ಶವೆಂದು ಬಗೆದು ಅದನ್ನು ಆಚರಿಸುವುದು. ಇದನ್ನು ಕೇವಲ ಋತವೆಂದೂ, 'ಕರ್ತ್ಯವ್ಯಂ ಕರ್ಮ' ವೆಂದೂ, ನಿಸ್ವಾರ್ಥ ನಿಷ್ಕಾಮ ಬುದ್ಧಿಯಿಂದ ನಿರ್ವಹಿಸತಕ್ಕದ್ದು.

"ಪ್ರಕೃತಿಯ ಈ ಎಲ್ಲ ಕ್ರಿಯೆಯು ನಿಜವಾದ ಸತ್ಯವು ಹೊರತೋರಿಕೆಗೆ ಅಲ್ಪಾಂಶದಲ್ಲಿ ಮನಃಪ್ರವೃತ್ತವಾಗಿದ್ದು, ಅಂತರ್ಯದಲ್ಲಿ ಅಧಿಕಾಂಶವಾಗಿ ಆತ್ಮ ಕೇಂದ್ರೀಯವಾಗಿರುತ್ತದೆ. ಆ ಸತ್ಯವಾವುದೆಂದರೆ, ಮಾನವನು ದೇಹಧಾರಿಯಾದ ಆತ್ಮನು, ಭೌತಿಕ-ಮಾನಸಿಕ ಪ್ರಕೃತಿಯಲ್ಲಿ ನಿವರ್ತನಕ್ಕೊಳಗಾಗಿರುವನು, ತನ್ನ ಸತ್ತೆಯ ಒಂದಾನೊಂದು ಆಂತರಿಕ ನಿಯಮದಿಂದ ನಿರ್ಧರಿಸಿದ ಒಂದು ಕ್ರಮಿಕ ವಿಕಾಸ ಧರ್ಮವನ್ನು ಅವನು ಅನುಸರಿಸುವನು, ಅವನ ಆತ್ಮದ ರೂಪ-ರೀತಿ ಗಳಂತೆ ಅವನ ಮನ-ಪ್ರಾಣದ ರೂಪ-ರೀತಿಗಳಿರುವವು, ಅವನ ಸ್ವಭಾವವು ಹಾಗೇ ಮೂಡುವುದು. ಪ್ರತಿಯೊಬ್ಬ ಮಾನವನಿಗೂ ಒಂದು ಸ್ವಧರ್ಮವಿದೆ, ಅವನು ನಿರೀ-ಕ್ಷಿಸಬೇಕಾದ, ಕಂಡುಹಿಡಿದು ಅನುಸರಿಸಬೇಕಾದ ಅಂತಃಪುರುಷನ ನಿಯಮವಿದೆ. ಅವನ ಆಂತರಿಕ ಸ್ವಭಾವದಿಂದ ನಿರ್ಧಾರವಾದುದೇ ಅವನ ನಿಜವಾದ **ಧರ್ಮ.** ಅದಕ್ಕೆ ಅನುಗುಣವಾಗಿ ವರ್ತಿಸುವುದೇ ಅವನ ವಿಕಾಸದ ನಿಜವಾದ ಸೂತ್ರ: ಅದನ್ನು ಬಿಟ್ಟು ನಡೆಯುವುದೆಂದರೆ ಮತಿವಿಭ್ರಮಣ, ಆಲಸ್ಯ, ಪ್ರಮಾದಗಳಿಗೆ ಅವಕಾಶಕೊಡುವುದು. ತನ್ನ **ಸ್ವಧರ್ಮ**ವನ್ನು ಕಂಡು ಆಚರಿಸಲು ನೆರವಾಗುವ ಸಾಮಾಜಿಕ, ನೈತಿಕ, ಧಾರ್ಮಿಕ ಅಥವಾ ಇತರ ಸೂತ್ರ ಹಾಗೂ ಆದರ್ಶವೇ ಅವನಿಗೆ ಎಂದಿಗೂ ಉತ್ತಮವಾದುದಾಗಿದೆ.

"ಈ ಕರ್ಮವೆಲ್ಲ, ಅದರ ಉತ್ತಮ-ದೆಸೆಯಲ್ಲಿ ಸಹ ಮನದ ಅಜ್ಞಾನಕ್ಕೆ ಸತ್ವ ರಜಸ್ತಮೋಗುಣಗಳ ಪಾಟವಕ್ಕೆ ಅಧೀನವಾಗಿರುತ್ತದೆ. ಮಾನವನ ಆತ್ಮವು ತನ್ನನ್ನು ತಾನು ಕಂಡುಕೊಂಡಾಗಲೇ ಮಾನವನು ಈ ಗುಣಗಳ ಚಿತ್ತವಿಭ್ರಮಣ-ವನ್ನೂ, ಅಜ್ಞಾನವನ್ನೂ ಅತಿಕ್ರಮಿಸಿ ತನ್ನ ಚೇತನದಿಂದ ತೊಡೆದುಹಾಕಲು ಸಮರ್ಥನಾಗುತ್ತಾನೆ. ನೀನು ನಿನ್ನನ್ನು ಕಂಡುಕೊಂಡಾಗಲೂ ನೀನು ಆತ್ಮಾನು ವರ್ತಿಯಾದಾಗಲೂ, ನಿನ್ನ ಪ್ರಕೃತಿಯು ಹಳೆಯ ಜಾಡಿನಲ್ಲಿಯೇ ನಡೆದು ಸ್ವಲ್ಪ ಕಾಲ ತನ್ನ ಕೀಳು ಬಗೆಗಳನ್ನೇ ಅನುಸರಿಸುವುದು. ಆದರೆ ಈಗ ನೀನು ಅಂಥ ಕರ್ಮವನ್ನು ಪೂರ್ಣ ಆತ್ಮಜ್ಞಾನದಿಂದ ಸಲ್ಲಿಸಬಲ್ಲೆ, ನಿನ್ನ ಅಸ್ತಿತ್ವದ ಪ್ರಭುವಿಗೆ ಅದನ್ನು ಯಜ್ಞಾರ್ಥವಾಗಿ ಅರ್ಪಿಸಬಲ್ಲೆ. ಅಂದಮೇಲೆ ನಿನ್ನ **ಸ್ವಧರ್ಮದ** ಸೂತ್ರದಂತೆ ನಡೆ; ನಿನ್ನ **ಸ್ವಭಾವವು** ಬೇಡತಕ್ಕ ಕರ್ಮವನ್ನು, ಅದು ಏನೇ ಇರಲಿ, ನಿರ್ವಹಿಸುವವನಾಗು. ಅಹಂ.ಪ್ರೇರಣೆಯನ್ನು ನಿರಾಕರಿಸು; ವೈಯಕ್ತಿಕ ಹಠದಿಂದ ಕಾರ್ಯಾರಂಭವನ್ನು ಮಾಡಬೇಡ; ಆಶೆಗೆ ಒಳಗಾಗಬೇಡ. ನಿನ್ನ ಸತ್ತೆಯ ಸರ್ವ ವ್ಯಾಪಾರಗಳನ್ನೂ ಪರಮಾತ್ಮನಿಗೆ ಸಂಪೂರ್ಣವಾಗಿ ಅರ್ಪಿಸಲು ಅರ್ಹನಾಗುವವರೆಗೆ ಹೀಗೆ ನಡೆ.

" ನಿಷ್ಕಪಟ ಶ್ರದ್ಧೆಯಿಂದ ನೀನು ಒಮ್ಮೆ ಹೀಗೆ ಮಾಡಬಲ್ಲೆಯಾದರೆ, ನಿನ್ನೊಳಗಿರುವ ಪರಮೇಶ್ವರನ ಹಸ್ತಗಳಿಗೆ ಅಪವಾದವಿಲ್ಲದೆ ಎಲ್ಲವನ್ನೂ ಬಿಟ್ಟುಕೊಡುವ, ಸರ್ವಾರಂಭವನ್ನು ಪರಿತ್ಯಜಿಸುವ, ಮುಹೂರ್ತವು ಒದಗುವುದು. ಆಗ ನೀನು ಎಲ್ಲ ನಡತೆ-ನಿಯಮಗಳಿಂದ ಬಿಡುಗಡೆಯಾಗುವೆ, ಎಲ್ಲ ಧರ್ಮಗಳಿಂದ ವಿಮುಕ್ತನಾಗುವೆ. ನಿನ್ನೊಳಗಿನ **ದೈವೀ ಶಕ್ತಿ-ಸಾನ್ನಿಧ್ಯಗಳು** ನಿನ್ನನ್ನು ಪಾಪ-ಅಶುಭಗಳಿಂದ ತಪ್ಪಿಸಿ, ನಿನ್ನನ್ನು ಮಾನವೀ ಶೀಲ-ಸಭ್ಯತೆಗಳ ಪ್ರಮಾಣಗಳ ಆಚೆ ಬಹು ಮೇಲೆ ಒಯ್ಯುವುವು. ಏಕೆಂದರೆ ನೀನು ಆಧ್ಯಾತ್ಮಿಕ ಸತ್ತೆಯ, ದೈವೀ ಪ್ರಕೃತಿಯ ಕೇವಲ ಹಾಗೂ ಅಂತಃಸ್ಫುರಿತ ಋಜುತ್ವ-ಪರಿಶುದ್ಧತೆಗಳಲ್ಲಿ ಬದುಕಿ ಬಾಳುವೆ. ಭಗವಂತನೇ-ನೀನಲ್ಲ-ನಿನ್ನ ಮುಖಾಂತರ ತನ್ನ ಸಂಕಲ್ಪವನ್ನೂ ಕ್ರಿಯಾಕಲಾಪಗಳನ್ನೂ ನಡೆಯಿಸುವನು. ನಿನ್ನ ಕೀಳು ವೈಯಕ್ತಿಕ ಆಶೆ-ಸಂತೋಷಗಳ ತೃಪ್ತಿಗಾಗಿಯಲ್ಲ, ಆದರೆ ವಿಶ್ವದ ಉದ್ದೇಶಕ್ಕಾಗಿ, ಅಗತ್ಯಕ್ಕಾಗಿ, ನಿನ್ನ ದೈವೀ ಕಲ್ಯಾಣಕ್ಕಾಗಿ ಹಾಗೂ ಸರ್ವರ ಪ್ರತ್ಯಕ್ಷ ಅಥವಾ ರಹಸ್ಯ ಹಿತಾರ್ಥವಾಗಿ. ಪ್ರಕಾಶದಿಂದ ಅಂಗಾಂಗದಲ್ಲಿ ತುಂಬಿದವನಾಗಿ, ಜಗತ್ತಿನಲ್ಲಿ, **ಕಾಲ**ನ ಕೃತಿಗಳಲ್ಲಿ, ಪರಮೇಶ್ವರನ ರೂಪವನ್ನು ಕಾಣುವೆ, ಅವನ ಉದ್ದೇಶವನ್ನು ಅರಿಯುವೆ, ಅವನ ಆದೇಶವನ್ನು ಕೇಳುವೆ. ನಿನ್ನ ಸ್ವಭಾವವು ಒಂದು ಉಪಕರಣವಾಗಿ ಅವನ ಸಂಕಲ್ಪವನ್ನು ಪರಿಗ್ರಹಿಸುವುದು, ಮರುಪ್ರಶ್ನೆಯಿಲ್ಲದೆ ಅದನ್ನು ನಿರ್ವಹಿಸುವುದು ; ಏಕೆಂದರೆ ನಿನ್ನ ಕೃತಿ ಒಂದೊಂದರ ಆರಂಭದ ಜೊತೆಯಲ್ಲಿಯೇ ಮೇಲಿನಿಂದ, ನಿನ್ನ ಅಂತರಾಳದಿಂದ ಒಂದು ಅಸಂದಿಗ್ಧವಾದ ಆಜ್ಞಾ-ಪರವಾದ ಜ್ಞಾನವೂ, ದೈವೀಜ್ಞಾನ ಹಾಗೂ ಅದರ ಮಹತ್ವವನ್ನು ಸ್ವಾಗತಿಸುವ ಪ್ರದೀಪ್ತ ಅನುಮತಿಯೂ ಹೊರಹೊಮ್ಮುವುವು. ಯುದ್ಧವು ಅವನದೇ, ಅವನದೇ ವಿಜಯ, ಅವನದೇ ಸಾಮ್ರಾಜ್ಯ.

## ಪರಮ ಮಾರ್ಗ

" ಇಹದಲ್ಲಿ, ಈ ಶರೀರದಲ್ಲಿ ಇದೇ ನಿನ್ನ ಪರಿಪೂರ್ಣತೆಯು ; ಹಾಗೂ ಕಾಲ-ಸೃಷ್ಟಿಸ್ವರೂಪದ ಈ ಲೋಕಗಳ ಆಚೆ ಪರಮ ಶಾಶ್ವತ ಅತಿಚೇತನವು ನಿನ್ನದಾಗುವುದು. ಪರಮ ಪುರುಷನ ಅತ್ಯುಚ್ಚ ಧಾಮದಲ್ಲಿ ನೀನು ಶಾಶ್ವತವಾಗಿ ನೆಲಸುವವನಾಗುವೆ. ಜನನ ಪರಂಪರೆಗಳು ಹಾಗೂ ಮೃತ್ಯುವಿನ ಭೀತಿ ನಿನ್ನನ್ನು ಪರಿತಪಿಸುವುದಿಲ್ಲ. ಏಕೆಂದರೆ ನೀನು ಇಹಜೀವನದಲ್ಲಿಯೇ ಪರಮೇಶ್ವರನ ಅಭಿವ್ಯಕ್ತಿಯನ್ನು ಸಾಧಿಸಿದವನಾಗುವೆ. ನಿನ್ನ ಆತ್ಮವು, ಮನ-ಪ್ರಾಣಗಳಲ್ಲಿ ಇಳಿದು ಬಂದಿದ್ದರೂ ಅದು ಆಗಾಗಲೇ ಪರಮ ಪುರುಷನ ಬೃಹತ್-ಶಾಶ್ವತತೆಯಲ್ಲಿ ವಾಸಿಸುತ್ತಿರುವುದಾಗಿ ಇರುತ್ತದೆ.

" ಇದೇ ಪರಮ ಗತಿಯು. ಇದೇ ನಿನ್ನ ಸಮಗ್ರ ಆತ್ಮ ಹಾಗೂ ಪ್ರಕೃತಿಯ ಸಂಪೂರ್ಣ ಶರಣಾಗತಿಯು. ಇದೇ ನಿನ್ನ ಅತ್ಯುಚ್ಚ ಆತ್ಮನಾದ ಭಗವಂತನನ್ನು

ಆಶ್ರಯಿಸಿ, ಸರ್ವಧರ್ಮಗಳನ್ನೂ ಬಿಟ್ಟುಕೊಡುವುದು. ನಿನ್ನ ಸರ್ವಾಂಗಗಳ ಪರಮ ಆಧ್ಯಾತ್ಮಿಕ ಪ್ರಕೃತಿಯನ್ನು ಅನುಲಕ್ಷಿಸಿದ ಕೇವಲ ಅಭೀಪ್ಸೆಯು ಇದೇ. ಆರಂಭದಲ್ಲಿಯೇ ಆಗಲಿ, ಅಥವಾ ತರುವಾಯ ಮಾರ್ಗ ಕ್ರಮದಲ್ಲಿಯಾಗಲಿ. ನೀನು ಒಮ್ಮೆ ಇದನ್ನು ಸಾಧಿಸಿದ್ದಾದರೆ, ಆಗ ನೀನು ನಿನ್ನ ಬಾಹ್ಯ ಪ್ರಕೃತಿಯಲ್ಲಿ ಏನೇ ಇದ್ದರೂ ಆಥವಾ ಆಗಿದ್ದರೂ ನಿನ್ನ ಪಥವು ನಿಶ್ಚಿತವಾಗಿರುವುದು, ನಿನ್ನ ಪರಿಪೂರ್ಣತೆಯು ಅನಿವಾರ್ಯವಾಗಿರುವುದು. ನಿನ್ನ ಅಂತರ್ಗತವಾದ ಪರಮ **ಸಾನ್ನಿಧ್ಯ**ವೊಂದು ನಿನ್ನ ಯೋಗವನ್ನು ವಹಿಸಿ, ಅದನ್ನು ನಿನ್ನ ಸ್ವಭಾವದ ಮೇರೆಗೆ ಅಧರ ಕೃತಕೃತ್ಯ ಪೂರ್ಣತೆಗೆ ವೇಗವಾಗಿ ಕೊಂಡೊಯ್ಯುವುದು. ಆ ತರುವಾಯ ನಿನ್ನ ಜೀವನದ ಬಗೆಯು, ಕರ್ಮದ ವಿಧಾನವು ಏನೇ ಇರಲಿ ನೀನು ಪ್ರಜ್ಞಾಯುತವಾಗಿ **ಅವನಲ್ಲಿ** ಜೀವಿಸುವವನಾಗುವೆ, ಕರ್ಮಗೈಯುವವನಾಗುವೆ, ಚಲಿಸುವವನಾಗುವೆ. ಹಾಗೂ **ದೈವೀ ಶಕ್ತಿಯು** ನಿನ್ನ ಮುಖಾಂತರ ನಿನ್ನ ಪ್ರತಿಯೊಂದು ಆಂತರಿಕ-ಬಾಹ್ಯ ಗತಿಯಲ್ಲಿ ಕ್ರಿಯೆ ಎಸಗುವುದು. ಇದೇ ಪರಮ ಮಾರ್ಗವು. ಏಕೆಂದರೆ ಇದೇ ಅತ್ಯುಚ್ಚ ರಹಸ್ಯವೂ, ನಿಗೂಢ ತತ್ತ್ವವೂ ಆಗಿದೆ. ಹೀಗಿದ್ದರೂ ಇದು ಕ್ರಮವಾಗಿ ಎಲ್ಲರೂ ಪಡೆಯಬಹುದಾದ ಆಂತರಿಕ ಗತಿಯಾಗಿದೆ. ನಿನ್ನ ನಿಜವಾದ, ನಿನ್ನ ಆಧ್ಯಾತ್ಮಿಕ ಅಸ್ತಿತ್ವದ ಅತ್ಯಂತ ಆಳವಾದ, ಅತ್ಯಂತ ನಿಕಟವಾದ **ಸತ್ಯವು** ಇದೇ ಆಗಿದೆ.

ಅನುವಾದಕರು: ಶ್ರೀ. ಅ. ವೆಂಕಪ್ಪಶಾಸ್ತ್ರಿ
ಮತ್ತು
ಶ್ರೀ. ಗು. ಭೀ. ಜೋಶಿ

ಶ್ರೀ ಅರವಿಂದ ಮತ್ತು ಶ್ರೀ ಮಾತಾ ಮಂಡಲ, ಹುಬ್ಬಳ್ಳಿ

## ಪ್ರಕಟಣೆಗಳು

| | | |
|---|---|---|
| ಸಮರ್ಪಣ | ೧ | 5-0-0 |
| ,, | ೨ | 3-0-0 |
| ,, | ೩ | 3-0-0 |
| ,, | ೪ | 3-0-0 |
| ,, | ೫ | 2-0-0 |
| ಶಿಕ್ಷಣ : | ಶ್ರೀ ಮಾತಾಜಿ | 1-8-0 |
| ಭಾರತ ಹಾಗೂ ಜಾಗತಿಕ ಭವಿತವ್ಯ | | 0-4-0 |